ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೨೫
ಸಾಹಿತ್ಯಮಾಲೆ - ೨೪

ಪ್ರಧಾನ ಸಂಪಾದಕರು
ಡಾ. ಪ್ರಧಾನ್ ಗುರುದತ್ತ

ಸಂಪಾದಕರು
ಡಾ. ಪಿ. ಎಸ್. ರಾಮಾನುಜಂ

# ಕಥಾಸರಿತ್ಸಾಗರ

(ಸಂಪುಟ ೩)

(ಲಂಬಕಗಳು: ನರವಾಹನದತ್ತಜನನ ಮತ್ತು ಚತುರ್ದಾರಿಕಾ)

# ಕಥಾಸರಿತ್ಸಾಗರ

(ಸಂಪುಟ ೨)

(ಲಂಬಕಗಳು: ನರವಾಹನದತ್ತಜನನ ಮತ್ತು ಚತುರ್ದಾರಿಕಾ)

ಸಂಸ್ಕೃತ ಮೂಲ

**ಸೋಮದೇವ ಭಟ್ಟ**

ಕನ್ನಡ ಅನುವಾದ

**ಎಚ್.ವಿ. ನಾಗರಾಜರಾವ್**

**ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ**

ಕನ್ನಡ ಭವನ, ಜೆಸಿ. ರಸ್ತೆ ಬೆಂಗಳೂರು – ೫೬೦ ೦೦೨

**Kathā Sarit-sāgara (Vol. 3)** by **Somadeva Bhatta**, consisting Books 4 & 5 (**Naravahanadattajanana** and **Chaturdaarikaa**); Kannada translation by **H. V. Nagaraja Rao**; Editor-in-Chief: **Dr. Pradhan Gurudatta**; General Editor of the series: **Dr. P. S. Ramanujam;** Published by **Registrar**, **Karnataka Anuvada Sahitya Academy**, Kannada Bhavana, J.C. Road, Bangalore - 560 002. 2007; Pp. xvi + 226; Price: Rs. 80/-.



ಮುದ್ರಣ : ೨೦೦೭
ಪುಟಗಳು : xvi + ೨೨೬
ಬೆಲೆ : ರೂ. ೮೦/–
ಪ್ರತಿಗಳು : ೩೦೦

ಪ್ರಕಾಶಕರು :
**ಪಿ. ನಾರಾಯಣಸ್ವಾಮಿ**
ರಿಜಿಸ್ಟ್ರಾರ್
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು
ದೂ : ೨೨೧೦೭೭೭೦

ಸಹಕಾರ :
**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಬೆಂಗಳೂರು

ಮುಖಪುಟ ವಿನ್ಯಾಸ ಮತ್ತು ಚಿತ್ರ : **ವಿಶ್ವನಾಥ್**

**ISBN : 978-81-905692-1-7**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆಡ್ಸ್**
ನಂ. ೬೯, ಸುಬೇದಾರ್‌ಛತ್ರಂ ರೋಡ್
ಬೆಂಗಳೂರು – ೫೬೦೦೨೦ ದೂ : ೨೩೩೪೨೭೨೪

ಹೆಚ್.ಡಿ. ಕುಮಾರಸ್ವಾಮಿ
ಮುಖ್ಯಮಂತ್ರಿಗಳು

ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೧೫.೦೩.೨೦೦೭

# ಮುನ್ನುಡಿ

ಕರ್ನಾಟಕ ರಾಜ್ಯ ಪುನರ್ ಘಟನೆಯ ಐವತ್ತು ವರ್ಷಗಳ ನೆನಪಿಗಾಗಿ ಕರ್ನಾಟಕ ಸರ್ಕಾರ 'ಸುವರ್ಣ ಕರ್ನಾಟಕ'ದ ಸಂಭ್ರಮಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂದು ನಿರ್ಧರಿಸಿತು. ಈ ಹೊತ್ತಿಗೆ ಸರಿಯಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಯ ಮೂಲಕ ಕರ್ನಾಟಕ ಸರ್ಕಾರ ಇನ್ನೊಂದು ಹೊಸ ಹೆಜ್ಜೆಯನ್ನೂ ಇಟ್ಟಿತ್ತು. ಭಾರತೀಯ ಭಾಷೆಗಳ ನಡುವಣ ಪಾರಸ್ಪರಿಕ ಅರಿವನ್ನು ಹೆಚ್ಚಿಸುವುದರ ಜೊತೆಗೆ, ನಮ್ಮ ನಾಡು–ನುಡಿಗಳ ಹಿರಿಮೆಯನ್ನು ಇತರ ಭಾಷಾ–ಬಾಂಧವರಿಗೆ ಹಾಗೂ ಜಾಗತಿಕ ನೆಲೆಯಲ್ಲಿ ಪರಿಚಯಿಸಿ ಕೊಡುವುದು ಮತ್ತು ಜಗತ್ತಿನ ಇತರ ಭಾಷೆಗಳ ಶ್ರೇಷ್ಠ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸುವುದು ಇದರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಅನುವಾದ ಸಾಹಿತ್ಯ ಈ ಹೊತ್ತು ಸಾಹಿತ್ಯ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲದಿರುವುದರಿಂದ, ಜ್ಞಾನ–ವಿಜ್ಞಾನ– ತಂತ್ರಜ್ಞಾನಗಳ ಕ್ಷೇತ್ರಗಳನ್ನು ಒಳಗೊಂಡಂತೆ ವಿವಿಧ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ತರುವುದೂ ಇದರಲ್ಲಿ ಸೇರಿದೆ. ಇದರಿಂದ ಐತಿಹಾಸಿಕ ಹಿರಿಮೆಯ ಜೊತೆಗೆ, ಕನ್ನಡದ ಸಾಮರ್ಥ್ಯ, ವೈಶಿಷ್ಟ್ಯ, ಹಿರಿಮೆಗಳು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟಗಳಲ್ಲಿ ಕಂಗೊಳಿಸುವಂತಾಗುತ್ತದೆ.

'ಸುವರ್ಣ ಕರ್ನಾಟಕ' ಸಂಭ್ರಮದ ಸಂದರ್ಭದಲ್ಲಿ, ಈ ಹಿಂದೆ ನಾಡು ನುಡಿಗೆ ಸೇವೆಯನ್ನು ಸಲ್ಲಿಸಿರುವ ಹಿರಿಯ ಚೇತನಗಳು ಸ್ವಪ್ರೇರಣೆಯಿಂದ ಕನ್ನಡಕ್ಕೆ ತಂದುಕೊಟ್ಟಿರುವ ಶ್ರೇಷ್ಠ ಕೃತಿಗಳಲ್ಲಿ ಆಯ್ದ ಗ್ರಂಥಗಳನ್ನು 'ಸುವರ್ಣ ಅನುವಾದ ಮಾಲೆಯ' ಅಂಗವಾಗಿ ಹೊರತರಲಾಗುತ್ತಿದೆ. ಅಂತೆಯೇ, ಇತರ ಭಾಷೆಗಳಲ್ಲಿನ ಹಾಗೂ ವಿಶ್ವದಲ್ಲಿನ ಶ್ರೇಷ್ಠ ಕೃತಿಗಳನ್ನೂ ಪರಿಚಯಿಸಿ ಕೊಡಲಾಗುತ್ತಿದೆ. ಇವು ಕನ್ನಡಿಗರಿಗೆ ಪ್ರಿಯವಾಗುತ್ತವೆಂದು ನಂಬಿದ್ದೇನೆ. ಈ ಕೃತಿಗಳನ್ನು ಸಹೃದಯತೆಯಿಂದ ಸ್ವಾಗತಿಸುವ ಮೂಲಕ, ಅನುವಾದ ಸಾಹಿತ್ಯ ಅಕಾಡೆಮಿಯ ಇಂಥ ಕೆಲಸಗಳಿಗೆ ಕನ್ನಡ ನಾಡಿನ ಜನತೆ ಪ್ರೋತ್ಸಾಹ ನೀಡುತ್ತದೆ ಎಂದು ಭಾವಿಸಿದ್ದೇನೆ.

(ಹೆಚ್.ಡಿ. ಕುಮಾರಸ್ವಾಮಿ)

೫೦ ಕರ್ನಾಟಕ
KARNATAKA

**ಹೆಚ್.ಎಸ್. ಮಹದೇವ ಪ್ರಸಾದ್**
ಕನ್ನಡ ಮತ್ತು ಸಂಸ್ಕೃತಿ ಸಚಿವರು

ಕರ್ನಾಟಕ ಸರ್ಕಾರ

ನಂ. ೩೩೦, ೩ನೇ ಮಹಡಿ,
ವಿಧಾನಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೦೮–೦೨–೨೦೦೬

## ಶುಭಾಕಾಂಕ್ಷೆ

ಕರ್ನಾಟಕ ರಾಜ್ಯದಲ್ಲಿ ಮೊಟ್ಟಮೊದಲ ಬಾರಿಗೆ ಅಸ್ತಿತ್ವಕ್ಕೆ ಬಂದಿರುವ ಅನುವಾದ ಸಾಹಿತ್ಯ ಅಕಾಡೆಮಿ, ರಾಷ್ಟ್ರದಲ್ಲಿಯೇ ಇಂಥ ಆದ್ಯ ಸಂಸ್ಥೆಯಾಗಿದ್ದು ಅನೇಕ ಮಹತ್ವಪೂರ್ಣ ಯೋಜನೆಗಳನ್ನು ಕೈಗೊಂಡು, ಕನ್ನಡ ಸಾಹಿತ್ಯ ಮತ್ತು ಜ್ಞಾನ–ವಿಜ್ಞಾನ ಕ್ಷೇತ್ರಕ್ಕೆ ಅರ್ಥಪೂರ್ಣವಾದ ಕೊಡುಗೆಗಳನ್ನು ನೀಡುವ ಹಂಬಲವನ್ನು ಹೊಂದಿದೆ. ಇದರ ಸ್ಥಾಪನೆಯ ತರುಣದಲ್ಲಿಯೇ ಕರ್ನಾಟಕ ರಾಜ್ಯದ ಸುವರ್ಣ ಸಂಭ್ರಮದ ಉತ್ಸವವೂ ಕೂಡಿಬಂದಿರುವ ಕಾರಣದಿಂದಾಗಿ, ಅನುವಾದ ಸಾಹಿತ್ಯ ಅಕಾಡೆಮಿ ಗಾಂಧೀಜಿ, ನೆಹರೂ ಇಂಥ ಶ್ರೇಷ್ಠ ವ್ಯಕ್ತಿಗಳನ್ನು ಕುರಿತ ಮಹತ್ವದ ಕೃತಿಗಳನ್ನೇ ಅಲ್ಲದೆ, ವಿವಿಧ ಭಾಷೆಗಳಲ್ಲಿನ ಅತ್ಯುತ್ತಮ ಸಾಹಿತ್ಯ ಗ್ರಂಥಗಳನ್ನು ಮತ್ತು ಇತರ ಕೃತಿಗಳನ್ನು ಕನ್ನಡಿಗರಿಗೆ ಒದಗಿಸುವ ಕಾರ್ಯವನ್ನು ಹಮ್ಮಿಕೊಂಡಿರುವುದು ನನಗೆ ತುಂಬಾ ಸಂತೋಷವನ್ನು ಉಂಟುಮಾಡಿದೆ. ಇದರಲ್ಲಿ ದೇಶ–ವಿದೇಶಗಳ ಕಥೆ–ಕಾದಂಬರಿಗಳೂ, ನಾಟಕಗಳೂ, ಮಕ್ಕಳ ಸಾಹಿತ್ಯ, ವಿಜ್ಞಾನ ಸಾಹಿತ್ಯ ಮುಂತಾದ ಹಲವು ಕ್ಷೇತ್ರಗಳ ಕೃತಿಗಳೂ ಸೇರಿದ್ದು, ಕನ್ನಡಿಗರಿಗೆ ವೈವಿಧ್ಯಮಯ ಅನುಭವವನ್ನು ತಂದುಕೊಡುವಲ್ಲಿ ನೆರವಾಗುತ್ತವೆ ಎಂದು ನಂಬಿದ್ದೇನೆ. ಈ ಮಾಲೆಯಲ್ಲಿ ಈ ಬಗೆಯ ಇನ್ನೂ ಅನೇಕ ಕೃತಿಗಳು ಮುಂದಿನ ದಿನಗಳಲ್ಲಿ ಕನ್ನಡಿಗರಿಗೆ ದೊರೆಯಲಿವೆ ಎಂಬ ವಿಚಾರ ನನಗೆ ಹೆಚ್ಚಿನ ಸಂತೋಷವನ್ನು ಉಂಟುಮಾಡಿದೆ. ಇದೇ ರೀತಿ ಕನ್ನಡದ ಶ್ರೇಷ್ಠ ಕೃತಿಗಳನ್ನು ಇತರ ಭಾರತೀಯ ಭಾಷೆಗಳಿಗೆ ಹಾಗೂ ವಿದೇಶೀ ಭಾಷೆಗಳಿಗೆ ಅನುವಾದಿಸಿ ಕೊಡುವ ಕಾರ್ಯಗಳೂ ಸಾಕಷ್ಟು ಪ್ರಮಾಣದಲ್ಲಿ ನಡೆದು ಕನ್ನಡಿಗರ ಸಾಧನೆ ಜಗತ್ತಿಗೆ ಚೆನ್ನಾಗಿ ತಿಳಿದುಬರುವಂಥ ಸಾರ್ಥಕ ಪ್ರಯತ್ನಗಳು ನಡೆಯಲಿ ಎಂದು ಹಾರೈಸುತ್ತೇನೆ.

ಈಗ ಹೊರಬರುತ್ತಿರುವ ಕೃತಿಗಳಿಗೆ ಕನ್ನಡ ವಾಚಕಲೋಕದ ಸಹೃದಯಪೂರ್ಣ ಸ್ವಾಗತ ದೊರೆಯುತ್ತದೆಂದು ನಂಬಿದ್ದೇನೆ. ಇಂಥ ಸ್ವಾಗತ ಮತ್ತು ಪ್ರೋತ್ಸಾಹಗಳು ಅಕಾಡೆಮಿಯ ಮುಂದಿನ ಕಾರ್ಯಚಟುವಟಿಕೆಗಳಿಗೆ ಪ್ರೇರಣೆಯನ್ನೊದಗಿಸಲಿ ಎಂದು ಹಾರೈಸುತ್ತೇನೆ.

ಹೆಚ್. ಎಸ್. ಮಹದೇವ ಪ್ರಸಾದ್

**(ಹೆಚ್.ಎಸ್. ಮಹದೇವ ಪ್ರಸಾದ್)**

೫೦ ಕರ್ನಾಟಕ
KARNATAKA

ಕರ್ನಾಟಕ ಸರ್ಕಾರ

ಕಛೇರಿ : ೨೨೨೫೫೪೮೨
೨೨೦೩೪೦೦೭

**ಐ.ಎಂ. ವಿಠ್ಠಲಮೂರ್ತಿ**, ಭಾ.ಆ.ಸೇ.
ಸರ್ಕಾರದ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

ಕರ್ನಾಟಕ ಸರ್ಕಾರದ ಸಚಿವಾಲಯ
ಕೊ.ನಂ.೫, ನೆಲಮಹಡಿ, ವಿಕಾಸಸೌಧ,
ಬೆಂಗಳೂರು–೫೬೦ ೦೦೧

# ಹೊಸ ಹೆಜ್ಜೆ

ರಾಷ್ಟ್ರಕವಿ ಶ್ರೀ ಕುವೆಂಪು ಅವರ ಹೆಸರಿನಲ್ಲಿ ಸ್ಥಾಪಿಸಲಾಗುತ್ತಿರುವ 'ಶ್ರೀ ಕುವೆಂಪು ಭಾಷಾಭಾರತೀ' ಎಂಬ ರಾಷ್ಟ್ರೀಯ ಸಂಸ್ಥೆಯ ಒಂದು ಸ್ವತಂತ್ರ ವಿಭಾಗವಾಗಿ ಕರ್ನಾಟಕ ಸರ್ಕಾರ 'ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ'ಯನ್ನು ಈಗಾಗಲೇ (೨೦೦೬ರಲ್ಲಿ) ಅಸ್ತಿತ್ವಕ್ಕೆ ತಂದಿದೆ. ಇಂಥ ಉಪಕ್ರಮವನ್ನು ಮೆರೆಯುವಲ್ಲಿ ಕರ್ನಾಟಕವೇ ಮೊದಲನೆಯ ರಾಜ್ಯವಾಗಿದೆ ಎಂಬುದು ಹೆಮ್ಮೆಯ ಸಂಗತಿಯೇ ಆಗಿದೆ. ಈ ಅನುವಾದ ಅಕಾಡೆಮಿ, ಪ್ರಾರಂಭಗೊಂಡ ತರುಣದಲ್ಲಿಯೇ ಕರ್ನಾಟಕ ರಾಜ್ಯದ ಪುನರ್–ರಚನೆಯ ಸುವರ್ಣ ಮಹೋತ್ಸವದ ಸಂದರ್ಭ ಕೂಡಿ ಬಂದದ್ದು ಒಂದು ವಿಶಿಷ್ಟ ಯೋಗಾಯೋಗವೇ ಆಗಿದೆ. ಈ ಸುವರ್ಣ ಮಹೋತ್ಸವದ ಸಂದರ್ಭದ ಆಚರಣೆಯ ಅಂಗವಾಗಿ ಅನುವಾದ ಅಕಾಡೆಮಿ ಅನೇಕ ಮಹತ್ವಪೂರ್ಣ ಯೋಜನೆಗಳನ್ನು ಕೈಗೊಂಡಿದೆ. ಈ ಮೊದಲೇ ವಿಭಿನ್ನ ಭಾಷೆಗಳಲ್ಲಿನ ಹಲವು ಶ್ರೇಷ್ಠ ಲೇಖಕರ ಹಲವಾರು ಶ್ರೇಷ್ಠ ಕೃತಿಗಳು ನಮ್ಮ ಸಾಹಿತಿಗಳ ಗಮನವನ್ನು ಸೆಳೆದಿದ್ದು, ಅವುಗಳ ಯಥಾವತ್ತಾದ, ಸಂಗ್ರಹರೂಪವಾದ, ಅಳವಡಿಕೆಯಂತಿರುವ ಅನುವಾದಗಳನ್ನು ಅವರು ನಮಗೆ ಕೊಡಮಾಡಿದ್ದಾರೆ. 'ಒಬ್ಬನೇ ಉಂಡ ಊಟ ಹಬ್ಬವಲ್ಲ; ಒಬ್ಬನೇ ಸವಿದ ರುಚಿ ರುಚಿಯಲ್ಲ' ಎಂಬ ಗಾದೆ ಮಾತನ್ನು ಸಾರ್ಥಕಗೊಳಿಸುವಂತೆ, ಅವರು ಈ ಕೆಲಸವನ್ನು ಮಾಡಿದ್ದಾರೆ. ಇಂಥ ಪ್ರಸಿದ್ಧ, ಜನಪ್ರಿಯ, ಅಲಭ್ಯ ಕೃತಿಗಳನ್ನು 'ಸುವರ್ಣ ಕರ್ನಾಟಕ' ಯೋಜನೆಯ ಅಂಗವಾಗಿ ಹೊರತರಲಾಗುತ್ತಿದೆ. ಅಂತೆಯೇ, ಇತರ ಭಾಷೆಗಳಲ್ಲಿನ ಹೊಸ ಶ್ರೇಷ್ಠ ಗ್ರಂಥಗಳನ್ನು ಕನ್ನಡಿಗರಿಗೆ ಪರಿಚಯಿಸಿಕೊಡುವ ಪ್ರಯತ್ನವನ್ನೂ ಮಾಡಲಾಗುತ್ತಿದೆ. ಹೀಗೆ, ದೇಶ–ವಿದೇಶಗಳ ಉತ್ಕೃಷ್ಟ ಕೃತಿಗಳಿಂದ ಕನ್ನಡ ಭಾಷೆ–ಸಾಹಿತ್ಯಗಳನ್ನು ಸಮೃದ್ಧಗೊಳಿಸುವ ದಿಕ್ಕಿನಲ್ಲಿ ಅನುವಾದ ಅಕಾಡೆಮಿ ಮಹತ್ತರವಾದ ಪಾತ್ರವನ್ನು ನಿರ್ವಹಿಸಬೇಕಾಗಿದೆ.

ಅನುವಾದ ಇಂದು ತನ್ನ ಆಯಾಮವನ್ನು ಬಹುವಾಗಿ ವಿಸ್ತರಿಸಿಕೊಂಡು ಜ್ಞಾನ–ವಿಜ್ಞಾನ–ತಂತ್ರಜ್ಞಾನ ಕ್ಷೇತ್ರಗಳನ್ನು ತನ್ನ ತೆಕ್ಕೆಗೆ ಒಳಪಡಿಸಿಕೊಂಡಿದೆ. ಹೀಗಾಗಿ, ಈ ದಿಕ್ಕಿನಲ್ಲಿಯೂ ಕನ್ನಡವನ್ನು ಸಮೃದ್ಧಗೊಳಿಸುವತ್ತ ನಮ್ಮ ಗಮನ ಹರಿಯಬೇಕಾಗಿದೆ. ಅಕಾಡೆಮಿ ಈ ದಿಕ್ಕಿನಲ್ಲಿಯೂ ಕಾರ್ಯೋನ್ಮುಖವಾಗಿರುವುದು ಸಂತೋಷದ ವಿಚಾರವೇ ಆಗಿದೆ. ಈ ಬಗೆಯ ಬಹುಮುಖೀ ಕಾರ್ಯಚಟುವಟಿಕೆಗಳಿಂದ ಭಾರತೀಯ ಭಾಷೆಗಳಲ್ಲಿ ಈಗಾಗಲೇ ತನ್ನದೇ ಆದ ಹಿರಿಮೆಯನ್ನು

ಮರೆದಿರುವ, ಮರೆಯುತ್ತಿರುವ  ಕನ್ನಡ ಭಾಷೆ–ಸಾಹಿತ್ಯ ಮತ್ತಷ್ಟು ಕಂಗೊಳಿಸುವಂತಾಗುತ್ತದೆ. ಅನೇಕ ಮಹತ್ವದ ಗ್ರಂಥಗಳು ದೊರೆಯುವಂತಾಗುತ್ತಿರುವುದು ವೈಯಕ್ತಿಕವಾಗಿಯೂ ನನಗೆ ಸಂತೋಷವನ್ನು ಉಂಟುಮಾಡುತ್ತಿದೆ. ಇಂಥ ಕಾರ್ಯಗಳಿಗೆ ಸರ್ಕಾರದ ಬೆಂಬಲದ ಜೊತೆಗೆ, ಜನತೆಯ ಹೃತ್ಪೂರ್ವಕ ಪ್ರೋತ್ಸಾಹವೂ ಅಗತ್ಯವಾಗುತ್ತದೆ. ವಿವೇಚನಾಶೀಲರೂ, ಸಹೃದಯರೂ ಆದ ಕನ್ನಡಿಗರು ಇಂಥ ಪ್ರೋತ್ಸಾಹ ನೀಡುವಲ್ಲಿ ಮುಂದಾಗುತ್ತಾರೆ ಎಂದು ನಂಬಿದ್ದೇನೆ. ಅಕಾಡೆಮಿಯ ಕಾರ್ಯಚಟುವಟಿಕೆಗಳು ಇತೋಪ್ಯತಿಶಯವಾಗಿ ಮುಂದುವರಿಯಲಿ ; ಕರ್ನಾಟಕದ ಜನತೆಗೆ ಹೊಸ ಅನುಭವಗಳ ಲೋಕವನ್ನು ತೆರೆದು ತೋರುವ ಕಾರ್ಯಗಳು ಅವಿಚ್ಛಿನ್ನವಾಗಿ ನಡೆಯಲಿ ಎಂದು ಈ ಸಂದರ್ಭದಲ್ಲಿ ಹಾರೈಸಬಯಸುತ್ತೇನೆ.



**(ಐ.ಎಂ. ವಿಠ್ಠಲಮೂರ್ತಿ)**

# ಪ್ರಸ್ತಾವನೆ

ಭಾರತದಲ್ಲಿ ಯಾವುದೇ ರಾಜ್ಯವೊಂದರಲ್ಲಿ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದ ಹಿರಿಮೆ ಕರ್ನಾಟಕ ಸರ್ಕಾರದ್ದಾಗಿದೆ. ಜನವರಿ ೬, ೨೦೦೬ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಧರ್ಮಸಿಂಗ್ ಅವರು ವಿಧ್ಯುಕ್ತವಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಉದ್ಘಾಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಭಾಷಾಂತರವನ್ನು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣ ವಿಷಯವಾಗಿ ಅಳವಡಿಸಿದ ಭಾಷಾಂತರ ಕ್ಷೇತ್ರದ ಭೀಷ್ಮಾಚಾರ್ಯರೂ ಆದ ಪ್ರೊ॥ ದೇ. ಜವರೇಗೌಡ ಅವರೂ, ಹಿರಿಯ ವಿದ್ವಾಂಸರಾದ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ ಅಕಾಡೆಮಿಯ ಕಾರ್ಯಚಟುವಟಿಕೆಗಳ ದಿಕ್ಕು-ದೆಸೆಗಳನ್ನು ನಿರ್ದೇಶಿಸಿದರು.

ನಮ್ಮ ನಾಡಿನಲ್ಲಿರುವ ವಿಚಿತ್ರ ಪರಿಸ್ಥಿತಿ ಎಂದರೆ ವಿದೇಶೀಯ ಭಾಷಾಸಾಹಿತ್ಯಗಳ ಅಷ್ಟಿಷ್ಟು ಪರಿಚಯವಾದರೂ ಇರುವ ನಮಗೆ ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲದಂತಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಇತರ ಕೆಲವು ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳಲ್ಲಿ ಅನುವಾದಗಳನ್ನು ಹೊರತರುವ ಕೆಲವು ಯೋಜನೆಗಳನ್ನು ಕೈಗೊಳ್ಳುತ್ತಿರುವುದುಂಟು. ಆದರೆ, ಈ ಕಾರ್ಯಗಳು ಅಪೇಕ್ಷಣೀಯ ಪ್ರಮಾಣದಲ್ಲಿ ಹಾಗೂ ಪರಸ್ಪರ ಪೂರಕವಾಗುವ ರೀತಿಯಲ್ಲಿ ಆಗುತ್ತಿಲ್ಲ. ಮೇಲಾಗಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿವೆ. ಹೀಗಾಗಿ, ಪರಸ್ಪರ ಕೊಳು-ಕೊಡೆಯ ಕಾರ್ಯಕ್ರಮಗಳು ಹೆಚ್ಚು-ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ.

ಭಾರತೀಯ ಭಾಷಾಸಾಹಿತ್ಯಗಳು ಸಮೃದ್ಧವಾಗಿ ಬೆಳೆಯಬೇಕಾದರೆ, ಎರಡು ಮುಖಗಳಲ್ಲಿ ಕಾರ್ಯಗಳು ಆಗಬೇಕಾಗಿದೆ: (೧) ರಾಷ್ಟ್ರೀಯ ಮಟ್ಟದಲ್ಲಿ; (೨) ಅಂತಾರಾಷ್ಟ್ರೀಯ ಮಟ್ಟದಲ್ಲಿ. ರಾಷ್ಟ್ರೀಯ ಸ್ತರದಲ್ಲಿ ನಮ್ಮ ಭಾಷಾ ಸಾಹಿತ್ಯವನ್ನು ಬಿಂಬಿಸುವ ಕೆಲಸ ಎಷ್ಟು ಮುಖ್ಯವೋ, ಇತರ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಅಷ್ಟೇ ಮುಖ್ಯ. ರಾಷ್ಟ್ರೀಯ-ಅಂತಾರಾಷ್ಟ್ರೀಯ ಮಹತ್ವದ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಿಂಬಿಸುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ನೊಬೆಲ್ ಪ್ರಶಸ್ತಿ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ಲೇಖಕರ ಮಹತ್ವದ ಕೃತಿಗಳನ್ನು ಇತರ ಭಾಷೆಗಳಲ್ಲಿ ಹೊರತರುವ ಯೋಜನೆಗಳನ್ನು ಅನುವಾದ ಸಾಹಿತ್ಯ ಅಕಾಡೆಮಿ ತನ್ನ ಮುಂದಿರಿಸಿಕೊಂಡಿದೆ. ಅಷ್ಟೇ ಅಲ್ಲದೆ, ವಿಜ್ಞಾನ-ತಂತ್ರಜ್ಞಾನ, ವೈದ್ಯಕೀಯ, ಮಾನವಿಕ ಮೊದಲಾದ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವ ಯೋಜನೆಗಳೂ

ಅಕಾಡೆಮಿಯ ಮುಂದಿವೆ. ಇತರ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ, ಅಂತೆಯೇ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗ, ಕೇಂದ್ರೀಯ ಹಿಂದೀ ನಿರ್ದೇಶನಾಲಯ, ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಲೀ ಆಯೋಗ ಇತ್ಯಾದಿ ಸಂಸ್ಥೆಗಳೊಂದಿಗೆ ಸಂಪರ್ಕಿಸಿ ಈ ದಿಕ್ಕಿನಲ್ಲಿ ಸಹಕಾರವನ್ನು ಪಡೆದುಕೊಳ್ಳುವ ಆಲೋಚನೆಯನ್ನೂ ಅಕಾಡೆಮಿ ಇರಿಸಿಕೊಂಡಿದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳ ಅಂಗವಾಗಿ ಕಾರ್ಯಶಿಬಿರಗಳನ್ನು ಆಯೋಜಿಸಿ, ಅನುವಾದದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸುವ, ಸಮರ್ಥ ಭಾಷಾಂತರಕಾರರನ್ನು ಗುರುತಿಸುವ ಪ್ರಯತ್ನಗಳನ್ನು ಅಕಾಡೆಮಿ ಮಾಡುತ್ತಿದೆ. ಈಗಾಗಲೇ ಕನ್ನಡ–ತೆಲುಗು, ಕನ್ನಡ–ಹಿಂದೀ, ಯಂತ್ರಾನುವಾದ, ವಿಜ್ಞಾನ ಸಾಹಿತ್ಯ ಅನುವಾದ ಇವುಗಳಿಗೆ ಸಂಬಂಧಿಸಿದಂತೆ ರಾಜ್ಯದ ಬೇರೆ–ಬೇರೆ ಕೇಂದ್ರಗಳಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಕಾರ್ಯಶಿಬಿರಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸಲಾಗಿದೆ. ಉರ್ದೂ ಮತ್ತು ತಮಿಳು ಭಾಷೆಗಳ ಕಾರ್ಯಶಿಬಿರಗಳನ್ನು ಆಯೋಜಿಸಲಾಗುತ್ತಿದೆ.

ಭಾಷಾಂತರ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಕ್ಕಿನಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಆಲೋಚನೆಯೂ ಇದೆ. ಇತ್ತೀಚೆಗೆ ಸ್ಯಾಮ್ ಪಿಟ್ರೋಡಾ ಅವರು 'ರಾಷ್ಟ್ರೀಯ ಅನುವಾದ ಮಿಷನ್' (National Translation Mission) ಅನ್ನು ಸ್ಥಾಪಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಯೋಜನೆಯೊಂದನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರ ಆ ಯೋಜನೆಯನ್ನು ಒಪ್ಪಿಕೊಂಡಿರುವ ವಿಚಾರ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಯೋಜನೆ ಕಾರ್ಯರೂಪಕ್ಕೆ ಬಂದಲ್ಲಿ, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳು ಜನಸಾಮಾನ್ಯರ ವರೆಗೂ ಯಶಸ್ವಿಯಾಗಿ ಮುಟ್ಟುವುದು ಸಾಧ್ಯವಾಗುತ್ತದೆ ಹಾಗೂ ರಾಷ್ಟ್ರದ ಪ್ರಗತಿಯೂ ಅಭೂತಪೂರ್ವ ರೀತಿಯಲ್ಲಿ ಆಗುತ್ತದೆ ಎಂದು ಆಶಿಸಲಾಗಿದೆ. ಈ ಯೋಜನೆ ಉದ್ಯೋಗಸೃಷ್ಟಿಯ ಮಹತ್ತರ ಯೋಜನೆಯೂ ಆಗಲಿದೆ. ಇಂಥ ಸಂದರ್ಭದಲ್ಲಿ ಅಗತ್ಯವಾಗುವ ಲಕ್ಷಾಂತರ ಮಂದಿ ಅನುವಾದಕರ ಪಡೆಯನ್ನು ಸಿದ್ಧಪಡಿಸುವುದು ಇಂಥ ಸಂಸ್ಥೆಗಳ ಮತ್ತು ವಿಶ್ವವಿದ್ಯಾನಿಲಯಗಳ ಹೊಣೆಯೇ ಆಗಿರುತ್ತದೆ. ರಾಜ್ಯದ ಹಾಗೂ ಹೊರಗಿನ ವಿಶ್ವವಿದ್ಯಾನಿಲಯಗಳಲ್ಲಿ ಈಗಾಗಲೇ ಭಾಷಾಂತರ ವಿಭಾಗಗಳು ಸ್ಥಾಪಿತವಾಗಿದ್ದು, ಅವು ಕಾರ್ಯಶೀಲವಾಗುತ್ತಿರುವುದು ಶುಭಸೂಚಕವಾಗಿದೆ.

ಇದುವರೆಗೆ ವಿದ್ವಾಂಸರ ವೈಯಕ್ತಿಕ ಪಾಂಡಿತ್ಯ, ವ್ಯುತ್ಪತ್ತಿ ಮತ್ತು ಒಲವನ್ನು ಆಧರಿಸಿ ಅನುವಾದ ಕಾರ್ಯಗಳು ನಡೆಯುತ್ತಾ ಬಂದಿವೆ. ಆದರೆ ಇಂಥ ಕಾರ್ಯಗಳು ವ್ಯವಸ್ಥಿತವಾಗಿ ಹಾಗೂ ಉತ್ತಮ ಗುಣಮಟ್ಟದೊಂದಿಗೆ ನಡೆಯಬೇಕಾದ್ದು ಅಪೇಕ್ಷಣೀಯವಾಗಿರುವ ಹಿನ್ನೆಲೆಯಲ್ಲಿ, ಭಾಷಾಂತರ ಸಂಬಂಧವಾದ ಶಿಕ್ಷಣ–ಕ್ರಮಗಳನ್ನು ರೂಪಿಸುವುದು ಹಾಗೂ ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳನ್ನು, ನುಡಿಗಟ್ಟುಗಳ ಮತ್ತು ಗಾದೆಗಳ ಕೋಶಗಳು, ಸಮಾನಾರ್ಥಕ ಮತ್ತು ಭಿನ್ನಾರ್ಥಕ ಕೋಶಗಳು ಹಾಗೂ ವಾಕ್ಯರಚನಾ ಕೈಪಿಡಿಗಳನ್ನು ಹೊರತರುವುದು – ಇವೇ ಮೊದಲಾದ ಕಾರ್ಯಗಳು ಆದ್ಯತೆಯ ಮೇರೆಗೆ ನಡೆಯಬೇಕಾಗಿವೆ. ಅನುವಾದ ಅಕಾಡೆಮಿ ಸ್ಥಾಪಿತವಾದ ಅತ್ಯಲ್ಪ ಅವಧಿಯಲ್ಲಿಯೇ ಇತರ ಸಂಘ–ಸಂಸ್ಥೆಗಳ ಗಮನವನ್ನು ಸೆಳೆದಿದ್ದು, ಅಂತರರಾಷ್ಟ್ರೀಯ ಕನಕದಾಸ ಮಿಷನ್‌ನಂತಹ

ಸಂಸ್ಥೆ ಅನುವಾದ ಅಕಾಡೆಮಿಯೊಂದಿಗೆ ಸಹಕರಿಸಲು ಮುಂದೆ ಬಂದಿರುವುದು ಗಮನಾರ್ಹವಾದ ವಿಚಾರವೇ ಆಗಿದೆ. ಅಂತೆಯೇ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಸಹಕಾರದೊಂದಿಗೆ ಇಂಜಿನಿಯರಿಂಗ್ ವಿಷಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಕನ್ನಡದಲ್ಲಿ ಹೊರತರುವ ಬಗ್ಗೆಯೂ ಆಲೋಚನೆ ಮಾಡಲಾಗುತ್ತಿದೆ. ಹೀಗೆ ಅನುವಾದ ಅಕಾಡೆಮಿ ಅನೇಕ ದಿಕ್ಕುಗಳಲ್ಲಿ ಮುಂದುವರಿದು ಸಾಧನೆ ಮಾಡಬೇಕಾಗಿದೆ.

ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು ತೋರಿ ಅಗತ್ಯವಾದ ನೆರವನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ವಿಶೇಷ ಸಂತೋಷದ ವಿಚಾರವೇ ಆಗಿದೆ. ಅದರಲ್ಲಿಯೂ ಈ ಬಾರಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಧನಸಹಾಯ ನೀಡಿರುವುದರಿಂದ ಪ್ರಸಿದ್ಧ/ಅಲಭ್ಯ ಅನುವಾದಗಳ ಮರುಪ್ರಕಟಣೆ ಕಾರ್ಯವನ್ನು ಕೈಗೊಳ್ಳುವುದು, ಮತ್ತಿತರ ಮಹತ್ವದ ಪ್ರಕಟಣೆಗಳನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ನಾಡಿನ ವಿದ್ವಾಂಸರು ವಿಶೇಷವಾದ ಸಹಾಯ–ಸಹಕಾರಗಳನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ಗೌರವದ, ಸಂತೋಷದ ಹಾಗೂ ಹೆಮ್ಮೆಯ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ವಿಲ್ ಡ್ಯೂರಾಂಟ್ ಅವರ ಜಗತ್–ಪ್ರಸಿದ್ಧವಾಗಿರುವ ಹಾಗೂ ಭಾರತದ ಬೇರಾವ ಭಾಷೆಯಲ್ಲೂ ಇನ್ನೂ ಬೆಳಕು ಕಾಣದಿರುವ 'ದಿ ಸ್ಟೋರಿ ಆಫ್ ಸಿವಿಲಿಜೇಷನ್' ಸಂಪುಟಗಳ ಕನ್ನಡ ಅನುವಾದವನ್ನು ಹೊರತರುವಲ್ಲಿ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ, ಬಹಳ ಹಿಂದೆಯೇ ಇಂಗ್ಲಿಷ್‌ನಲ್ಲಿ ೧೦ ಸಂಪುಟಗಳಲ್ಲಿ ಪ್ರಕಟಣೆಗೊಂಡಿರುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಕೃತಿಯಾದ ಸೋಮದೇವನ 'ಕಥಾಸರಿತ್ಸಾಗರ'ದ ಕನ್ನಡ ಅನುವಾದವನ್ನು ನೇರವಾಗಿ ಸಂಸ್ಕೃತದಿಂದ ಅನುವಾದಿಸಿ ಹೊರತರುವಲ್ಲಿ ಡಾ॥ ಪಿ.ಎಸ್.ರಾಮಾನುಜಮ್ ಅವರೂ ನೆರವು ನೀಡುತ್ತಿರುವುದು ವಿಶೇಷವಾಗಿ ಸ್ಮರಣೀಯವಾಗಿದೆ. ಕನ್ನಡ ಸಹೃದಯಲೋಕ ಅಕಾಡೆಮಿಯ ಈ ಕಾರ್ಯಚಟುವಟಿಕೆಗಳ ವಿಷಯದಲ್ಲಿ ತನ್ನ ಸಹೃದಯತೆಯನ್ನು ಮೆರೆಯುತ್ತದೆ ಎಂದು ಆಶಿಸಿದ್ದೇನೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರಿಗೂ, ಅಕಾಡೆಮಿಯ ಕಾರ್ಯಚಟುವಟಿಕೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಎಲ್ಲ ನೆರವನ್ನು ನೀಡುತ್ತಿರುವ ಇಂದಿನ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ.ಕುಮಾರಸ್ವಾಮಿ ಅವರಿಗೂ, ಮಾನ್ಯ ಉಪಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್.ಯಡಿಯೂರಪ್ಪನವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾದ ಮಾನ್ಯ ಶ್ರೀ ಮಹದೇವ ಪ್ರಸಾದ್ ಅವರಿಗೂ ಅಕಾಡೆಮಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತದೆ. ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಬಗೆಯ ಸಹಾಯ–ಸಹಕಾರ–ಮಾರ್ಗದರ್ಶನ ನೀಡುತ್ತಾ ಬಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾಗಿದ್ದ ಶ್ರೀಮತಿ ಉಷಾ ಗಣೇಶ್ ಅವರಿಗೂ, ಚೈತನ್ಯಶೀಲರೂ, ದೂರಗಾಮಿ ದೃಷ್ಟಿಯನ್ನುಳ್ಳವರೂ ಆದ ಇಂದಿನ ಕಾರ್ಯದರ್ಶಿಗಳಾದ ಶ್ರೀ ಐ.ಎಂ.ವಿಠ್ಠಲಮೂರ್ತಿ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹಿಂದಿನ ಆಯುಕ್ತರುಗಳಾಗಿದ್ದ ಶ್ರೀ ಕೆ.ಆರ್.ನಿರಂಜನ್ ಮತ್ತು ಶ್ರೀ ಎಸ್.ಎಫ್. ಯೋಗಪ್ಪನವರ್

ಅವರಿಗೂ, ಈಗಿನ ನಿರ್ದೇಶಕರಾಗಿರುವ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೂ ಅಕಾಡೆಮಿ ವಿಶೇಷ ವಂದನೆಗಳನ್ನು ಸೂಚಿಸಬಯಸುತ್ತದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಮಾಡುತ್ತಿರುವ ಅಕಾಡೆಮಿಯ ಎಲ್ಲ ಗೌರವಾನ್ವಿತ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಮಹಾಕವಿ ಸೋಮದೇವಭಟ್ಟನ 'ಕಥಾಸರಿತ್ಸಾಗರ' ಸಂಸ್ಕೃತ ಕಥಾಸಾಹಿತ್ಯದ ಅಪೂರ್ವ ಕೃತಿಗಳಲ್ಲಿ ಒಂದು. ಭಾರತೀಯ ಧರ್ಮ, ಸಂಸ್ಕೃತಿ, ನೀತಿಶಾಸ್ತ್ರ, ರಾಜಕೀಯ ಚಿಂತನೆ, ಸಾಮಾಜಿಕ ಕಳಕಳಿ, ಸಾಹಿತ್ಯ ಪ್ರೀತಿ, ಕಥಾನಿರೂಪಣೆಯ ಕಲೆಗಾರಿಕೆ ಮತ್ತು ಸ್ವಾರಸ್ಯ – ಇವುಗಳೆಲ್ಲದರಿಂದ ಅದು ಭಾರತೀಯ ಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದಾಗಿದೆ. ಜೀವನದ ಬಗೆಗಿನ ಎಲ್ಲ ಭಾರತೀಯ ಆದರ್ಶಗಳು ಇಲ್ಲಿಯ ಕಥೆಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೈದಳೆದಿವೆ. ನಮ್ಮ ಪ್ರಾಚೀನ ಕಥಾಪರಂಪರೆಯ ಪ್ರತೀಕವಾಗಿರುವಂತೆಯೇ, ತನ್ನ ಕಾವ್ಯಮಯ ನಿರೂಪಣೆಯಿಂದಲೂ ಅದು ಸಾಹಿತ್ಯಪ್ರಿಯರನ್ನು ತನ್ನತ್ತ ಸೆಳೆದುಕೊಂಡಿದೆ. ಇಂಥ ಕೃತಿಯ ಓದು ನಮ್ಮ ಮಕ್ಕಳಲ್ಲಿ, ಜನತೆಯಲ್ಲಿ ಸತ್–ಸಂಸ್ಕೃತಿಯನ್ನು ಮೂಡಿಸಲು ಖಂಡಿತವಾಗಿಯೂ ನೆರವಾಗುತ್ತದೆ. ಇದರ ಮಹತ್ವವನ್ನು ಅರಿತ ಸಿ.ಎಚ್. ಥಾನಿ ಎಂಬ ಪಾಶ್ಚಾತ್ಯ ವಿದ್ವಾಂಸ ಕಳೆದ ಶತಮಾನದಲ್ಲಿಯೇ (ಸು. ೧೯೨೩) ಹನ್ನೊಂದು ಸಂಪುಟಗಳಲ್ಲಿ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದನೆಂಬ ಸಂಗತಿ ಇದರ ವೈಶಿಷ್ಟ್ಯ–ಮಹತ್ವಗಳಿಗೆ ಸಾಕ್ಷಿಯಾಗಿದೆ. ಟಿ. ಚಿದಂಬರ ಪಂಡಿತರು 'ಕರ್ಣಾಟಕ ಕಥಾಸರಿತ್ಸಾಗರ' (೧೯೨೨) ಎಂಬ ಹೆಸರಿನಲ್ಲಿಯೂ, ಎ. ಆರ್. ಕೃಷ್ಣಶಾಸ್ತ್ರಿಗಳು 'ಕಥಾಮೃತ' (೧೯೫೨, ೬೮) ಎಂಬ ಹೆಸರಿನಲ್ಲಿಯೂ ಇದರ ಸಂಕ್ಷಿಪ್ತ ಆವೃತ್ತಿಗಳನ್ನು ಹೊರತಂದಿದ್ದರು. ದೇವುಡು ಅವರ ವಿ. ರಾಘವನ್ ಅವರಿಂದ ಸಂಕಲಿತವಾದ ಇದರ ೧೬–ಕಥೆಗಳನ್ನು ಕನ್ನಡಕ್ಕೆ ತಂದಿರುವುದೂ (೧೯೫೮) ಗಮನಿಸಬೇಕಾದ ಸಂಗತಿಯೇ ಆಗಿದೆ. ಆದರೆ ಸಮಗ್ರವಾಗಿ ಹಾಗೂ ಸಮೂಲವಾಗಿ ಇದರ ಕನ್ನಡ ಆವೃತ್ತಿ ಹೊರಬರುತ್ತಿರುವುದು ಇದೇ ಮೊದಲು. 'ನಿರ್ಣಯ ಸಾಗರ'ದ ವತಿಯಿಂದ ಪ್ರಕಟವಾಗಿರುವ ಪಂಡಿತ ದುರ್ಗಾ ಪ್ರಸಾದ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಅವರಿಂದ ಸಂಪಾದಿತವಾದ ಹಾಗೂ ವಾಸುದೇವ ಲಕ್ಷ್ಮಣಶಾಸ್ತ್ರೀ ಪಣಶೀಕರ ಅವರಿಂದ ಪರಿಶೋಧಿತವಾಗಿರುವ ೧೯೧೫ರ ಆವೃತ್ತಿಯನ್ನು ಇದಕ್ಕೆ ಆಧಾರವಾಗಿ ಇರಿಸಿಕೊಳ್ಳಲಾಗಿದೆ. ನಾಡಿನ ಅನೇಕ ಖ್ಯಾತ ಸಂಸ್ಕೃತ ವಿದ್ವಾಂಸರು ಅಕಾಡೆಮಿಯ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಡಾ. ಪಿ.ಎಸ್. ರಾಮಾನುಜಂ ಅವರಂಥ ಅಪರೂಪದ ಸಾಹಿತಿ, ವಿದ್ವಾಂಸರು ಈ ಯೋಜನೆಯ ಸಂಪಾದಕರಾಗಿ ಕಾರ್ಯನಿರ್ವಹಿಸಲು ಒಪ್ಪಿರುವುದಂತೂ ಅಕಾಡೆಮಿಗೆ ಗೌರವಪ್ರಾಯವಾದ ಸಂಗತಿಯಾಗಿದೆ ಎಂದು ನಂಬಿದ್ದೇನೆ. ಅನುವಾದಗಳಿಗೆ ಶಿಷ್ಟತೆ, ಸಾಹಿತ್ಯಸೌಷ್ಠವ ಮತ್ತು ಲಾಲಿತ್ಯಗಳನ್ನು ತಂದುಕೊಟ್ಟಿರುವುದಲ್ಲದೆ, ಕನ್ನಡ ಗದ್ಯದ ಸಹಜಗುಣಗಳು ಅಳವಡುವಂತೆ ಅವರು ನೋಡಿಕೊಂಡಿದ್ದಾರೆ. ಜೊತೆಗೆ ವಿದ್ವತ್ ಪೂರ್ಣವಾಗಿರುವ ಪೀಠಿಕೆಯನ್ನು ಬರೆದುಕೊಟ್ಟು ಈ ಸಂಪುಟಗಳ ಶೋಭೆ ಮತ್ತು ಮಹತ್ವವನ್ನು ಹೆಚ್ಚಿಸಿದ್ದಾರೆ. ಇವೆಲ್ಲ ಕನ್ನಡದ ಬಗೆಗಿನ ಅವರ ಪ್ರೀತಿ–ಗೌರವಗಳಿಗೆ ನಿದರ್ಶನವಾಗಿವೆಯೆಂದು ನಂಬಿದ್ದೇನೆ. ಅವಿರತವಾಗಿ ಶ್ರಮಿಸಿ, ನಮ್ಮ ಈ ಯೋಜನೆ ಕಾಲಬದ್ಧವಾಗಿ ಕೈಗೂಡುವಂತೆ ಮಾಡುವಲ್ಲಿ

ಅವರು ನೀಡಿರುವ ಸಹಾಯ–ಸಹಕಾರ–ಮಾರ್ಗದರ್ಶನಗಳು ಅವಿಸ್ಮರಣೀಯವಾಗಿರುವಂಥವು. ಈ ಮೊದಲ ಸಂಪುಟದ ಅನುವಾದ ಕಾರ್ಯದಲ್ಲಿ ನಮಗೆ ನೆರವಾಗಿರುವವರು ಅಂತರರಾಷ್ಟ್ರೀಯ ಖ್ಯಾತಿಯ ಸಂಸ್ಕೃತ ವಿದ್ವಾಂಸರಾದ ಶ್ರೀ ಎಚ್.ವಿ. ನಾಗರಾಜರಾವ್ ಅವರು. ಆದರ್ಶವೆನ್ನಬಹುದಾದ ರೀತಿಯಲ್ಲಿ ಮೊದಲ ಐದು ಲಂಬಕಗಳನ್ನು ಅನುವಾದಿಸಿಕೊಟ್ಟಿರುವುದಲ್ಲದೆ, ಮೂಲದಲ್ಲಿ ಉಳಿದುಹೋಗಿದ್ದ ಭಾಷಾದೋಷಗಳನ್ನೂ/ಅಚ್ಚಿನ ತಪ್ಪುಗಳನ್ನೂ ಸರಿಪಡಿಸಿಕೊಡುವುದರ ಮೂಲಕ ಕನ್ನಡ ಆವೃತ್ತಿ ಶಿಷ್ಟ ಆವೃತ್ತಿಯಾಗುವಂತೆಯೂ ಅವರು ನೋಡಿಕೊಂಡಿದ್ದಾರೆ. ಬೇಸರವಿಲ್ಲದೆ ಕರಡುಗಳನ್ನು ಪರಿಶೀಲಿಸಿಕೊಟ್ಟಿದ್ದಾರೆ. ಅವರ ಈ ವಿದ್ವತ್ ಪ್ರೇಮ ಸಾಹಿತ್ಯಪ್ರಿಯರೆಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತದೆಂದು ನಂಬಿದ್ದೇವೆ. ಈ ಸಂಪುಟದಲ್ಲಿ ನಾಲ್ಕು ಮತ್ತು ಐದು – 'ನರವಾಹನದತ್ತಜನನ' ಮತ್ತು 'ಚತುರ್ದಾರಿಕಾ' – ಲಂಬಕಗಳ ಅನುವಾದವನ್ನು ಅಳವಡಿಸಲಾಗಿದೆ. ಈ ಎಲ್ಲ ಮಹನೀಯರಿಗೂ ಅಕಾಡೆಮಿ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸಬಯಸುತ್ತದೆ.

ಇನ್ನೊಂದು ಮಾತು: ಇದರ ಮಹತ್ವವನ್ನು ಮನಗಂಡ ಕನ್ನಡ ನಾಡಿನ ಅನೇಕ ಗಣ್ಯ ವಿದ್ವಾಂಸರು ಥಾನಿಯವರು ಸಂಪಾದಿಸಿರುವ *'The Ocean of Story'* ಆವೃತ್ತಿಯ ಕನ್ನಡ ಅವತರಣಿಕೆಯನ್ನು ಹೊರತರಬೇಕೆಂಬ ಪ್ರಸ್ತಾಪವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮುಂದೆ ಇರಿಸಿದ್ದರು. ಹೀಗಾಗಿ ಇದು ಮೂಲತಃ ಕನ್ನಡ ಪುಸ್ತಕ ಪ್ರಾಧಿಕಾರದವರ ಯೋಜನೆ, ಅವರು ಈ ದಿಕ್ಕಿನಲ್ಲಿ ಕ್ರಮ ಕೈಗೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅನುವಾದ ಅಕಾಡೆಮಿಯ ಸ್ಥಾಪನೆಯಾದ ಹಿನ್ನೆಲೆಯಲ್ಲಿ, ಅಂದಿನ ಪ್ರಧಾನ ಕಾರ್ಯದರ್ಶಿಗಳು ಇದನ್ನು ಅಕಾಡೆಮಿಗೆ ವರ್ಗಾಯಿಸಿದರು. ಬೇಸರಪಟ್ಟುಕೊಳ್ಳದೆ ಇದಕ್ಕೆ ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರಿಗೆ ಅನುವಾದ ಅಕಾಡೆಮಿ ಕೃತಜ್ಞವಾಗಿದೆ.

ಅಕಾಡೆಮಿ ಈ ಯೋಜನೆಯಲ್ಲಿ ಒಂದು ಬದಲಾವಣೆ ಮಾಡಿಕೊಂಡಿದೆ. ಮೂಲ ಸಂಸ್ಕೃತ ಗ್ರಂಥದ ಇಂಗ್ಲಿಷ್ ಆವೃತ್ತಿಯನ್ನು ಕನ್ನಡಕ್ಕೆ ತಂದುಕೊಳ್ಳುವ ಬದಲಿಗೆ ನೇರವಾಗಿ ಸಮೂಲವಾಗಿ ಸಂಸ್ಕೃತದಿಂದಲೇ ಅನುವಾದಿಸಿಕೊಳ್ಳುವುದೇ ಆ ಬದಲಾವಣೆ. ಕನ್ನಡ ಓದುಗರಿಗೆ ನೇರವಾಗಿ ಕಥೆಯನ್ನು ಓದಿಕೊಂಡು ಹೋಗಲು ಅನುಕೂಲವಾಗುವಂತೆ ಕನ್ನಡಾನುವಾದವನ್ನು ಪುಟದ ಮೇಲು ಅರ್ಧದಲ್ಲಿ ಕೊಟ್ಟು, ಮೂಲವನ್ನು ಕೆಳ ಅರ್ಧದಲ್ಲಿ ಅಳವಡಿಸಲಾಗಿದೆ. ಇದು ಕನ್ನಡ–ಸಹೃದಯರಿಗೆ ಪ್ರಿಯವಾಗುತ್ತದೆಂದು ನಂಬಿದ್ದೇವೆ. ಮುಂದಿನ ಒಂದೆರಡು ವರ್ಷಗಳಲ್ಲಿ ಸುಮಾರು ೨೦ ಸಂಪುಟಗಳ ಇಡೀ ಕೃತಿಯನ್ನು ಕನ್ನಡ ಜನಸಮುದಾಯಕ್ಕೆ ಒಪ್ಪಿಸಲು ಸಾಧ್ಯವಾದೀತೆಂದೂ ನಂಬಿದ್ದೇವೆ. ಇದು ಸಾಧ್ಯವಾದಾಗ ಕನ್ನಡದ ಸಾಧನೆಗೆ ಇನ್ನೊಂದು ಹೆಮ್ಮೆಯ ಗರಿ ಸೇರಿದಂತಾಗುತ್ತದೆಂದು ನಂಬಿದ್ದೇವೆ.

ಅನುವಾದ ಅಕಾಡೆಮಿಯ ಕೆಲಸ–ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅಕಾಡೆಮಿಯ ರಿಜಿಸ್ಟ್ರಾರ್ ಪಿ. ನಾರಾಯಣಸ್ವಾಮಿ ಮತ್ತು ಇತರ ಸಿಬ್ಬಂದಿವರ್ಗದವರಿಗೆ ಹಾಗೂ ಸುಂದರವಾಗಿ ಮುದ್ರಿಸುವಲ್ಲಿ ಸಹಕರಿಸಿರುವ

ಮೆ॥ ಮಯೂರ ಪ್ರಿಂಟ್ ಆಡ್ಸ್‌ನ ಶ್ರೀ ಬಿ.ಎಲ್. ಶ್ರೀನಿವಾಸ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ವಂದನೆಗಳು.

ಈ ಯೋಜನೆಯಲ್ಲಿ ಹೃತ್ಪೂರ್ವಕವಾಗಿ ಸಹಕರಿಸಿದ್ದ ಡಾ. ಬಿ. ಎಸ್. ರಾಮಕೃಷ್ಣರಾವ್ ಅವರು ಈ ಸಂಪುಟಗಳು ಹೊರಬರುವ ಮೊದಲೇ ವಿಧಿವಶರಾದದ್ದು ನಮಗೆ ತುಂಬ ವಿಷಾದವನ್ನುಂಟು ಮಾಡಿದೆ. ಅವರ ಆತ್ಮಕ್ಕೆ ನಮ್ಮ ಕಾರ್ಯ ಸಂತೋಷವನ್ನು ತರುತ್ತದೆಂದು ನಂಬಿದ್ದೇವೆ.

**ಪ್ರಧಾನ್ ಗುರುದತ್ತ**
ಅಧ್ಯಕ್ಷ

# ಪರಿವಿಡಿ



## ಕಥಾಸರಿತ್ಸಾಗರ

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

(ಸಂಪುಟ ೩)

(ಲಂಬಕಗಳು: ನರವಾಹನದತ್ತಜನನ ಮತ್ತು ಚತುರ್ದಾರಿಕಾ)

# ‘ನರವಾಹನದತ್ತಜನನ’

## ಒಂದನೆಯ ತರಂಗ

೧ ಬೀಸಣಿಗೆಯಂತಿರುವ ತನ್ನ ಕಿವಿಗಳ ಬಲವತ್ತಾದ ಹೊಡೆತಗಳಿಂದ ಕುಲಪರ್ವತಗಳಲ್ಲಿ ಸೀಳುಗಳನ್ನು ಮಾಡಿ, ಸಿದ್ಧಿಗಳ ದಾರಿಯನ್ನು ಮಾಡಿ ಕೊಡುತ್ತಿರುವನೋ ಎಂಬಂತಿರುವ ವಿಘ್ನೇಶ್ವರನು ಜಯಶೀಲನಾಗಿದ್ದಾನೆ

೨. ಅನಂತರದಲ್ಲಿ ರಾಜ ವತ್ಸೇಶ್ವರನು ಕೌಶಾಂಬಿಯಲ್ಲಿರುತ್ತಾ ತಾನು ಗೆದ್ದಿದ್ದ, ಏಕಚಕ್ರಾಧಿಪತ್ಯದ ಭೂಮಿಯನ್ನು ಆಳುತ್ತಿದ್ದನು.

೩. ರುಮಣ್ವಂತನ ಜೊತೆಯಲ್ಲಿದ್ದ ಯೌಗಂಧರಾಯಣನಲ್ಲಿ ರಾಜ್ಯದ ಭಾರವನ್ನು ಹೊರಿಸಿ, ವಿಹಾರಗಳಲ್ಲೇ ಯಾವಾಗಲೂ ರುಚಿಯನ್ನು ಹೊಂದಿ ವಸಂತಕನೊಡನೆ ಕೂಡಿ ವತ್ಸರಾಜನು ಸುಖವಾಗಿದ್ದನು.

೪. ದೇವಿ ವಾಸವದತ್ತೆಯೊಡನೆ ಹಾಗೂ ಪದ್ಮಾವತಿಯಡನೆ ತಾನೇ ವೀಣೆಯನ್ನು ನುಡಿಸುತ್ತಾ ಸಂಗೀತವನ್ನು ಸವಿಯುತ್ತಿದ್ದನು.

---

# ನರವಾಹನದತ್ತಜನನಂ ನಾಮ ಚತುರ್ಥೋ ಲಂಬಕಃ

## ಪ್ರಥಮಸ್ತರಂಗಃ ॥

ಕರ್ಣತಾಲಬಲಾಘಾತಸೀಮಂತಿತಕುಲಾಚಲಃ ।
ಪಂಥಾನಮಿವ ಸಿದ್ಧೀನಾಂ ದಿಶನ್ ಜಯತಿ ವಿಘ್ನಜಿತ್ ॥ ೧
ತತೋ ವತ್ಸೇಶ್ವರೋ ರಾಜಾ ಸ ಕೌಶಾಂಬ್ಯಾಮವಸ್ಥಿತಃ ।
ಏಕಾತಪತ್ರಾಂ ಬುಭುಜೇ ಜಿತಾಮುದಯನೋ ಮಹೀಮ್ ॥ ೨
ವಿಧಾಯ ಸರುಮಣ್ವತ್ಕೇ ಭಾರಂ ಯೌಗಂಧರಾಯಣೇ ।
ವಿಹಾರೈಕರಸಶ್ಚಾಭೂದ್ ವಸಂತಕಸುಖಃ ಸುಖೀ ॥ ೩
ಸ್ವಯಂ ಸ ವಾದಯನ್ ವೀಣಾಂ ದೇವ್ಯಾ ವಾಸವದತ್ತಯಾ ।
ಪದ್ಮಾವತ್ಯಾ ಚ ಸಹಿತಃ ಸಂಗೀತಕಮಸೇವತ ॥ ೪

೫. ದೇವಿಯರು ಹಾಡುತ್ತಿದ್ದ ಕಾಕಲೀಸ್ವರದ ಹಾಡಿಗೂ ಅವನ ವೀಣೆಯ ನಾದಕ್ಕೂ ವ್ಯತ್ಯಾಸವೇ ಕಾಣದಿದ್ದರೂ ನುಡಿಸುವ ಹೆಬ್ಬೆಟ್ಟಿನ ಕಂಪನಗಳು ಭೇದವನ್ನು ಸೂಚಿಸುತ್ತಿದ್ದವು.

೬. ಅವನ ಕೀರ್ತಿಯನ್ನು ಹೋಲುತ್ತಿದ್ದ ಬೆಳದಿಂಗಳಿನಿಂದ ಬಿಳುಪಾಗಿದ್ದ ಅರಮನೆಯ ಮೇಲೆ, ಧಾರೆಧಾರೆಯಾಗಿ ಸುರಿಯುತ್ತಿದ್ದ ಮದ್ಯವನ್ನು ಶತ್ರುಗಳ ಗರ್ವವನ್ನೋ ಎಂಬಂತೆ ಅವನು ಕುಡಿಯುತ್ತಿದ್ದನು.

೭. ಏಕಾಂತದಲ್ಲಿ ವಾರಾಂಗನೆಯರು ಚಿನ್ನದ ಕೊಡಗಳಿಂದ ಮನ್ಮಥರಾಜ್ಯದ ಅಭಿಷೇಕಕ್ಕಾಗಿ ತಂದ ನೀರೋ ಎಂಬಂತಿದ್ದ ಅನುರಾಗದಿಂದ ಥಳಥಳಿಸುತ್ತಿದ್ದ ಮಧುವನ್ನು ಅವನಿಗಾಗಿ ತರುತ್ತಿದ್ದರು.

೮. ಆ ಮದ್ಯವು ಸ್ವಲ್ಪ ಕೆಂಪಾಗಿ ರಸಭರಿತವಾಗಿ ಸ್ವಚ್ಛವಾಗಿ ಇದ್ದು, ಅದರ ಮಧ್ಯದಲ್ಲಿ ಅವರ ಮುಖಗಳು ಪ್ರತಿಫಲಿಸುತ್ತಿದ್ದುವು. ಅದನ್ನು ತನ್ನ ಮನಸ್ಸಿನಂತೆ ವತ್ಸರಾಜನು ಆ ಇಬ್ಬರು ರಾಣಿಯರ ಮಧ್ಯದಲ್ಲಿ ಇಟ್ಟನು.

೯. ಅಸಹನೆ ಮತ್ತು ರೋಷ ಇಲ್ಲದಿದ್ದರೂ ಹುಬ್ಬುಗಳು ಚಂಚಲವಾಗಿದ್ದ ಮತ್ತು ಕೆಂಪುಬಣ್ಣವನ್ನು ಹೊಂದಿದ್ದ ಆ ಇಬ್ಬರು ರಾಣಿಯರ ಮುಖಗಳಲ್ಲಿ ನೆಟ್ಟಿದ್ದ ಅವನ ದೃಷ್ಟಿಯು ತೃಪ್ತಿಯನ್ನೇ ಹೊಂದಲಿಲ್ಲ.

೧೦. ಸ್ಫಟಿಕದ ಅನೇಕ ಪಾತ್ರೆಗಳಲ್ಲಿ ಮಧುವನ್ನು ತುಂಬಿಸಿ ಇಟ್ಟಿದ್ದ ಅವನ ಪಾನಭೂಮಿಯು ಎಳೆಬಿಸಿಲಿನಿಂದ ಸ್ವಲ್ಪ ಕೆಂಪಾದ ಬಿಳಿಯ ಪದ್ಮಗಳನ್ನುಳ್ಳ ಪದ್ಮಸರೋವರದಂತೆ ಶೋಭಿಸಿತು.

---

ದೇವೀಕಾಕಲಿಗೀತಸ್ಯ ತದ್ವೀಣಾನಿನದಸ್ಯ ಚ ।
ಅಭೇದೇ ವಾದನಾಂಗುಷ್ಠಕಂಪೋಽಭೂದ್ ಭೇದಸೂಚಕಃ ॥ ೫
ಹರ್ಮ್ಯಾಗ್ರೇ ನಿಜಕೀರ್ತ್ಯೇವ ಜ್ಯೋತ್ಸ್ನಯಾ ಧವಲೇ ಚ ಸಃ ।
ಧಾರಾವಿಗಲಿತಂ ಸೀಧು ಪಪೌ ಮದಮಿವ ದ್ವಿಷಾಮ್ ॥ ೬
ಆಜಹ್ರುಃ ಸ್ವರ್ಣಕಲಶೈಸ್ತಸ್ಯ ವಾರಾಂಗನಾ ರಹಃ ।
ಸ್ಮರರಾಜ್ಯಾಭಿಷೇಕಾಂಭ ಇವ ರಾಗೋಜ್ಜ್ವಲಂ ಮಧು ॥ ೭
ಆರಕ್ತಸುರಸಸ್ವಚ್ಛಮಂತಃ ಸ್ಫುರಿತತನ್ಮುಖಮ್ ।
ಉಪನಿನ್ಯೇ ದ್ವಯೋರ್ಮಧ್ಯೇ ಸ ಸ್ವಚಿತ್ತಮಿವಾಸವಮ್ ॥ ೮
ಈರ್ಷ್ಯಾರುಷಾಮಭಾವೇಽಪಿ ಭಂಗುರಭ್ರೂಣಿ ರಾಗಿಣಿ ।
ನ ಮುಖೇ ತತ್ತಯೋ ರಾಜ್ಞ್ಯೋಸ್ತದ್ ದೃಷ್ಟಿಸ್ತೃಪ್ತಿಮಾಯಯೌ ॥ ೯
ಸಮಧುಸ್ಫಟಿಕಾನೇಕಚಷಕಾ ತಸ್ಯ ಪಾನಭೂಃ ।
ಬಭೌ ಬಾಲಾತಪಾರಕ್ತಸಿತಪದ್ಮೇವ ಪದ್ಮಿನೀ ॥ ೧೦

೧೧. ಅನೇಕ ವ್ಯಾಧರೊಡಗೂಡಿ ಮುತ್ತುಗದ ಎಲೆಯಂತೆ ಕಪ್ಪಾಗಿದ್ದ ಕಂಚುಕವನ್ನು ತೊಟ್ಟು, ಧನುಸ್ಸನ್ನು ಹಿಡಿದು ವತ್ಸರಾಜನು ತನಗೆ ಸದೃಶವಾಗಿದ್ದ ಮೃಗಕಾನನವನ್ನು ಹೊಕ್ಕನು. (ಸಾದೃಶ್ಯ ಹೇಗೆಂದರೆ ಆ ಕಾಡಿನಲ್ಲೂ ಮಧ್ಯದಲ್ಲಿ ವ್ಯಾಧರಿದ್ದರು. ಮುತ್ತುಗದ ಮರಗಳ ಎಲೆಗಳೇ ಆ ಕಾಡಿಗೆ ಕಂಚುಕವಾಗಿದ್ದುವು).

೧೨. ಒತ್ತಾದ ಕಿರಣಗಳಿಂದ ಸೂರ್ಯನು ಕತ್ತಲೆಯ ಸಮೂಹಗಳನ್ನು ಭೇದಿಸುವಂತೆ ಕೆಸರಿನಿಂದ ಕೊಳಕಾಗಿದ್ದ ಕಾಡು ಹಂದಿಗಳ ಹಿಂಡುಗಳನ್ನು ವತ್ಸರಾಜನು ಬಾಣಗಳಿಂದ ಹೊಡೆದು ಕೊಂದನು.

೧೩. ಅವನು ಅಟ್ಟಿಸಿಕೊಂಡು ಹೋದಾಗ ಬೆದರಿ ಚೆದರಿ ಹೋದ 'ಕೃಷ್ಣಸಾರ' ಜಿಂಕೆಗಳು ಹಿಂದೆ ಅವನು ಗೆದ್ದಿದ್ದ ದಿಕ್ಕುಗಳ ಕಡೆಗಣ್ಣ ನೋಟಗಳಂತೆ ಕಂಗೊಳಿಸಿದುವು.

೧೪. ಅವನು ಕಾಡುಕೋಣಗಳನ್ನು ಕೊಂದಾಗ ರಕ್ತದಿಂದ ಕೆಂಪಾದ ನೆಲವು, ಆ ಕೋಣಗಳ ಕೋಡುಗಳ ಹೊಡೆತದಿಂದ ಬಿಡುಗಡೆಯನ್ನು ಪಡೆದು ಅವನ ಪರಿಚರ್ಯೆಯನ್ನು ಮಾಡಲು ಬಂದ ಕಾಡಿನ ಕಮಲಗಳ ಸರೋವರದಂತೆ ಶೋಭಿಸಿತು.

೧೫. ಸಿಂಹಗಳ ತೆರೆದ ಬಾಯಿಯೊಳಕ್ಕೆ ನುಗ್ಗಿದ ಪ್ರಾಸವೆಂಬ ಆಯುಧಗಳಿಂದ ಅವುಗಳ ಬಾಯಿಗಳು ಹೊಲಿಯಲ್ಪಟ್ಟಂತಾಗಿ ಗರ್ಜನೆಯ ಶಬ್ದವು ಒಳಗಿದ್ದಾಗಲೇ ಸಿಂಹಗಳು ಪ್ರಾಣಗಳನ್ನು ಬಿಟ್ಟಾಗ ವತ್ಸರಾಜನು ಸಂತೋಷ ಪಟ್ಟನು.

೧೬. ಬೇಟೆಯ ಆನಂದಾನುಭವವು ಕೇವಲ ತನ್ನ ಆಯುಧಮಾತ್ರದಿಂದಲೇ ಲಭಿಸುತ್ತಿರಲು (ಬೇಟೆಯ) ನಾಯಿಗಳು ಹೊಂಡಗಳಲ್ಲೂ ಬಲೆಗಳು ದಾರಿಗಳಲ್ಲೂ ಇರುವುದೇ ಪರಿಪಾಠವಾಗಿಬಿಟ್ಟಿತು.

---

ಅಂತರಾ ಚ ಮಿಲದ್ವ್ಯಾಧಃ ಪಲಾಶಶ್ಯಾಮಕಂಚುಕಃ ।
ಸ ಸಬಾಣಾಸನೋ ಭೇಜೇ ಸ್ವೋಪಮಂ ಮೃಗಕಾನನಮ್ ॥ ೧೧

ಜಘಾನ ಪಂಕಕಲುಷಾನ್ ವರಾಹನಿವಹಾನ್ ಶರೈಃ ।
ತಿಮಿರೌಘಾನವಿರಲೈಃ ಕರೈರಿವ ಮರೀಚಿಮಾನ್ ॥ ೧೨

ವಿತ್ರಸ್ತಪ್ರಸೃತಾಸ್ತಸ್ಮಿನ್ ಕೃಷ್ಣಸಾರಾಃ ಪ್ರಧಾವಿತೇ ।
ಬಭುಃ ಪೂರ್ವಾಭಿಭೂತಾನಾಂ ಕಟಾಕ್ಷಾಃ ಕಕುಭಾಮಿವ ॥ ೧೩

ರೇಜೇ ರಕ್ತಾರುಣಾ ಚಾಸ್ಯ ಮಹೀ ಮಹಿಷಘಾತಿನಃ ।
ಸೇವಾಗತೇವ ತಚ್ಛೃಂಗಪಾತಮುಕ್ತಾವನಾಬ್ಜಿನೀ ॥ ೧೪

ವ್ಯಾತ್ತವಕ್ತ್ರಪತತ್ಪ್ರಾಸಪ್ರೋತೇಷ್ವಪಿ ಮೃಗಾರಿಷು ।
ಸಾಂತರ್ಗರ್ಜಿತನಿಷ್ಕ್ರಾಂತಜೀವಿತೇಷು ತುತೋಷ ಸಃ ॥ ೧೫

ಶ್ವಾನಃ ಶ್ವಭ್ರೇ ವನೇ ತಸ್ಮಿಂಸ್ತಸ್ಯ ವರ್ತ್ಮಸು ವಾಗುರಾಃ ।
ಸಾ ಸ್ವಾಯುಧೈಕಸಿದ್ಧೇಽಭೂತ್ ಪ್ರಕ್ರಿಯಾ ಮೃಗಯಾರಸೇ ॥ ೧೬

೧೭. ಹೀಗೆ ಸುಖೋಪಭೋಗಗಳಲ್ಲಿ ತೊಡಗಿದ್ದ ರಾಜನು ಒಮ್ಮೆ ಆಸ್ಥಾನ ಮಂಡಪದಲ್ಲಿದ್ದಾಗ ನಾರದಮುನಿಯು ಅವನ ಬಳಿ ಬಂದನು.

೧೮. ತೇಜಸ್ವಿಗಳ ವರ್ಗದ ಮೇಲಿನ ಪ್ರೀತಿಯಿಂದ ಅವತಾರ ಮಾಡಿದ ಸೂರ್ಯನಂತೆ ತನ್ನ ದೇಹದ ಕಾಂತಿಯಿಂದ ಮಂಡಲವನ್ನು ರಚಿಸಿದ ಆ ನಾರದನು ದೇವಲೋಕದ ಅಲಂಕಾರದಂತೆ ಇದ್ದನು.

೧೯. (ವಿನಯದಿಂದ) ಬಗ್ಗಿದ ರಾಜನು ಅವನಿಗೆ ಆತಿಥ್ಯವನ್ನು ಮಾಡಿದನು. ಸಂತುಷ್ಟನಾಗಿ ಮುನಿಯು ಒಂದು ಕ್ಷಣ ಇದ್ದು ರಾಜನಿಗಿಂತೆಂದನು.

೨೦. ""ವತ್ಸೇಶ್ವರ, ಕೇಳು. ಇದನ್ನು ನಿನಗೆ ಸಂಕ್ಷಿಪ್ತವಾಗಿ ಹೇಳುತ್ತೇನೆ. ನಿನ್ನ ಬಹು ಹಿಂದಿನ ಪಿತಾಮಹ ಪಾಂಡುವೆಂಬ ರಾಜನಿದ್ದನು.

೨೧. ಮಹಾತೇಜಸ್ವಿಯಾದ ಅವನಿಗೂ ನಿನಗಿರುವಂತೆ ಇಬ್ಬರು ಸುಂದರಿಯರಾದ ಮಡದಿಯರಿದ್ದರು. ಒಬ್ಬಳು ಕುಂತಿ, ಇನ್ನೊಬ್ಬಳು ಮಾದ್ರಿ.

೨೨. ಆ ಪಾಂಡುರಾಜನು ಸಮುದ್ರವನ್ನೇ ಒಡ್ಯಾಣವಾಗಿ ಹೊಂದಿರುವ ಈ ಭೂಮಿಯನ್ನು ಗೆದ್ದು ಸುಖಿಯಾಗಿದ್ದು ಒಮ್ಮೆ ಬೇಟೆಯ ಹವ್ಯಾಸದಿಂದ ಕಾಡಿಗೆ ಹೋದನು.

೨೩. ಅಲ್ಲಿ ಕಿಂದಮನೆಂಬ ಋಷಿಯು ಭಾರ್ಯಾಸಹಿತನಾಗಿ ಜಿಂಕೆಯ ರೂಪವನ್ನು ಧರಿಸಿ ಸಂಭೋಗದಲ್ಲಿದ್ದಾಗ ಪಾಂಡುರಾಜನು ಬಾಣವನ್ನು ಅವನಿಗೆ ಹೊಡೆದನು.

---

ಏವಂ ಸುಖೋಪಭೋಗೇಷು ವರ್ತಮಾನಂ ತಮೇಕದಾ ।
ರಾಜಾನಮಾಸ್ಥಾನಗತಂ ನಾರದೋ ಮುನಿರಭ್ಯಗಾತ್ ॥ ೧೭
ನಿಜದೇಹಪ್ರಭಾಬದ್ಧಮಂಡಲೋ ಮಂಡನಂ ದಿವಃ ।
ಕೃತಾವತಾರಸ್ತೇಜಸ್ವಿಜಾತಿಪ್ರೀತ್ಯಾಂಶುಮಾನಿವ ॥ ೧೮
ಸ ತೇನ ರಚಿತಾತಿಥ್ಯೋ ಮುಹುಃ ಪ್ರಹ್ವೇಣ ಭೂಭೃತಾ ।
ಪ್ರೀತಃ ಕ್ಷಣಮಿವ ಸ್ಥಿತ್ವಾ ರಾಜಾನಂ ತಮಭಾಷತ ॥ ೧೯
ಶೃಣು ಸಂಕ್ಷಿಪ್ತಮೇತತ್ತೇ ವತ್ಸೇಶ್ವರ ವದಾಮ್ಯಹಮ್ ।
ಬಭೂವ ಪಾಂಡುರಿತಿ ತೇ ರಾಜಾ ಪೂರ್ವಪಿತಾಮಹಃ ॥ ೨೦
ತವೇವ ತಸ್ಯ ದ್ವೇ ಏವ ಭವ್ಯೇ ಭಾರ್ಯೇ ಬಭೂವತುಃ ।
ಏಕಾ ಕುಂತೀ ದ್ವಿತೀಯಾ ಚ ಮಾದ್ರೀ ನಾಮ ಮಹೌಜಸಃ ॥ ೨೧
ಸ ಪಾಂಡುಃ ಪೃಥಿವೀಮೇತಾಂ ಜಿತ್ವಾ ಜಲಧಿಮೇಖಲಾಮ್ ।
ಸುಖೀ ಕದಾಚಿತ್ ಪ್ರಯಯೌ ಮೃಗಯಾವ್ಯಸನೀ ವನಮ್ ॥ ೨೨
ತತ್ರ ಕಿಂದಮನಾಮಾನಂ ಸ ಮುನಿಂ ಮುಕ್ತಸಾಯಕಃ ।
ಜಘಾನ ಮೃಗರೂಪೇಣ ಸಭಾರ್ಯಂ ಸುರತಸ್ಥಿತಮ್ ॥ ೨೩

೨೪. ಆ ಋಷಿಯು ಮೃಗರೂಪವನ್ನು ತ್ಯಜಿಸಿ, ಪ್ರಾಣಗಳು ಕುತ್ತಿಗೆಯಲ್ಲಿ ಸುತ್ತುತ್ತಿರುವಾಗ, ಬಾಣವನ್ನು ಬಿಟ್ಟು ವಿಷಾದದಿಂದ ತುಂಬಿದ್ದ ಪಾಂಡುವಿಗೆ ಶಾಪವನ್ನಿತ್ತನು.

೨೫. "ನನ್ನಪಾಡಿಗೆ ಸುಖವನ್ನು ಅನುಭವಿಸುತ್ತಿದ್ದ ನನ್ನನ್ನು ಹಿಂದೆಮುಂದೆ ನೋಡದೆ ನೀನು ಕೊಂದುಬಿಟ್ಟೆ ಆದ್ದರಿಂದ ಹೆಂಡತಿಯೊಡನೆ ಸಂಭೋಗ ಮಾಡಿದಾಗ ನಿನಗೂ ನನ್ನಂತೆ ಮರಣ ಉಂಟಾಗುವುದು.'

೨೬. ಹೀಗೆ ಶಾಪಕ್ಕೆ ಈಡಾದ ಪಾಂಡು ಶಾಪಭಯದಿಂದ ಸುಖದ ಆಸೆಯನ್ನು ಬಿಟ್ಟು ಶಾಂತವಾದ ತಪೋವನದಲ್ಲಿ ತನ್ನಿಬ್ಬರು ಪತ್ನಿಯರೊಂದಿಗೆ ಇದ್ದುಬಿಟ್ಟನು.

೨೭. ಅಲ್ಲಿದ್ದರೂ ಅವನು ಶಾಪದಿಂದ ಪ್ರೇರಿತನಾಗಿ ಅಕಸ್ಮಾತ್ತಾಗಿ ಒಂದು ಸಲ ಮಾದ್ರಿಯ ಸಂಗವನ್ನು ಬಯಸಿ ಮರಣ ಹೊಂದಿದನು.

೨೮. ಹೀಗೆ ಬೇಟೆ ಎನ್ನುವುದು ರಾಜರಿಗೆ ಒಂದು ಪ್ರಮಾದವು. ಅದರಿಂದ ಅನೇಕ ರಾಜರೂ ಮೃಗಗಳಂತೆ ನಾಶ ಹೊಂದಿದರು.

೨೯. ಬೇಟೆಯ ಸದ್ದು ಭಯಂಕರ. ಅದರ ಒಂದೇ ಗುರಿ ಮಾಂಸ. ಕಠೋರವಾದ ಹೊಗೆಯೇ ಬೇಟೆಯ ತಲೆಗೂದಲು, ಕುಂತ ಮುಂತಾದ ಆಯುಧ ಅದರ ಹಲ್ಲು. ಹೀಗೆ ರಾಕ್ಷಸಿಯಂತಿರುವ ಬೇಟೆ ಹೇಗೆ ಒಳ್ಳೆಯದನ್ನು ಮಾಡೀತು ?

---

ಸ ಮುನಿರ್ಮೃಗರೂಪಂ ತತ್ ತ್ಯಕ್ತ್ವಾ ಕಂಠವಿವರ್ತಿಭಿಃ ।
ಪ್ರಾಣೈಃ ಶಶಾಪ ತಂ ಪಾಂಡುಂ ವಿಷಣ್ಣಂ ಮುಕ್ತಕಾರ್ಮುಕಮ್ ॥ ೨೪
ಸ್ವೈರಸ್ಥೋ ನಿರ್ವಿಮರ್ಶೇನ ಹತೋಽಹಂ ಯತ್ತ್ವಯಾ ತತಃ ।
ಭಾರ್ಯಾಸಂಭೋಗಕಾಲೇ ತೇ ಮದ್ವನ್ಮೃತ್ಯುರ್ಭವಿಷ್ಯತಿ ॥ ೨೫
ಇತ್ಯಾಪ್ತಶಾಪಸ್ತದ್‌ಭೀತ್ಯಾ ತ್ಯಕ್ತಭೋಗಸ್ಪೃಹೋಽಥ ಸಃ ।
ಪತ್ನೀಭ್ಯಾಮನ್ವಿತಃ ಪಾಂಡುಸ್ತಸ್ಥೌ ಶಾಂತೇ ತಪೋವನೇ ॥ ೨೬
ತತ್ರಸ್ಥೋಽಪಿ ಸ ಶಾಪೇನ ಪ್ರೇರಿತಸ್ತೇನ ಚೈಕದಾ ।
ಅಕಸ್ಮಾಚ್ಚಕಮೇ ಮಾದ್ರೀಂ ಪ್ರಿಯಾಂ ಪ್ರಾಪ ಚ ಪಂಚತಾಮ್ ॥ ೨೭
ತದೇವಂ ಮೃಗಯಾ ನಾಮ ಪ್ರಮಾದೋ ನೃಪ ಭೂಭೃತಾಮ್ ।
ಕ್ಷಪಿತಾ ಹ್ಯನಯಾನ್ಯೇಪಿ ನೃಪಾಸ್ತೇತೇ ಮೃಗಾ ಇವ ॥ ೨೮
ಘೋರನಾದಾಮಿಷೈಕಾಗ್ರಾ ರೂಕ್ಷಾ ಧೂಮ್ರೋರ್ಧ್ವಮೂರ್ಧಜಾ ।
ಕುಂತದಂತಾ ಕಥಂ ಕುರ್ಯಾದ್ ರಾಕ್ಷಸೀವ ಹಿ ಸಾ ಶಿವಮ್ ॥ ೨೯

೩೦. ಆದ್ದರಿಂದ ನಿಷ್ಫಲವೂ ಆಯಾಸಕರವೂ ಆದ ಬೇಟೆಯನ್ನು ಬಿಟ್ಟು ಬಿಡು. (ಬೇಟೆಯಲ್ಲಿ) ಕಾಡಿನ ಪ್ರಾಣಿಗೂ, ಬೇಟೆಗಾರನ ವಾಹನಕ್ಕೂ ಬೇಟೆಗಾರನಿಗೂ ಪ್ರಾಣಸಂಶಯವು ಸಮಾನ.

೩೧. ಮಂಗಳಭಾಜನನೆ, ನಿನ್ನ ಪೂರ್ವಪುರುಷರ ಮೇಲೆ (ನನಗಿರುವ) ಪ್ರೀತಿಯಿಂದ ನೀನೂ ನನಗೆ ಇಷ್ಟನಾದವನಾಗಿರುವೆ. ನಿನಗೆ ಮನ್ಮಥಾಂಶನಾದ ಮಗನು ಹೇಗೆ ಹುಟ್ಟುವನೆಂಬ ಬಗೆಗೆ ಕೇಳು.

೩೨. ಹಿಂದೆ ಮನ್ಮಥನ ಶರೀರವು ಮತ್ತೆ ಬರುವುದಕ್ಕೋಸ್ಕರ ರತಿಯು ಶಿವನನ್ನು ಸ್ತುತಿಗಳಿಂದ ಅರ್ಚಿಸಿದಾಗ ಸಂತುಷ್ಟನಾದ ಶಿವನು ಸಂಕ್ಷಿಪ್ತವಾಗಿ ಹೀಗೆ ಹೇಳಿದನು.

೩೩. ಗೌರಿಯು ತನ್ನ ಅಂಶದಿಂದ ತಾನೇ ಭೂಲೋಕದಲ್ಲಿ ಅವತರಿಸಿ ನನ್ನನ್ನು ಪೂಜಿಸಿ ಮಗನನ್ನು ಪಡೆಯಲು ಬಯಸಿ ಮನ್ಮಥನನ್ನು ಹೆರುವಳು.

೩೪. ದೊರೆಯೆ, ಈ ಕಾರಣದಿಂದ ಆ ದೇವಿಯು ಚಂಡಮಹಾಸೇನನ ಮಗಳಾಗಿ ಹುಟ್ಟಿ ವಾಸವದತ್ತೆಯಾದಳು. ಆಮೇಲೆ ಅವಳು ನಿನ್ನ ಮಡದಿಯಾದಳು.

೩೫ ಆದ್ದರಿಂದ ಇವಳು ಶಿವನನ್ನು ಆರಾಧಿಸಿ ಮನ್ಮಥನ ಅಂಶದ ಮಗನನ್ನು ಹೆರುವಳು. ಅವನು ಎಲ್ಲ ವಿದ್ಯಾಧರರ ಚಕ್ರವರ್ತಿಯಾಗುವನು."

---

ತಸ್ಮಾದ್ ವಿಫಲಮಾಯಾಸಂ ಜಹೀಹಿ ಮೃಗಯಾರಸಮ್ ।
ವನ್ಯವಾಹನಹಂತೄಣಾಂ ಸಮಾನಃ ಪ್ರಾಣಸಂಶಯಃ ॥ ೩೦

ತ್ವಂ ಚ ತ್ವತ್ಪೂರ್ವಜಪ್ರೀತ್ಯಾ ಪ್ರಿಯಃ ಕಲ್ಯಾಣಪಾತ್ರ ಮೇ ।
ಪುತ್ರಶ್ಚ ತವ ಕಾಮಾಂಶೋ ಯಥಾ ಭಾವೀ ತಥಾ ಶೃಣು ॥ ೩೧

ಪುರಾನಂಗಾಂಗಸಂಭೂತ್ಯೈ ರತ್ಯಾ ಸ್ತುತಿಭಿರರ್ಚಿತಃ ।
ತುಷ್ಟೋ ರಹಸಿ ಸಂಕ್ಷೇಪಮಿದಂ ತಸ್ಯಾಃ ಶಿವೋಽಭ್ಯಧಾತ್ ॥ ೩೨

ಅವತೀರ್ಯ ನಿಜಾಂಶೇನ ಭೂಮಾವಾರಾಧ್ಯ ಮಾಂ ಸ್ವಯಮ್ ।
ಗೌರೀ ಪುತ್ರಾರ್ಥಿನೀ ಕಾಮಂ ಜನಯಿಷ್ಯತ್ಯಸಾವಿತಿ ॥ ೩೩

ಅತಶ್ಚಂಡಮಹಾಸೇನಸುತಾ ದೇವೀ ನರೇಂದ್ರ ಸಾ ।
ಜಾತಾ ವಾಸವದತ್ತೇಯಂ ಸಂಪನ್ನಾ ಮಹಿಷೀ ಚ ತೇ ॥ ೩೪

ತದೇಷಾ ಶಂಭುಮಾರಾಧ್ಯ ಕಾಮಾಂಶಂ ಸೋಷ್ಯತೇ ಸುತಮ್ ।
ಸರ್ವವಿದ್ಯಾಧರಾಣಾಂ ಯಶ್ಚಕ್ರವರ್ತೀ ಭವಿಷ್ಯತಿ ॥ ೩೫

೩೬. ಆದರಕ್ಕೆ ಪಾತ್ರವಾದ ಈ ಮಾತುಗಳನ್ನಾಡಿದ ನಾರದಮಹರ್ಷಿಗೆ ರಾಜನು ಪೃಥ್ವಿಯನ್ನೆಲ್ಲ ಅರ್ಪಿಸಿದನು. ಆದರೆ ಅವನು ಅದನ್ನು ಅವನಿಗೇ ಹಿಂದಿರುಗಿಸಿ ಅದೃಶ್ಯನಾದನು.

೩೭. ನಾರದನು ಹೋಗಲು ವತ್ಸರಾಜನು ಆ ದಿನವನ್ನು ಮಗನಿಗಾಗಿ ಹಂಬಲಿಸುತ್ತಿದ್ದ ವಾಸವದತ್ತೆಯೊಡನೆ ಅದೇ ಚಿಂತೆಯಲ್ಲೇ ಕಳೆದನು.

೩೮. ಮತ್ತೊಂದು ದಿನ ದ್ವಾರಪಾಲಕರಲ್ಲಿ ಹಿರಿಯನಾದ ನಿತ್ಯೋದಿತನೆಂಬುವನು ಆಸ್ಥಾನದಲ್ಲಿದ್ದ ವತ್ಸರಾಜನ ಬಳಿಗೆ ಬಂದು ಇಂತು ವಿಜ್ಞಾಪಿಸಿದನು.

೩೯. '"ಮಹಾರಾಜ, ಯಾವಳೋ ಒಬ್ಬ ಬಡ ಬ್ರಾಹ್ಮಣ ಹೆಂಗಸು ಇಬ್ಬರು ಮಕ್ಕಳೊಡನೆ ಬಂದು ಬಾಗಿಲಲ್ಲಿ ನಿಂತಿದ್ದಾಳೆ. ಅವಳು ತಮ್ಮ ದರ್ಶನವನ್ನು ಅಪೇಕ್ಷಿಸುತ್ತಾಳೆ".

೪೦. ಆ ಮಾತನ್ನು ಕೇಳಿದೊಡನೆಯೇ ದೊರೆಯು ಅವಳು ಒಳಗೆ ಬರಲು ಅನುಮತಿಸಿದನು. ಕೃಶಳಾಗಿ ಬಿಳಿಚಿಕೊಂಡಿದ್ದು ಧೂಳಿನಿಂದ ಮುಚ್ಚಿಹೋಗಿದ್ದ ಆ ಬ್ರಾಹ್ಮಣಿಯು ಒಳಗೆ ಬಂದಳು.

೪೧. ಹರಿದುಹೋದ ಅಭಿಮಾನವೋ ಎಂಬಂತಿದ್ದ ಬಟ್ಟೆಯು ಅವಳನ್ನು ಕಂಗೆಡಿಸಿತ್ತು. ದುಃಖ ಮತ್ತು ದೈನ್ಯಗಳಂತೆ ಇದ್ದ ಇಬ್ಬರು ಮಕ್ಕಳನ್ನು ಅವಳು ಮಡಿಲಿಗೆ ಅವಚಿಕೊಂಡಿದ್ದಳು.

---

ಇತ್ಯುಕ್ತೇನಾದೃತವಚಾ ರಾಜ್ಞಾ ಪೃಥ್ವೀಂ ತದರ್ಪಿತಾಮ್ ।
ಪ್ರತ್ಯರ್ಪ್ಯ ತಸ್ಮೈ ಸ ಯಯೌ ನಾರದರ್ಷಿರದರ್ಶನಮ್ ॥ ೩೬
ತಸ್ಮಿನ್ ಗತೇ ವತ್ಸರಾಜಃ ಸ ತದ್ ವಾಸವದತ್ತಯಾ ।
ಜಾತಪುತ್ರೇಚ್ಛಯಾ ಸಾಕಂ ನಿನ್ಯೇ ತಚ್ಚಿಂತಯಾ ದಿನಮ್ ॥ ೩೭
ಅನ್ಯೇದ್ಯುಸ್ತಂ ಸ ವತ್ಸೇಶಮುಪೇತ್ಯಾಸ್ಥಾನವರ್ತಿನಮ್ ।
ನಿತ್ಯೋದಿತಾಖ್ಯಃ ಪ್ರವರಃ ಪ್ರತೀಹಾರೋ ವ್ಯಜಿಜ್ಞಪತ್ ॥ ೩೮
ಶಿಶುಕದ್ವಯಸಂಯುಕ್ತಾ ಬ್ರಾಹ್ಮಣೀ ಕಾಪಿ ದುರ್ಗತಾ ।
ದ್ವಾರಿ ಸ್ಥಿತಾ ಮಹಾರಾಜ ದೇವದರ್ಶನಕಾಂಕ್ಷಿಣೀ ॥ ೩೯
ತಚ್ಛ್ರುತ್ವೈವಾಭ್ಯನುಜ್ಞಾತೇ ತತ್ಪ್ರವೇಶೇ ಮಹೀಭೃತಾ ।
ಬ್ರಾಹ್ಮಣೀ ಸಾ ವಿವೇಶಾತ್ರ ಕೃಶಪಾಂಡುರಧೂಸರಾ ॥ ೪೦
ಮಾನೇನೇವ ವಿಶೀರ್ಣೇನ ವಾಸಸಾ ವಿಧುರೀಕೃತಾ ।
ದುಃಖದೈನ್ಯನಿಭಾವಂಕೇ ಬಿಭ್ರತೀ ಬಾಲಕಾವುಭೌ ॥ ೪೧

೪೨. ಆ ಸ್ಥಾನಕ್ಕೆ ಉಚಿತವಾಗಿ ಅವಳು ನಮಸ್ಕಾರವನ್ನು ಮಾಡಿ ರಾಜನಿಗಿಂತು ಬಿನ್ನವಿಸಿದಳು. "" ಒಳ್ಳೆಯ ಕುಲದಲ್ಲಿ ಹುಟ್ಟಿದ ಬ್ರಾಹ್ಮಣಹೆಂಗಸಾದ ನಾನು ಈ ರೀತಿಯ ದುರ್ದಶೆಗೆ ಈಡಾಗಿದ್ದೇನೆ

೪೩. ದೊರೆಯೇ, ಅದೃಷ್ಟವಶಾತ್ ನನಗೆ ಈ ಇಬ್ಬರು ಮಕ್ಕಳು ಒಟ್ಟಿಗೆ ಹುಟ್ಟಿದ್ದಾರೆ. ನನಗೆ ಊಟವೇ ಇಲ್ಲದುದರಿಂದ ಇವರಿಗೆ ಎದೆ ಹಾಲೂ ಇಲ್ಲವಾಗಿದೆ

೪೪. ಕಷ್ಟದಲ್ಲಿರುವವರಿಗೂ ತಬ್ಬಲಿಗಳಿಗೂ ಶರಣಾಗತರಿಗೂ ಪ್ರೀತಿಯನ್ನೆರೆಯುವ ದೊರೆಯಲ್ಲಿ ನಾನು ಶರಣವನ್ನು ಕೋರಿ ಬಂದಿದ್ದೇನೆ. ಈಗ ಪ್ರಭುವೇ ದಿಕ್ಕು ತೋರಿಸಬೇಕು."

೪೫ ಆ ಮಾತನ್ನು ಕೇಳಿ ದಯೆ ತೋರಿದ ರಾಜನು ಪ್ರತೀಹಾರಿಗೆ ""ಇವಳನ್ನು ಕರೆದುಕೊಂಡು ಹೋಗಿ ದೇವಿ ವಾಸವದತ್ತೆಗೆ ಅರ್ಪಿಸು" ಎಂದು ಆಣತಿಯನ್ನಿತ್ತನು.

೪೬ ಆಗ ಅವಳ ಶುಭಕರ್ಮವೇ ಅವಳನ್ನು ಒಯ್ಯುತ್ತಿದೆಯೋ ಎಂಬಂತೆ ಮುಂದೆ ನಡೆದ ಪ್ರತೀಹಾರಿಯು ಅವಳನ್ನು ರಾಣಿಯ ಬಳಿಗೆ ಒಯ್ದನು.

೪೭ ಹಾಗೆ ಬಂದ ಅವಳನ್ನು ರಾಜನೇ ಕಳುಹಿಸಿದ್ದನೆಂಬುದನ್ನು ದ್ವಾರಪಾಲಕನಿಂದ ಅರಿತು ರಾಣಿ ವಾಸವದತ್ತೆಯು ಆ ಬ್ರಾಹ್ಮಣಮಹಿಳೆಯ ವಿಷಯದಲ್ಲಿ ಹೆಚ್ಚು ಆದರವನ್ನು ತೋರಿಸಿದಳು.

---

ಕೃತೋಚಿತಪ್ರಣಾಮಾ ಚ ಸಾ ರಾಜಾನಂ ವ್ಯಜಿಜ್ಞಪತ್ ।
ಬ್ರಾಹ್ಮಣೀ ಕುಲಜಾ ಚಾಹಮೀದೃಶೀಂ ದುರ್ಗತಿಂ ಗತಾ ॥ ೪೨
ದೈವಾದ್ ಯುಗಪದೇತೌ ಚ ಜಾತೌ ದ್ವೌ ತನಯೌ ಮಮ ।
ತದ್ದೇವ ನಾಸ್ತಿ ಮೇ ಸ್ತನ್ಯಮೇತಯೋರ್ಭೋಜನಂ ವಿನಾ ॥ ೪೩
ತೇನೇಹ ಕೃಪಣಾನಾಥಶರಣಾಗತವತ್ಸಲಮ್ ।
ಪ್ರಾಪ್ತಾಸ್ಮಿ ದೇವಂ ಶರಣಂ ಪ್ರಮಾಣಮಧುನಾ ಪ್ರಭುಃ ॥ ೪೪
ತಚ್ಛ್ರುತ್ವಾ ಸದಯೋ ರಾಜಾ ಸ ಪ್ರತೀಹಾರಮಾದಿಶತ್ ।
ಇಯಂ ವಾಸವದತ್ತಾಯೈ ದೇವ್ಯೈ ನೀತ್ವಾರ್ಪ್ಯತಾಮಿತಿ ॥ ೪೫
ತತಶ್ಚ ಕರ್ಮಣಾ ಸ್ವೇನ ಶುಭೇನೇವಾಗ್ರಯಾಯಿನಾ ।
ನೀತಾಭೂನ್ನಿಕಟಂ ದೇವ್ಯಾಃ ಪ್ರತೀಹಾರೇಣ ತೇನ ಸಾ ॥ ೪೬
ರಾಜ್ಞಾ ವಿಸೃಷ್ಟಾಂ ಬುದ್ಧ್ವಾ ತಾಂ ಪ್ರತೀಹಾರಾದುಪಾಗತಾಮ್ ।
ದೇವೀ ವಾಸವದತ್ತಾ ಸಾ ಬ್ರಾಹ್ಮಣ್ಯಾಂ ಶ್ರದ್ದಧೇತರಾಮ್ ॥ ೪೭

೪೮. ಅವಳಿಮಕ್ಕಳನ್ನು ಹಡೆದಿದ್ದ ಆ ಬಡವಿಯನ್ನು ನೋಡಿ ರಾಣಿಯು ಹೀಗೆ ಚಿಂತಿಸತೊಡಗಿದಳು. "'ಆಹಾ, ಈ ಬ್ರಹ್ಮನ ವರ್ತನೆ ಯಾವಾಗಲೂ ವಿರುದ್ಧವಾಗಿಯೇ ಇರುತ್ತದೆ.

೪೯. ಒಳ್ಳೆಯ ಪದಾರ್ಥದಲ್ಲಿ ಅವನಿಗೆ ಮತ್ಸರ, ಕೆಟ್ಟ ಪದಾರ್ಥದಲ್ಲಿ ಪ್ರೀತಿ. ಇಷ್ಟು ಕಾಲವಾದರೂ ನನಗೆ ಒಬ್ಬ ಮಗನೂ ಹುಟ್ಟಲಿಲ್ಲ. ಇವಳಿಗಾದರೋ ಅವಳಿ ಮಕ್ಕಳು".

೫೦. ಹೀಗೆ ಆಲೋಚಿಸುತ್ತಿದ್ದ ರಾಣಿಯು ಆ ಬ್ರಾಹ್ಮಣಹೆಂಗಸು ಸ್ನಾನ ಮಾಡಲೆಂದು ದಾಸಿಯರನ್ನು ಅವಳಿಗೆ ಸ್ನಾನ ಮಂತಾದುವುಗಳನ್ನು ಮಾಡಿಸಲು ನಿಯೋಜಿಸಿದಳು.

೫೧. ಆ ದಾಸಿಯರು ಆ ಬ್ರಾಹ್ಮಣಿಗೆ ಮೀಯಿಸಿ ಬಟ್ಟೆಯನ್ನುಡಿಸಿ ರುಚಿಕಟ್ಟಾದ ಊಟ ಮಾಡಿಸಿದ ಮೇಲೆ ಆಕೆಯು ಬಿಸಿಲಿಗೆ ಒಣಗಿದ್ದು ಮಳೆಯಿಂದ ತೊಯ್ದ ಭೂಮಿಯಂತೆ ಸುಖವಾಗಿ ಉಸಿರಾಡಿದಳು.

೫೨. ಸಮಾಧಾನವನ್ನು ಹೊಂದಿದ ಅವಳನ್ನು ಮಾತುಕಥೆಗಳಿಂದ ಪರೀಕ್ಷಿಸುವುದಕ್ಕಾಗಿ ದೇವಿ ವಾಸವದತ್ತೆಯು ಕ್ಷಣಾಂತರದಲ್ಲಿ ಯುಕ್ತಿಯಿಂದ ಹೀಗೆ ನುಡಿದಳು.

೫೩. "'ಬ್ರಾಹ್ಮಣಿ, ನೀನು ನಮಗೆ ಯಾವುದಾದರೊಂದು ಕಥೆಯನ್ನು ಹೇಳು". ಅದನ್ನು ಕೇಳಿ ಅವಳು ಹಾಗೇ ಆಗಲಿ ಎಂದು ಕಥೆಯೊಂದನ್ನು ಹೇಳಲಾರಂಭಿಸಿದಳು.

---

ಯುಗ್ಮಾಪತ್ಯಾಂ ಚ ಪಶ್ಯಂತೀ ದೀನಾಮೇತಾಂ ವ್ಯಚಿಂತಯತ್ ।
ಅಹೋ ವಾಮೈಕವೃತ್ತಿತ್ವಂ ಕಿಮಪ್ಯೇತತ್ ಪ್ರಜಾಪತೇಃ ॥ ೪೮
ಅಹೋ ವಸ್ತುನಿ ಮಾತ್ಸರ್ಯಮಹೋ ಭಕ್ತಿರವಸ್ತುನಿ ।
ನಾದ್ಯಾಪ್ಯೇಕೋಽಪಿ ಮೇ ಜಾತೋ ಜಾತೌ ತ್ವಸ್ಯಾಂ ಯಮಾವಿಮೌ ॥ ೪೯
ಏವಂ ಸಂಚಿಂತಯಂತೀ ಚ ಸಾ ದೇವೀ ಸ್ನಾನಕಾಂಕ್ಷಿಣೀ ।
ಬ್ರಾಹ್ಮಣ್ಯಾಶ್ಚೇಟಿಕಾಸ್ತಸ್ಯಾಃ ಸ್ನಪನಾದೌ ಸಮಾದಿಶತ್ ॥ ೫೦
ಸ್ನಪಿತಾ ದತ್ತವಸ್ತ್ರಾ ಚ ತಾಭಿಃ ಸ್ವಾದು ಚ ಭೋಜಿತಾ ।
ಬ್ರಾಹ್ಮಣೀ ಸಾಂಬುಸಿಕ್ತೇವ ತಪ್ತಾ ಭೂಃ ಸಮುದಶ್ವಸತ್ ॥ ೫೧
ಸಮಾಶ್ವಸ್ತಾ ಚ ಸಾ ಯುಕ್ತ್ಯಾ ಕಥಾಲಾಪೈಃ ಪರೀಕ್ಷಿತುಮ್ ।
ಕ್ಷಣಾಂತರೇ ನಿಜಗದೇ ದೇವ್ಯಾ ವಾಸವದತ್ತಯಾ ॥ ೫೨
ಭೋ ಬ್ರಾಹ್ಮಣಿ ಕಥಾ ಕಾಚಿತ್ ತ್ವಯಾ ನಃ ಕಥ್ಯತಾಮಿತಿ ।
ತಚ್ಛ್ರುತ್ವಾ ಸಾ ತಥೇತ್ಯುಕ್ತ್ವಾ ಕಥಾಂ ವಕ್ತುಂ ಪ್ರಚಕ್ರಮೇ ॥ ೫೩

## ದೇವದತ್ತನೆಂಬ ರಾಜಪುತ್ರನ ಕಥೆ

೨೪. ಹಿಂದೆ ಜಯದತ್ತನೆಂಬ ಒಬ್ಬ ಸಾಧಾರಣ ದೊರೆ ಇದ್ದನು. ಅವನಿಗೆ ದೇವದತ್ತನೆಂಬ ಮಗನು ಹುಟ್ಟಿದನು.

೨೫. ಆ ಮಗನು ಹರೆಯಕ್ಕೆ ಬಂದಾಗ ಅವನ ಮದುವೆಯನ್ನು ಮಾಡಲು ಅಪೇಕ್ಷಿಸಿದ ವಿವೇಕಿಯಾಗಿದ್ದ ದೊರೆಯು ಹೀಗೆ ಆಲೋಚಿಸಿದನು.

೨೬. "ರಾಜಲಕ್ಷ್ಮಿ ವೇಶ್ಯೆಯಂತೆ ಅತಿ ಚಂಚಲೆ. ಅವಳನ್ನು ಶಕ್ತಿಶಾಲಿಗಳೇ ಭೋಗಿಸಬೇಕಾಗುತ್ತದೆ. ವ್ಯಾಪಾರಿಗಳ ಸಂಪತ್ತಾದರೋ ಕುಲನಾರಿಯಂತೆ ಬೇರೆ ಯಾರ ಬಳಿಗೂ ಹೋಗದೆ ಸ್ಥಿರವಾಗಿರುತ್ತದೆ.

೨೭. ಆದ್ದರಿಂದ ಮಗನ ಮದುವೆಯನ್ನು ವ್ಯಾಪಾರಿಗಳ ಮನೆಯಿಂದ (ಹೆಣ್ಣನ್ನು ತಂದು) ಮಾಡುತ್ತೇನೆ. ಅದರಿಂದ ಅನೇಕ ವಾರಸುದಾರರಿರುವ ರಾಜ್ಯದಲ್ಲಿ ನನ್ನ ಮಗನಿಗೆ ಅಪಾಯವಿರುವುದಿಲ್ಲ.'

೨೮. ಹೀಗೆ ನಿಶ್ಚಯಿಸಿ ಆ ರಾಜನು ಮಗನಿಗೋಸ್ಕರ ಪಾಟಲೀಪುತ್ರನಗರದ ವ್ಯಾಪಾರಿಯಾಗಿದ್ದ ವಸುದತ್ತನ ಮಗಳನ್ನು ಕೊಡಬೇಕೆಂದು ಕೋರಿದನು.

೨೯. ಪ್ರಶಸ್ತವಾದ ಸಂಬಂಧವು ದೊರಕುವುದೆಂಬ ಆಸೆಯಿಂದ ಆ ವಸುದತ್ತನು ತನ್ನ ಮಗಳನ್ನು ದೂರದೇಶದಲ್ಲಿದ್ದ ಆ ರಾಜಪುತ್ರನಿಗೆ ಕೊಟ್ಟನು.

---

ಪುರಾಭೂಜ್ಜಯದತ್ತಾಖ್ಯಃ ಸಾಮಾನ್ಯಃ ಕೋಽಪಿ ಭೂಪತಿಃ ।
ದೇವದತ್ತಾಭಿಧಾನಶ್ಚ ಪುತ್ರಸ್ತಸ್ಯೋದಪದ್ಯತ ॥ ೨೪
ಯೌವನಸ್ಥಸ್ಯ ತಸ್ಯಾಥ ವಿವಾಹಂ ತನಯಸ್ಯ ಸಃ ।
ವಿಧಾತುಮಿಚ್ಛನ್ನೃಪತಿರ್ಮತಿಮಾನಿತ್ಯಚಿಂತಯತ್ ॥ ೨೫
ವೇಶ್ಯೇವ ಬಲವದ್ ಭೋಗ್ಯಾ ರಾಜಶ್ರೀರತಿಚಂಚಲಾ ।
ವಣಿಜಾಂ ತು ಕುಲಸ್ತ್ರೀವ ಸ್ಥಿರಾ ಲಕ್ಷ್ಮೀರನನ್ಯಗಾ ॥ ೨೬
ತಸ್ಮಾದ್ವಿವಾಹಂ ಪುತ್ರಸ್ಯ ಕರೋಮಿ ವಣಿಜಾಂ ಗೃಹಾತ್ ।
ರಾಜ್ಯೇಽಸ್ಯ ಬಹುದಾಯಾದೇ ಯೇನ ನಾಪದ್ ಭವಿಷ್ಯತಿ ॥ ೨೭
ಇತಿ ನಿಶ್ಚಿತ್ಯ ಪುತ್ರಸ್ಯ ಕೃತೇ ವವ್ರೇ ಸ ಭೂಪತಿಃ ।
ವಣಿಜೋ ವಸುದತ್ತಸ್ಯ ಕನ್ಯಾಂ ಪಾಟಲಿಪುತ್ರಕಾತ್ ॥ ೨೮
ವಸುದತ್ತೋಽಪಿ ಸ ದದೌ ಶ್ಲಾಘ್ಯಸಂಬಂಧವಾಂಛಯಾ ।
ದೂರದೇಶಾಂತರೇಽಪ್ಯಸ್ಮೈ ರಾಜಪುತ್ರಾಯ ತಾಂ ಸುತಾಮ್ ॥ ೨೯

೬೦. ವಸುದತ್ತನು ಅಳಿಯನನ್ನು ಎಷ್ಟು ರತ್ನಗಳಿಂದ ತುಂಬಿಸಿ ಸತ್ಕರಿಸಿದನೆಂದರೆ, ಅವನಿಗೆ ತನ್ನ ತಂದೆಯ ವೈಭವದಲ್ಲಿದ್ದ ಗೌರವವೇ ಕಳಚಿಹೋಯಿತು. (ತಂದೆಯ ವೈಭವವನ್ನು ಮೀರಿಸಿತು).

೬೧. ಶ್ರೀಮಂತ ವ್ಯಾಪಾರಿಯ ಮಗಳೊಡನೆ ಬಂದ ತನ್ನ ಮಗನ ಜೊತೆಯಲ್ಲಿ ಜಯದತ್ತ ಮಹಾರಾಜನು ಸುಖವಾಗಿದ್ದನು.

೬೨. ಒಮ್ಮೆ ವ್ಯಾಪಾರಿ ವಸುದತ್ತನು ಬೀಗರ ಮನೆಗೆ ಬಂದು ಉತ್ಕಂಠಿತನಾಗಿ ಮಗಳನ್ನು ತನ್ನ ಮನೆಗೆ ಕರೆದುಕೊಂಡು ಹೋದನು.

೬೩. ಆಗ ಅಕಸ್ಮಾತ್ತಾಗಿ ಮಹಾರಾಜ ಜಯದತ್ತನು ದಿವಂಗತನಾದನು. ಅವನ ದಾಯಾದಿಗಳು ಬಲಿಷ್ಠರಾಗಿ ಆ ರಾಜ್ಯವನ್ನೆಲ್ಲ ಆಕ್ರಮಿಸಿಕೊಂಡರು.

೬೪. ಆ ದಾಯಾದಿಗಳಿಗೆ ಭಯಪಟ್ಟು ದೇವದತ್ತನ ತಾಯಿಯು ರಾತ್ರಿಯಲ್ಲೇ ಅವನನ್ನು ಯಾರಿಗೂ ಕಾಣಿಸದಂತೆ ಬೇರೆ ದೇಶಕ್ಕೆ ಕರೆದುಕೊಂಡು ಹೋಗಿಬಿಟ್ಟಳು.

೬೫–೬೬ ದುಃಖದಿಂದ ತುಂಬಿದ್ದ ಮನಸ್ಸಿನಿಂದ ತಾಯಿಯು ರಾಜಪುತ್ರನಿಗೆ, 'ಮಗನೆ, ಪೂರ್ವದಿಕ್ಕಿಗೆ ಒಡೆಯನಾದ ಚಕ್ರವರ್ತಿಯು ನಮಗೆ ಪ್ರಭುವಾಗಿ ಇದ್ದಾನೆ. ನೀನು ಅವನ ಬಳಿಗೆ ಹೋಗು. ಅವನು ನಮ್ಮ ರಾಜ್ಯವನ್ನು ಮತ್ತೆ ನಮಗೆ ದೊರಕಿಸಿಕೊಡುತ್ತಾನೆ' ಎಂದು ಹೇಳಿದಳು.

---

ಪೂರಯಾಮಾಸ ಚ ತಥಾ ರತ್ನೈರ್ಜಾಮಾತರಂ ಚ ತಮ್ ।
ಅಗಲದ್ ಬಹುಮಾನೋಽಸ್ಯ ಯಥಾ ಸ್ವಪಿತೃವೈಭವೇ ॥ ೬೦
ಅವಾಪ್ತಾಢ್ಯವಣಿಕ್‌ಪುತ್ರೀಸಹಿತೇನಾಥ ತೇನ ಸಃ ।
ತನಯೇನ ಸಮಂ ತಸ್ಥೌ ಜಯದತ್ತನೃಪಃ ಸುಖಮ್ ॥ ೬೧
ಏಕದಾ ತತ್ರ ಚಾಗತ್ಯ ಸೋತ್ಕಃ ಸಂಬಂಧಿಸದ್ಮನಿ ।
ಸ ವಣಿಗ್‌ವಸುದತ್ತಸ್ತಾಂ ನಿನಾಯ ಸ್ವಗೃಹಂ ಸುತಾಮ್ ॥ ೬೨
ತತೋಽಕಸ್ಮಾತ್ ಸ ನೃಪತಿರ್ಜಯದತ್ತೋ ದಿವಂ ಯಯೌ ।
ಉದ್ಭೂಯ ಗೋತ್ರಜೈಸ್ತಸ್ಯ ತಚ್ಚ ರಾಜ್ಯಮಧಿಷ್ಠಿತಮ್ ॥ ೬೩
ತದ್‌ಭೀತ್ಯಾ ತಸ್ಯ ತನಯೋ ಜನನ್ಯಾ ನಿಜಯಾ ನಿಶಿ ।
ದೇವದತ್ತಸ್ತು ನೀತೋಽಭೂದನ್ಯದೇಶಮಲಕ್ಷಿತಃ ॥ ೬೪
ತತ್ರಾಹ ರಾಜಪುತ್ರಂ ತಂ ಮಾತಾ ದುಃಖಿತಮಾನಸಾ ।
ದೇವೋಽಸ್ತಿ ಚಕ್ರವರ್ತೀ ನಃ ಪ್ರಭುಃ ಪೂರ್ವದಿಗೀಶ್ವರಃ ॥ ೬೫
ತತ್ಪಾರ್ಶ್ವಂ ವ್ರಜ ರಾಜ್ಯಂ ತೇ ಸಾಧಯಿಷ್ಯತಿ ವತ್ಸ ಸಃ ।
ಇತ್ಯುಕ್ತಃ ಸ ತದಾ ಮಾತ್ರಾ ರಾಜಪುತ್ರೋ ಜಗಾದ ತಾಮ್ ॥ ೬೬

೬೭. ಆಗ ರಾಜಪುತ್ರನು ನುಡಿದನು. ""ಅಲ್ಲಿಗೆ ನಾನು ಬರಿಗೈಯಲ್ಲಿ ಹೋದರೆ ಯಾರು ನನಗೆ ಮನ್ನಣೆ ಕೊಡುತ್ತಾರೆ?" ಅದನ್ನು ಕೇಳಿ ತಾಯಿ ಹೀಗೆ ನುಡಿದಳು.

೬೮. ""ನೀನು ಮಾವನ ಮನೆಗೆ ಹೋಗಿ ಅವರಿಂದ ಹಣವನ್ನು ಪಡೆದು ಬೇಕಾದ ವೈಭವವನ್ನು ಮಾಡಿಕೊಂಡು ಚಕ್ರವರ್ತಿಯ ಬಳಿಗೆ ಹೋಗು".

೬೯. ಹೀಗೆ ತಾಯಿಯಿಂದ ಪ್ರೇರಣೆಯನ್ನು ಪಡೆದ ರಾಜಪುತ್ರನು ನಾಚಿಕೆಯಾದರೂ (ಅಲ್ಲಿಂದ) ಹೊರಟು ಸಾಯಂಕಾಲ ಅವನ ಮಾವನ ಮನೆಯನ್ನು ತಲುಪಿದನು.

೭೦. ತಂದೆಯನ್ನೂ, ಸಂಪತ್ತನ್ನೂ ಕಳೆದು ಕೊಂಡುದರಿಂದ ಕಣ್ಣೀರು ಸುರಿದೀತು ಎಂಬ ಸಂಶಯದಿಂದ ನಾಚಿಕೆಯಾಗಿ ಇರುಳಿನ ಅವೇಳೆಯಲ್ಲಿ ಆ ಮನೆಯೊಳಗೆ ಪ್ರವೇಶಿಸಲು ಅವನಿಗೆ ಸಾಧ್ಯವೇ ಆಗಲಿಲ್ಲ.

೭೧. ಹತ್ತಿರದಲ್ಲೇ ಛತ್ರದ ಹೊರಗೆ ಇದ್ದ ದೇವದತ್ತನು ಮಾವನ ಮನೆಯಿಂದ ಇರುಳಿನಲ್ಲೇ ಹಗ್ಗದ ಮೂಲಕ ಇಳಿಯುತ್ತಿದ್ದ ಒಬ್ಬ ಹೆಂಗಸನ್ನು ಅಕಸ್ಮಾತ್ ಕಂಡನು.

೭೨. ತಕ್ಷಣವೇ ರತ್ನಗಳ ಹೊಳಪಿನಿಂದ ಝಗಝಗಿಸುತ್ತಿದ್ದು ಆಕಾಶದಿಂದ ಬಿದ್ದ ಉಲ್ಕೆಯಂತಿದ್ದ ಅವಳು ತನ್ನ ಹೆಂಡತಿಯೇ ಎಂದು ಗುರುತಿಸಿ ದೇವದತ್ತನು ತುಂಬ ನೊಂದನು.

---

ತತ್ರ ಮಾಂ ನಿಷ್ಪರಿಕರಂ ಗತಂ ಕೋ ಬಹು ಮಂಸ್ಯತೇ ।
ತಚ್ಛ್ರುತ್ವಾ ಪುನರಪ್ಯೇವಂ ಸಾ ಮಾತಾ ತಮಭಾಷತ ॥ ೬೭
ಶ್ವಶುರಸ್ಯ ಗೃಹಂ ಗತ್ವಾ ತ್ವಂ ಹಿ ಪ್ರಾಪ್ಯ ತತೋ ಧನಮ್ ।
ಕೃತ್ವಾ ಪರಿಕರಂ ಗಚ್ಛ ನಿಕಟಂ ಚಕ್ರವರ್ತಿನಃ ॥ ೬೮
ಇತಿ ಸ ಪ್ರೇರಿತೋ ಮಾತ್ರಾ ಸಲಜ್ಜೋಽಪಿ ನೃಪಾತ್ಮಜಃ ।
ಕ್ರಮಾತ್ ಪ್ರತಸ್ಥೇ ಸಾಯಂ ಚ ಪ್ರಾಪ ತಚ್ಛ್ವಾಶುರಂ ಗೃಹಮ್ ॥ ೬೯
ಪಿತೃಹೀನೋ ವಿನಷ್ಟಶ್ರೀರ್ಬಾಷ್ಪಪಾತಾಭಿಶಂಕಯಾ ।
ಅಕಾಲೇ ನಾಶಕಚ್ಚಾತ್ರ ಪ್ರವೇಷ್ಟುಂ ಲಜ್ಜಯಾ ನಿಶಿ ॥ ೭೦
ನಿಕಟೇ ಸತ್ರಬಾಹ್ಯೇಽಥ ಸ್ಥಿತಃ ಶ್ವಶುರಮಂದಿರಾತ್ ।
ನಕ್ತಂ ರಜ್ಜ್ವಾವರೋಹಂತೀಮಕಸ್ಮಾತ್ ಸ್ತ್ರಿಯಮೈಕ್ಷತ ॥ ೭೧
ಕ್ಷಣಾಚ್ಚ ಭಾರ್ಯಾಂ ಸ್ವಾಮೇವ ತಾಂ ರತ್ನದ್ಯುತಿಭಾಸ್ವರಾಮ್ ।
ಉಲ್ಕಾಮಿವಾಭ್ರಪತಿತಾಂ ಪರಿಜ್ಞಾಯಾಭ್ಯತಪ್ಯತ ॥ ೭೨

೨೩. ಅವಳಾದರೋ ಧೂಳಿನಿಂದ ಆವೃತನಾಗಿ ಕೃಶನಾಗಿದ್ದ ಅವನನ್ನು ನೋಡಿದರೂ ಗುರುತಿಸಲಿಲ್ಲ. "ನೀನು ಯಾರು ?' ಎಂದು ಅವಳು ಕೇಳಿದಳು. ಅದನ್ನು ಕೇಳಿ ಅವನು 'ನಾನೊಬ್ಬ ದಾರಿಹೋಕ' ಎಂದು ಹೇಳಿದನು.

೨೪. ಅನಂತರ ಆ ವ್ಯಾಪಾರಿಯ ಮಗಳು ಛತ್ರದೊಳಗೆ ಹೋದಳು. ರಾಜಪುತ್ರನೂ ಗುಟ್ಟಾಗಿ ಅವಳನ್ನು ಪರೀಕ್ಷಿಸಲು ಹಿಂಬಾಲಿಸಿದನು.

೨೫. ಅವಳು ಅಲ್ಲಿದ್ದ ಯಾವನೋ ಒಬ್ಬ ಪುರುಷನ ಬಳಿಗೆ ಹೋದಳು. ಅವನು 'ನೀನು ತುಂಬ ತಡಮಾಡಿ ಬಂದೆ' ಎನ್ನುತ್ತಾ ಕಾಲಿನಿಂದ ಒದ್ದು ಹೊಡೆದನು.

೨೬. ಅದರಿಂದ ಅವಳಿಗೆ ಅವನಲ್ಲಿ ಒಲವು ಇಮ್ಮಡಿಯಾಯಿತು. ಆ ಪಾಪಿ ಹೆಂಗಸು ಅವನನ್ನು ಪ್ರಸನ್ನಗೊಳಿಸಿ ಅಲ್ಲೇ ಅವನ ಜೊತೆಯಲ್ಲಿ ಸ್ವೇಚ್ಛೆಯಿಂದ ಇದ್ದು ಬಿಟ್ಟಳು.

೨೭. ಅದನ್ನು ನೋಡಿ ವಿವೇಕಿಯಾದ ಆ ರಾಜಪುತ್ರ ' ಇದು ಕೋಪಕ್ಕೆ ತಕ್ಕ ಕಾಲವಲ್ಲ. ನಾನು ಸಾಧಿಸಬೇಕಾದುದು ಬೇರೆ ಇದೆ.

೨೮. ಶತ್ರುಗಳ ಮೇಲೆ (ಪ್ರಯೋಗಿಸಲು) ಯೋಗ್ಯವಾದ ಈ ನನ್ನ ಶಸ್ತ್ರ ಈ ಹೆಂಗಸಿನ ಮೇಲೆ ಅಥವಾ ಆ ಮನುಷ್ಯಪಶುವಿನ ಮೇಲೆ, ಅಂದರೆ ಈ ಇಬ್ಬರು ಪಾಪಿಗಳ ಮೇಲೆ ಬೀಳುವುದೆಂತು ?

---

ಸಾ ತು ತಂ ಧೂಸರಕ್ಷಾಮಂ ದೃಷ್ಟ್ವಾಪ್ಯಪರಿಜಾನತೀ ।
ಕೋ□ಸೀತ್ಯಪೃಚ್ಛತ್ ತಚ್ಛ್ರುತ್ವಾ ಪಾಂಥೋ□ಹಮಿತಿ ಸೋ□ಬ್ರವೀತ್ ॥ ೨೩

ತತಃ ಸಾ ಸತ್ರಶಾಲಾಂತಃ ಪ್ರವಿವೇಶ ವಣಿಕ್‌ಸುತಾ ।
ಅನ್ವಗಾದ್ ರಾಜಪುತ್ರೋ□ಪಿ ಸ ತಾಂ ಗುಪ್ತಮವೇಕ್ಷಿತುಮ್ ॥ ೨೪

ಸಾ ಚಾತ್ರ ಪುರುಷಂ ಕಂಚಿದುಪಾಗಾತ್ ಪುರುಷೋ□ಪಿ ತಾಮ್ ।
ತ್ವಂ ಚಿರೇಣಾಗತಾಸೀತಿ ಪಾದಘಾತೈರತಾಡಯತ್ ॥ ೨೫

ತತಃ ಸಾ ದ್ವಿಗುಣೀಭೂತರಾಗಾ ಪಾಪಾ ಪ್ರಸಾದ್ಯ ತಮ್ ।
ಪುರುಷಂ ತೇನ ಸಹಿತಾ ತತ್ರ ತಸ್ಥೌ ಯದೃಚ್ಛಯಾ ॥ ೨೬

ತದ್ ದೃಷ್ಟ್ವಾ ತು ಸ ಸುಪ್ರಜ್ಞೋ ರಾಜಪುತ್ರೋ ವ್ಯಚಿಂತಯತ್ ।
ಕೋಪಸ್ಯಾಯಂ ನ ಕಾಲೋ ಮೇ ಸಾಧ್ಯಮನ್ಯದ್ಧಿ ವರ್ತತೇ ॥ ೨೭

ಕಥಂ ಚ ಪ್ರಸರತ್ವೇತಚ್ಛಸ್ತ್ರಂ ಕೃಪಣಯೋರ್ದ್ವಯೋಃ ।
ಶತ್ರುಯೋಗ್ಯಂ ಸ್ತ್ರಿಯಾಮಸ್ಯಾಮಸ್ಮಿನ್ ವಾ ನೃಪಶೌ ಮಮ ॥ ೨೮

೭೯. ಈ ಕೆಟ್ಟ ಹೆಂಡತಿಯಿಂದ ನನಗೇನಾಬೇಕು? ಇದು ಹಾಳು ವಿಧಿಯ ಆಟ. ನನ್ನ ಧೈರ್ಯವನ್ನು ಪರೀಕ್ಷಿಸಲು ನಿಪುಣವಾಗಿ ಆಡಿ ದುಃಖದ ಮಳೆಯನ್ನು ಸುರಿಸುತ್ತಿರುವ ಹಾಳು ವಿಧಿಯ ಕೆಲಸವಿದಲ್ಲವೆ?

೮೦. ಸಮಾನವಲ್ಲದ ಕುಲದಲ್ಲಿ ಸಂಬಂಧ ಬೆಳೆಸಿದ ಇವಳದಾದರೂ ಅಪರಾಧ ವೇನಿದೆ? ಕಾಗೆಯು ಕಾಗೆಯನ್ನು ಬಿಟ್ಟು ಕೋಗಿಲೆಯೊಡನೆ ಇದ್ದು ಸಂತೋಷ ಪಡುವುದೆ ?'

೮೧. ಎಂದು ಆಲೋಚಿಸಿ ದೇವದತ್ತನು ಹೆಂಡತಿಯನ್ನೂ ಅವಳ ಜಾರನನ್ನೂ ಉಪೇಕ್ಷಿಸಿದನು. ದೊಡ್ಡ ಗುರಿಯನ್ನು ಸಾಧಿಸಲು ಮನಸ್ಸು ತೊಡಗಿದಾಗ ಸತ್ಪುರುಷರಿಗೆ ಹೆಣ್ಣೆಂಬ ಹುಲ್ಲುಕಡ್ಡಿ ಎಷ್ಟರ ಮಟ್ಟಿನದು?

೮೨. ಆ ಕಾಲದಲ್ಲಿ ಸಂಭೋಗದ ಸಂಭ್ರಮದ ಕಾರಣದಿಂದ ಆ ವ್ಯಾಪಾರಿಯ ಮಗಳ ಕಿವಿಯಿಂದ ಒಳ್ಳೆಯ ಮುತ್ತುಗಳಿಂದ ಕೂಡಿದ್ದ ಆಭರಣವು ಕಳಚಿ ಬಿದ್ದಿತ್ತು.

೮೩. ಅವಳು ಅದನ್ನು ನೋಡಲೇ ಇಲ್ಲ. ಸಂಭೋಗಾನಂತರದಲ್ಲಿ ತ್ವರೆಯಿಂದ ಅವಳು ಉಪಪತಿಯನ್ನು ಬೀಳ್ಕೊಟ್ಟು, ಬಂದ ದಾರಿಯಿಂದ ಮನೆಗೆ ಹಿಂದಿರುಗಿ ಹೋದಳು.

೮೪. ಆ ರಹಸ್ಯಕಾಮುಕನೂ ಅಲ್ಲಿಂದ ಎಲ್ಲಿಗೋ ತಟ್ಟನೆ ಹೊರಟು ಹೋದ ಮೇಲೆ ರಾಜಪುತ್ರನು (ಬಿದ್ದಿದ್ದ) ಆಭರಣವನ್ನು ನೋಡಿ ಎತ್ತಿಕೊಂಡನು.

---

ಕಿಮೇತಯಾ ಕುವಧ್ವಾ ವಾ ಕೃತ್ಯಮೇತದ್ಧಿ ದುರ್ವಿಧೇಃ ।
ಮದ್ಧೈರ್ಯಾಲೋಕನಕ್ರೀಡಾನೈಪುಣ್ಯೇ ದುಃಖವರ್ಷಿಣಃ ॥ ೭೯
ಅತುಲ್ಯಕುಲಸಂಬಂಧೇ ಸೈಷಾ ಕಿಂ ವಾಪರಾಧ್ಯತಿ ? ।
ಮುಕ್ತ್ವಾ ಬಲಿಭುಜಂ ಕಾಕೀ ಕೋಕಿಲೇ ರಮತೇ ಕಥಮ್ ॥ ೮೦
ಇತ್ಯಾಲೋಚ್ಯ ಸ ತಾಂ ಭಾರ್ಯಾಮುಪೈಕ್ಷತ ಸಕಾಮುಕಾಮ್ ।
ಸತಾಂ ಗುರುಜಿಗೀಷೇ ಹಿ ಚೇತಸಿ ಸ್ತ್ರೀತೃಣಂ ಕಿಯತ್ ॥ ೮೧
ತತ್ಕಾಲಂ ಚ ರತಾವೇಗವಶಾತ್ತಸ್ಯಾಃ ಕಿಲಾಪತತ್ ।
ವಣಿಕ್‌ಸುತಾಯಾಃ ಶ್ರವಣಾತ್ ಸನ್ಮುಕ್ತಾಢ್ಯಂ ವಿಭೂಷಣಮ್ ॥ ೮೨
ತಚ್ಚ ಸಾ ನ ದದರ್ಶೈವ ಸುರತಾಂತೇ ಚ ಸತ್ವರಾ ।
ಯಯೌ ಯಥಾಗತಂ ಗೇಹಮಾಪೃಚ್ಛ್ಯೋಪಪತಿಂ ತತಃ ॥ ೮೩
ತಸ್ಮಿನ್ನಪಿ ಗತೇ ಕ್ವಾಪಿ ದ್ರುತಂ ಪ್ರಚ್ಛನ್ನಕಾಮುಕೇ ।
ಸ ರಾಜಪುತ್ರೋ ದೃಷ್ಟ್ವಾ ತದ್ ರತ್ನಾಭರಣಮಗ್ರಹೀತ್ ॥ ೮೪

೮೫. ಆ ಆಭರಣದಲ್ಲಿ ರತ್ನಗಳ ಕಿರಣಗಳ ಸಮೂಹವು ಹೊಳೆಯುತ್ತಿತ್ತು. ಕಳೆದು ಹೋಗಿದ್ದ ಸಂಪತ್ತನ್ನು ಹುಡುಕುವುದಕ್ಕಾಗಿ ಬ್ರಹ್ಮನು ದೇವದತ್ತನಿಗೆ ಮೋಹವೆಂಬ ಕತ್ತಲನ್ನು ತೊಲಗಿಸಲು ಕೊಟ್ಟ ದೀಪದಂತೆ ಅದು ಕಂಗೊಳಿಸುತ್ತಿತ್ತು.

೮೬. ಅದು ತುಂಬ ಬೆಲೆ ಬಾಳುವುದು ಎಂಬುದನ್ನು ಕಂಡುಕೊಂಡ ರಾಜಪುತ್ರನು ತನ್ನ ಕಾರ್ಯ ಸಿದ್ಧಿಸುವುದೆಂದು ತಿಳಿದು ಆ ಕ್ಷಣದಲ್ಲೇ ಅಲ್ಲಿಂದ ಹೊರಟು ಕಾನ್ಯಕುಬ್ಜನಗರಕ್ಕೆ ಹೋದನು.

೮೭. ಅಲ್ಲಿ ಆ ಆಭರಣವನ್ನು ಅಡವಿಟ್ಟು ಲಕ್ಷ ಹೊನ್ನಿನ ನಾಣ್ಯಗಳನ್ನು ಪಡೆದು ಆನೆ, ಕುದುರೆ ಮುಂತಾದುವನ್ನೆಲ್ಲ ಕೊಂಡು ಅವುಗಳೊಡನೆ ರಾಜಪುತ್ರನಾಗಿ ದೇವದತ್ತನು ಚಕ್ರವರ್ತಿಯ ಬಳಿಗೆ ಹೋದನು.

೮೮. ಚಕ್ರವರ್ತಿಯು ನೀಡಿದ ಸೈನ್ಯಗಳಿಂದ ಕೂಡಿ ತನ್ನ ತಂದೆಯ ರಾಜ್ಯಕ್ಕೆ ಬಂದು ಶತ್ರುಗಳನ್ನು ಯುದ್ಧದಲ್ಲಿ ಕೊಂದು ತಾಯಿಯ ಅಭಿನಂದನೆಗಳನ್ನು ಪಡೆದು ಆ ಚತುರನು ರಾಜ್ಯವನ್ನು ಮರಳಿ ಪಡೆದುಕೊಂಡನು.

೮೯. ಅನಂತರ ಅಡವಿಟ್ಟಿದ್ದ ಆಭರಣವನ್ನು ಬಿಡಿಸಿಕೊಂಡು ಅದರ ರಹಸ್ಯವನ್ನು ಸ್ಪಷ್ಟವಾಗಿ ಬೆಳಕಿಗೆ ತರಲು ಅದನ್ನು ಮಾವನ ಬಳಿಗೆ ಕಳುಹಿಸಿದನು.

೯೦. ತನ್ನ ಮಗಳ ಕಿವಿಯ ಆಭರಣವು ಹಾಗೆ ಬಂದುದನ್ನು ನೋಡಿ ಅವನ ಮಾವನು ಕಸಿವಿಸಿಗೊಂಡು ಅದನ್ನು ಮಗಳಿಗೆ ತೋರಿಸಿದನು.

---

ಸ್ಫುರದ್ರತ್ನಶಿಖಾಜಾಲಂ ಧಾತ್ರಾ ಮೋಹತಮೋಪಹಮ್ ।
ಹಸ್ತದೀಪಮಿವ ಪ್ರತ್ತಂ ಪ್ರಣಷ್ಟಶ್ರೀಗವೇಷಣೇ ॥ ೮೫
ಮಹಾರ್ಘಂ ಚ ತದಾಲೋಕ್ಯ ರಾಜಪುತ್ರಃ ಸ ತತ್ಕ್ಷಣಮ್ ।
ನಿರ್ಗತ್ಯ ಸಿದ್ಧಕಾರ್ಯಃ ಸನ್ ಕಾನ್ಯಕುಬ್ಜಂ ತತೋ ಯಯೌ ॥ ೮೬
ತತ್ರ ಬಂಧಾಯ ದತ್ತ್ವಾ ತತ್ ಸ್ವರ್ಣಲಕ್ಷೇಣ ಭೂಷಣಮ್ ।
ಕ್ರೀತ್ವಾ ಹಸ್ತ್ಯಶ್ವಮಗಮತ್ ಸ ಪಾರ್ಶ್ವಂ ಚಕ್ರವರ್ತಿನಃ ॥ ೮೭
ತದ್ದತ್ತೈಶ್ಚ ಬಲೈಃ ಸಾಕಮೇತ್ಯ ಹತ್ವಾ ರಿಪೂನ್ ರಣೇ ।
ಪ್ರಾಪ ತತ್ ಪೈತೃಕಂ ರಾಜ್ಯಂ ಕೃತೀ ಮಾತ್ರಾಭಿನಂದಿತಃ ॥ ೮೮
ತಚ್ಚ ಬಂಧಾದ್ ವಿನಿರ್ಮೋಚ್ಯ ಭೂಷಣಂ ಶ್ವಶುರಾಂತಿಕಮ್ ।
ಪ್ರಾಹಿಣೋತ್ ಪ್ರಕಟೀಕರ್ತುಂ ರಹಸ್ಯಂ ತದಶಂಕಿತಮ್ ॥ ೮೯
ಸೋಽಪಿ ತಚ್ಛ್ವಶುರೋ ದೃಷ್ಟ್ವಾ ಸ್ವಸುತಾಕರ್ಣಭೂಷಣಮ್ ।
ತತ್ತಥೋಪಗತಂ ತಸ್ಯೈ ಸಂಭ್ರಾಂತಃ ಸಮದರ್ಶಯತ್ ॥ ೯೦

೯೧. ಮೊದಲೇ ಹಾಳಾಗಿದ್ದ ಅವಳ ನಡತೆಯಂತೆ ಇದ್ದ ಆ ಆಭರಣವನ್ನು ನೋಡಿ, ಅದನ್ನು ಗಂಡನು ಕಳುಹಿಸಿದನೆಂಬುದನ್ನು ಅರಿತು ವ್ಯಾಕುಲಳಾಗಿ ಅವಳು ನೆನಪಿಸಿಕೊಂಡಳು.

೯೨. "ಆ ರಾತ್ರಿ ಛತ್ರದ ಮನೆಯೊಳಗೆ ಇದು ಬಿದ್ದಿತ್ತು. ಅಲ್ಲಿ ಒಬ್ಬ ದಾರಿಹೋಕ ನಿಂತಿದ್ದುದನ್ನು ನಾನು ನೋಡಿದ್ದೆನು.

೯೩. ಖಂಡಿತವಾಗಿ ಅಂದು ನನ್ನ ಗಂಡನೇ ನನ್ನ ಶೀಲವನ್ನು ಪರೀಕ್ಷೆ ಮಾಡಲು ಬಂದಿದ್ದಿರಬೇಕು. ನಾನೋ ಅವನ ಗುರುತು ಹಿಡಿಯಲಿಲ್ಲ. ಅವನಿಗೆ ಈ ಆಭರಣ ಸಿಕ್ಕಿದೆ'

೯೪. ತನ್ನ ಕೆಟ್ಟ ನಡತೆ ಹೊರಬಿದ್ದಿತು ಎಂಬ ವಿಕ್ಲವತೆಯಿಂದ ಚಿಂತೆಗೀಡಾದ ಆ ವ್ಯಾಪಾರಿಯ ಮಗಳ ಹೃದಯವು ಆತಂಕಕ್ಕೀಡಾಗಿ ಒಡೆದು ಹೋಯಿತು.

೯೫. ಅನಂತರ ಅವಳ ತಂದೆಯು ಮಗಳ ರಹಸ್ಯಗಳನ್ನೆಲ್ಲ ತಿಳಿದಿದ್ದ ದಾಸಿಯನ್ನು ಕೇಳಿ ಸತ್ಯವನ್ನು ತಿಳಿದುಕೊಂಡನು. ಅದರಿಂದ ಅವಳ ಬಗೆಗೆ ಇದ್ದ ಶೋಕವು ಬಿಟ್ಟು ಹೋಯಿತು.

೯೬. ಅನಂತರ ರಾಜಪುತ್ರನು ರಾಜ್ಯವನ್ನು ಗಳಿಸಿಕೊಂಡು ತನ್ನ ಗುಣಗಳಿಂದ ಚಕ್ರವರ್ತಿ ಪುತ್ರಿಯನ್ನು ಒಲಿಸಿಕೊಂಡನು. ಅವನಿಗೆ ಹೆಂಡತಿಯ ರೂಪದಲ್ಲಿ ಬೇರೊಂದು ಲಕ್ಷ್ಮಿಯು ಬಂದಂತಾಯಿತು.

---

ಸಾಪಿ ಪೂರ್ವಪರಿಭ್ರಷ್ಟಂ ಚಾರಿತ್ರಮಿವ ವೀಕ್ಷ್ಯ ತತ್ ।
ಬುದ್ಧ್ವಾ ಚ ಭರ್ತ್ರಾ ಪ್ರಹಿತಂ ವ್ಯಾಕುಲೈವ ಸಮಸ್ಮರತ್ ॥ ೯೧
ಇದಂ ಮೇ ಪತಿತಂ ತಸ್ಯಾಂ ರಾತ್ರೌ ಸತ್ತ್ರಗೃಹಾಂತರೇ ।
ಯಸ್ಯಾಂ ತತ್ರ ಸ್ಥಿತೋ ದೃಷ್ಟಃ ಸ ಕೋಽಪಿ ಪಥಿಕೋ ಮಯಾ ॥ ೯೨
ತನ್ನೂನಂ ಸೋಽತ್ರ ಭರ್ತಾ ಮೇ ಶೀಲಜಿಜ್ಞಾಸಯಾಯಯೌ ।
ಮಯಾ ತು ಸ ನ ವಿಜ್ಞಾತಸ್ತೇನೇದಂ ಪ್ರಾಪಿ ಭೂಷಣಮ್ ॥ ೯೩
ಇತ್ಯೇವಂ ಚಿಂತಯಂತ್ಯಾಶ್ಚ ದುರ್ನಯವ್ಯಕ್ತಿವಿಕ್ಲವಮ್ ।
ವಣಿಕ್‌ಸುತಾಯಾ ಹೃದಯಂ ತಸ್ಯಾಃ ಕಾತರಮಸ್ಫುಟತ್ ॥ ೯೪
ತತಸ್ತಸ್ಯಾ ರಹಸ್ಯಜ್ಞಾಂ ಪೃಷ್ಟ್ವಾ ಚೇಟೀಂ ಸ್ವಯುಕ್ತಿತಃ ।
ತತ್ಪಿತಾ ಸ ವಣಿಗ್ ಬುದ್ಧ್ವಾ ತತ್ತ್ವಂ ತತ್ಯಾಜ ತಚ್ಛುಚಮ್ ॥ ೯೫
ರಾಜಪುತ್ರೋಽಥ ಸಂಪ್ರಾಪ್ತರಾಜ್ಯೋ ಲಬ್ಧ್ವಾ ಗುಣಾರ್ಜಿತಾಮ್ ।
ಸ ಚಕ್ರವರ್ತಿತನಯಾಂ ಭಾರ್ಯಾಂ ಭೇಜೇಽಪರಾಂ ಶ್ರಿಯಮ್ ॥ ೯೬

೯೭ ಹೀಗೆ ಹೆಂಗಸರ ಹೃದಯವು ಸಾಹಸದಲ್ಲಿ ವಜ್ರದಂತೆ ಗಟ್ಟಿ. ಆದರೆ ಹೆದರಿಕೆ, ಆತಂಕಗಳು ಉಂಟಾದಾಗ ಅದು ಹೂವಿನಂತೆ ಮೃದು.

೯೯. ರಾಜಲಕ್ಷ್ಮಿಯು ಜಿಂಕೆಯಂತೆ ಯಾವಾಗಲೂ ಹಾರಿ ಓಡುವ ಸ್ವಭಾವವನ್ನು ಹೊಂದಿರುತ್ತದೆ. ಕೆಲವರು ವಿವೇಕಿಗಳು ಮಾತ್ರ ಅವಳನ್ನು ಧೈರ್ಯ ಎಂಬ ಬಲೆಯಿಂದ ಕಟ್ಟಿಹಾಕಲು ಬಲ್ಲರು.

೧೦೦. ಆದ್ದರಿಂದ ಸಂಪತ್ತನ್ನು ಅಪೇಕ್ಷಿಸುವವರು ಆಪತ್ಕಾಲದಲ್ಲೂ ಧೈರ್ಯವನ್ನು ಬಿಡಬಾರದು. ಈ ವಿಷಯದಲ್ಲಿ ನನ್ನ ವೃತ್ತಾಂತವೇ ಒಂದು ನಿದರ್ಶನ.

೧೦೧. ದೇವಿ, ಬಡತನದಲ್ಲೂ ನಾನು ನನ್ನ ಚಾರಿತ್ರ್ಯವನ್ನು ಕಾಪಾಡಿಕೊಂಡೆನು. ನಿಮ್ಮ ದರ್ಶನದಿಂದ ಉಂಟಾದ ಭಾಗ್ಯವು ಈಗ ಫಲವನ್ನು ಕೊಟ್ಟಿತು".

೧೦೨. ಹೀಗೆ ಬ್ರಾಹ್ಮಣಿಯ ಬಾಯಿಂದ ಕಥೆಯನ್ನು ಕೇಳಿದ ರಾಣಿ ವಾಸವದತ್ತೆಯು ಆ ಕ್ಷಣದಲ್ಲೇ ಆದರಪೂರ್ವಕವಾಗಿ ಹೀಗೆ ಚಿಂತಿಸಿದಳು.

೧೦೩. ನಿಶ್ಚಿತವಾಗಿ ಈ ಬ್ರಾಹ್ಮಣಹೆಂಗಸು ಒಳ್ಳೆ ಕುಲದಲ್ಲಿ ಹುಟ್ಟಿದವಳು. ತನ್ನ ಶೀಲದ ರಕ್ಷಣೆಯಲ್ಲಿ ಅವಳು ಹಿಡಿದ ರೀತಿಯೂ ಅವಳ ಮಾತಿನ ಪ್ರೌಢಿಮೆಯೂ ಅವಳು ಉತ್ತಮಳೆಂಬುದನ್ನು ಹೇಳುತ್ತಿವೆ.

---

ತದಿತ್ಥಂ ಸಾಹಸೇ ಸ್ತ್ರೀಣಾಂ ಹೃದಯಂ ವಜ್ರಕರ್ಕಶಮ್ ।
ತದೇವ ಸಾಧ್ವಸಾವೇಗಸಂಪಾತೇ ಪುಷ್ಪಪೇಶಲಮ್ ॥ ೯೭
ತಾಸ್ತು ಕಾಶ್ಚನ ಸದ್ವಂಶಜಾತಾ ಮುಕ್ತಾ ಇವಾಂಗನಾಃ ।
ಯಾಃ ಸುವೃತ್ತಾಚ್ಛಹೃದಯಾ ಯಾಂತಿ ಭೂಷಣತಾಂ ಭುವಿ ॥ ೯೮
ಹರಿಣೀವ ಚ ರಾಜಶ್ರೀರೇವಂ ವಿಪ್ಲವಿನೀ ಸದಾ ।
ಧೈರ್ಯಪಾಶೇನ ಬಂದ್ಧುಂ ಚ ತಾಮೇಕೇ ಜಾನತೇ ಬುಧಾಃ ॥ ೯೯
ತಸ್ಮಾದಾಪದ್ಯಪಿ ತ್ಯಾಜ್ಯಂ ನ ಸತ್ತ್ವಂ ಸಂಪದೇಪ್ಸಿಭಿಃ ।
ಅಯಮೇವಾತ್ರ ವೃತ್ತಾಂತೋ ಮಮಾತ್ರ ಚ ನಿದರ್ಶನಮ್ ॥ ೧೦೦
ಯನ್ಮಯಾ ವಿಧುರೇ□ಪ್ಯಸ್ಮಿಂಶ್ಚಾರಿತ್ರಂ ದೇವಿ ರಕ್ಷಿತಮ್ ।
ಯುಷ್ಮದ್ದರ್ಶನಕಲ್ಯಾಣಪ್ರಾಪ್ತ್ಯಾ ತತ್ ಫಲಿತಂ ಹಿ ಮೇ ॥ ೧೦೧
ಇತಿ ತಸ್ಯಾ ಮುಖಾಚ್ಛ್ರುತ್ವಾ ಬ್ರಾಹ್ಮಣ್ಯಾಸ್ತತ್ಕ್ಷಣಂ ಕಥಾಮ್ ।
ದೇವೀ ವಾಸವದತ್ತಾ ಸಾ ಸಾದರಾ ಸಮಚಿಂತಯತ್ ॥ ೧೦೨
ಬ್ರಾಹ್ಮಣೀ ಕುಲವತ್ಯೇಷಾ ಧ್ರುವಮಸ್ಯಾ ಹ್ಯುದಾರತಾಮ್ ।
ಭಂಗಿಃ ಸ್ವಶೀಲೋಪಕ್ಷೇಪೇ ವಚಃ ಪ್ರೌಢಿಶ್ಚ ಶಂಸತಿ ॥ ೧೦೩

೧೦೪. ಆದ್ದರಿಂದಲೇ ರಾಜನ ಸಭೆಯೊಳಕ್ಕೆ ಪ್ರವೇಶಿಸುವುದರಲ್ಲಿ ಇವಳ ಜಾಣ್ಮೆ ಎಂದು ಯೋಚಿಸಿ ರಾಣಿಯು ಆ ಬ್ರಾಹ್ಮಣಿಯನ್ನು ಕುರಿತಿಂತೆಂದಳು.

೧೦೫. ""ನೀನು ಯಾರ ಹೆಂಡತಿ? ನಿನ್ನ ವೃತ್ತಾಂತವೇನು? ಅದನ್ನು ಹೇಳು", ಅದನ್ನು ಕೇಳಿ ಬ್ರಾಹ್ಮಣಿಯು ಮತ್ತೆ ಹೇಳಲಾರಂಭಿಸಿದಳು.

## ಪಿಂಗಳಿಕೆಯ ಕಥೆ

೧೦೬ """ರಾಣಿ, ಮಾಲವ ದೇಶದಲ್ಲಿ ಅಗ್ನಿದತ್ತ ಎಂಬೊಬ್ಬ ಬ್ರಾಹ್ಮಣನಿದ್ದನು. ಅವನು ಲಕ್ಷ್ಮೀಸರಸ್ವತಿಯರಿಬ್ಬರಿಗೂ ಮನೆಯಾಗಿದ್ದನು. ಯಾಚಕರು ಅವನಿಂದ ತಾವೇ ಧನವನ್ನು ತೆಗೆದುಕೊಳ್ಳುತ್ತಿದ್ದರು.

೧೦೭ ಅವನಿಗೆ ಅನುರೂಪರಾದ ಇಬ್ಬರು ಮಕ್ಕಳು ಹುಟ್ಟಿದರು. ಹಿರಿಯವನ ಹೆಸರು ಶಂಕರದತ್ತ ಇನ್ನೊಬ್ಬನು ಶಾಂತಿಕರ.

೧೦೮. ಕೀರ್ತಿಶಾಲಿನಿಯಾದ ರಾಣಿಯೆ, ಅವರಿಬ್ಬರಲ್ಲಿ ಶಾಂತಿಕರನು ಚಿಕ್ಕಂದಿನಲ್ಲೇ ವಿದ್ಯೆಯನ್ನು ಪಡೆಯುವುದಕ್ಕೋಸ್ಕರ ತನ್ನ ತಂದೆಯ ಮನೆಯನ್ನು ಬಿಟ್ಟು ಎಲ್ಲೋ ಹೋದನು.

೧೦೯. ಇನ್ನೊಬ್ಬನಾದ ಅವನ ಹಿರಿಯ ಸೋದರನು ಯಜ್ಞಕ್ಕಾಗಿ ಸಂಪತ್ತನ್ನು ಕೂಡಿಸಿದ್ದ ಯಜ್ಞದತ್ತನ ಮಗಳಾದ ನನ್ನನ್ನು ಮದುವೆ ಮಾಡಿಕೊಂಡನು.

---

ರಾಜಸಂಸತ್ ಪ್ರವೇಶೇ□ಸ್ಯಾಃ ಪ್ರಾವೀಣ್ಯಮತ ಏವ ಚ ।
ಇತಿ ಸಂಚಿಂತ್ಯ ದೇವೀ ತಾಂ ಬ್ರಾಹ್ಮಣೀಂ ಪುನರಬ್ರವೀತ್ ॥ ೧೦೪
ಭಾರ್ಯಾ ತ್ವಂ ಕಸ್ಯ ಕೋ ವಾ ತೇ ವೃತ್ತಾಂತಃ ಕಥ್ಯತಾಂ ತ್ವಯಾ ।
ತಚ್ಛ್ರುತ್ವಾ ಬ್ರಾಹ್ಮಣೀ ಭೂಯಃ ಸಾಥ ವಕ್ತುಂ ಪ್ರಚಕ್ರಮೇ ॥ ೧೦೫
ಮಾಲವೇ ದೇವಿ ತಸ್ಯಾಸೀದಗ್ನಿದತ್ತ ಇತಿ ದ್ವಿಜಃ ।
ನಿಲಯಃ ಶ್ರೀಸರಸ್ವತ್ಯೋಃ ಸ್ವಯಮಾತ್ತಧನೋ□ರ್ಥಿಭಿಃ ॥ ೧೦೬
ತಸ್ಯ ಚ ಸ್ವಾನುರೂಪೌ ದ್ವಾವುತ್ಪನ್ನೌ ತನಯೌ ಕ್ರಮಾತ್ ।
ಜ್ಯೇಷ್ಠಃ ಶಂಕರದತ್ತಾಖ್ಯೋ ನಾಮ್ನಾ ಶಾಂತಿಕರೋ□ಪರಃ ॥ ೧೦೭
ತಯೋಃ ಶಾಂತಿಕರೋ□ಕಸ್ಮಾದ್ ವಿದ್ಯಾರ್ಥೀ ಸ್ವಪಿತುರ್ಗೃಹಾತ್ ।
ಸ ಬಾಲ ಏವ ನಿರ್ಗತ್ಯ ಗತಃ ಕ್ವಾಪಿ ಯಶಸ್ವಿನಿ ॥ ೧೦೮
ದ್ವಿತೀಯಶ್ಚ ಸ ತದ್‌ಭ್ರಾತಾ ಜ್ಯೇಷ್ಠೋ ಮಾಂ ಪರಿಣೀತವಾನ್ ।
ತನಯಾಂ ಯಜ್ಞದತ್ತಸ್ಯ ಯಜ್ಞಾರ್ಥಭೃತಸಂಪದಃ ॥ ೧೦೯

೧೦. ಕಾಲ ಕಳೆಯುತ್ತಿರಲು ನನ್ನ ಗಂಡನ ತಂದೆ ಅಗ್ನಿದತ್ತನು ಮುದುಕನಾಗಿ ಪರಲೋಕಕ್ಕೆ ತೆರಳಿದನು. ಅವನ ಪತ್ನಿಯೂ ಅವನನ್ನು ಹಿಂಬಾಲಿಸಿದಳು.

೧೧. ದುಃಖದಿಂದ ಕುರುಡನಾಗಿ ನನ್ನ ಗಂಡನು ತೀರ್ಥಯಾತ್ರೆಯ ಉದ್ದೇಶದಿಂದ, ಗರ್ಭಿಣಿಯಾಗಿದ್ದ ನನ್ನನ್ನು ಬಿಟ್ಟು ಹೋಗಿ ಸರಸ್ವತೀನದಿಯ ಪ್ರವಾಹದಲ್ಲಿ ತನ್ನ ಶರೀರವನ್ನು ತ್ಯಜಿಸಿದನು.

೧೨. ಅವನ ಸಹಪ್ರಯಾಣಿಕರು ಬಂದು ಆ ವಿಷಯವನ್ನು ಹೇಳಿದಾಗ ಗರ್ಭಿಣಿಯಾಗಿದ್ದ ನಾನು ಸಹಗಮನವನ್ನು ಮಾಡಲು ಬಯಸಿದೆ, ಆದರೆ ಸ್ವಜನರು ಅವಕಾಶವನ್ನು ಕೊಡಲಿಲ್ಲ.

೧೩. ನನ್ನ ದುಃಖವು ಇನ್ನೂ ಹಸಿಯಾಗಿರುವಾಗಲೇ ನಾವು ವಾಸಿಸುತ್ತಿದ್ದ ಅಗ್ರಹಾರವನ್ನು ದರೋಡೆಕೋರರು ಅಕಸ್ಮಾತ್ತಾಗಿ ಬಂದು ಸಂಪೂರ್ಣವಾಗಿ ಲೂಟಿ ಮಾಡಿ ಬಿಟ್ಟರು.

೧೪. ಆ ಕ್ಷಣದಲ್ಲಿ ನನ್ನ ಶೀಲಕ್ಕೆಲ್ಲಿ ಕುಂದುಂಟಾಗುವುದೋ ಎಂಬ ಭೀತಿಯಿಂದ ನಾನು ಮೂವರು ಬ್ರಾಹ್ಮಣಸ್ತ್ರೀಯರೊಡನೆ ಒಂದೆರಡು ಬಟ್ಟೆಗಳನ್ನು ಮಾತ್ರ ತೆಗೆದುಕೊಂಡು ಅಲ್ಲಿಂದ ಪಲಾಯನ ಮಾಡಿದೆನು.

೧೫. ಸ್ವದೇಶವನ್ನು ಬಿಟ್ಟು ತುಂಬ ದೂರದ ದೇಶಕ್ಕೆ ಅವರೊಡನೆ ಹೋಗಿ ಒಂದು ತಿಂಗಳವರೆಗೆ ಕಷ್ಟದ ಕೆಲಸಗಳನ್ನು ಮಾಡುತ್ತಾ ಬದುಕನ್ನು ಸಾಗಿಸಿದೆನು.

---

ಕಾಲೇನ ತಸ್ಯ ಮದ್ಭರ್ತುಃ ಸೋಽಗ್ನಿದತ್ತಾಭಿಧಃ ಪಿತಾ ।
ವೃದ್ಧೋ ಲೋಕಾಂತರಂ ಯಾತೋ ಭಾರ್ಯಯಾನುಗತಃ ಸ್ವಯಾ ॥ ೧೦

ತೀರ್ಥೋದ್ದೇಶಾಚ್ಚ ಮದ್ಭರ್ತಾ ಧೃತಗರ್ಭಾಂ ವಿಮುಚ್ಯ ಮಾಮ್ ।
ಗತ್ವಾ ಸರಸ್ವತೀಪೂರೇ ಶೋಕೇನಾಂಧೋ ಜಹೌ ತನುಮ್ ॥ ೧೧
ವೃತ್ತಾಂತೇ ಕಥಿತೇ ಚಾಸ್ಮಿನ್ನೇತ್ಯ ತತ್ಸಹಯಾಯಿಭಿಃ ।
ಸ್ವಜನೇಭ್ಯೋ ಮಯಾ ಲಬ್ಧಂ ನಾನುಗಂತುಂ ಸಗರ್ಭಯಾ ॥ ೧೨
ತತೋ ಮಯ್ಯಾರ್ದ್ರಶೋಕಾಯಾಮಕಸ್ಮಾದೇತ್ಯ ದಸ್ಯುಭಿಃ ।
ಅಸ್ಮನ್ನಿವಾಸಃ ಸಕಲೋಽಪ್ಯಗ್ರಹಾರೋ ವಿಲುಂಠಿತಃ ॥ ೧೩
ತತ್ಕ್ಷಣಂ ತಿಸೃಭಿಃ ಸಾರ್ಧಂ ಬ್ರಾಹ್ಮಣೀಭಿರಹಂ ತತಃ ।
ಶೀಲಭ್ರಂಶಭಯಾದಾತ್ತಸ್ವಲ್ಪವಸ್ತ್ರಾ ಪಲಾಯಿತಾ ॥ ೧೪
ದೇಶಭಂಗಾದ್ವಿದೂರಂ ಚ ಗತ್ವಾ ದೇಶಂ ತದನ್ವಿತಾ ।
ಮಾಸಮಾತ್ರಂ ಸ್ಥಿತಾಭೂವಂ ಕೃಚ್ಛ್ರಕರ್ಮೋಪಜೀವಿನೀ ॥ ೧೫

೧೧೬. ಜನರಿಂದ ವತ್ಸರಾಜನು ಅನಾಥರಕ್ಷಕನು ಎಂಬುದನ್ನು ಕೇಳಿ ಅಲ್ಲಿಂದ ಆ ಬ್ರಾಹ್ಮಣಿಯರೊಡನೆ ಶೀಲವೊಂದನ್ನೇ ಬುತ್ತಿಯಾಗಿ ಮಾಡಿಕೊಂಡು ಇಲ್ಲಿಗೆ ಬಂದೆನು.

೧೧೭. ಇಲ್ಲಿ ಬಂದವಳೇ ಒಟ್ಟಿಗೆ ಇಬ್ಬರು ಮಕ್ಕಳನ್ನು ಹೆತ್ತೆನು. ಆ ಮೂವರು ಬ್ರಾಹ್ಮಣಿಯರು ನನಗೆ ಜೊತೆಗಾರ್ತಿಯರಾಗಿದ್ದಾರೆ.

೧೧೮. ಶೋಕ, ಬೇರೆ ದೇಶ, ಬಡತನ, ಜೊತೆಗೆ ಅವಳಿ ಮಕ್ಕಳ ಜನನ. ಅಯ್ಯೋ, ನನಗೆ ಬ್ರಹ್ಮನು ಆಪತ್ತುಗಳ ಬಾಗಿಲನ್ನು ತೆರೆದು ಇಟ್ಟಿದ್ದಾನಲ್ಲವೆ ?

೧೧೯-೧೨೦. ಈ ಇಬ್ಬರು ಮಕ್ಕಳನ್ನು ಬೆಳೆಸಲು ನನಗೆ ಗತಿಯೇ ಇಲ್ಲ ಎಂದು ಆಲೋಚಿಸಿ, ಹೆಂಗಸರಿಗೆ ಆಭರಣವಾದ ನಾಚಿಕೆಯನ್ನು ಬಿಟ್ಟು ಸಭೆಯೊಳಕ್ಕೆ ಹೋಗಿ ನಾನು ವತ್ಸರಾಜನನ್ನು ಬೇಡಿಕೊಂಡೆನು. ಆಪತ್ತಿಗೆ ಸಿಕ್ಕಿದ ಸಣ್ಣ ಮಕ್ಕಳ ಗೋಳನ್ನು ನೋಡಲು ಯಾರು ಸಮರ್ಥರು ?

೧೨೧. ವತ್ಸರಾಜನ ಆದೇಶದಿಂದ ನಾನು ನಿನ್ನ ಪಾದಗಳ ಸನ್ನಿಧಿಗೆ ಬರುವಂತಾಯಿತು. ನನ್ನ ಎಲ್ಲ ವಿಪತ್ತುಗಳೂ ಬಾಗಿಲಿನಲ್ಲೇ ತಡೆಯಲ್ಪಟ್ಟಂತೆ ದೂರವಾದವು.

೧೨೨. ಇಷ್ಟು ನನ್ನ ವೃತ್ತಾಂತ. ನನ್ನ ಹೆಸರು ಪಿಂಗಳಿಕೆ. ಏಕೆಂದರೆ ಚಿಕ್ಕಂದಿನಿಂದ ಅಗ್ನಿಕಾರ್ಯದ ಹೊಗೆಯಿಂದ ನನ್ನ ಕಣ್ಣುಗಳು ಹೊಂಬಣ್ಣಕ್ಕೆ ತಿರುಗಿವೆ.

---

ಶ್ರುತ್ವಾ ಚಾನಾಥಶರಣಂ ಲೋಕಾದ್ ವತ್ಸೇಶ್ವರಂ ತತಃ ।
ಸಬ್ರಾಹ್ಮಣೀಕಾ ಶೀಲೈಕಪಾಥೇಯಾಹಮಿಹಾಗತಾ ॥ ೧೧೬
ಆಗತ್ಯೈವ ಪ್ರಸೂತಾಸ್ಮಿ ಯುಗಪತ್ತನಯಾವುಭೌ ।
ಸ್ಥಿತಾಸು ಚಾಸು ತಿಸೃಷು ಬ್ರಾಹ್ಮಣೀಷು ಸಖೀಷ್ವಪಿ ॥ ೧೧೭
ಶೋಕೋ ವಿದೇಶೋ ದಾರಿದ್ರ್ಯಂ ದ್ವಿಗುಣಃ ಪ್ರಸವೋ೭ಪ್ಯಯಮ್ ।
ಅಹೋ ಅಪಾವೃತಂ ದ್ವಾರಮಾಪದಾಂ ಮಮ ವೇಧಸಾ ॥ ೧೧೮
ತದೇತಯೋರ್ಗತಿರ್ನಾಸ್ತಿ ಬಾಲಯೋರ್ವರ್ಧನಾಯ ಮೇ ।
ಇತ್ಯಾಲೋಚ್ಯ ಪರಿತ್ಯಜ್ಯ ಲಜ್ಜಾಂ ಯೋಷಿದ್ವಿಭೂಷಣಾಮ್ ॥ ೧೧೯
ಮಯಾ ಪ್ರವಿಶ್ಯ ವತ್ಸೇಶೋ ರಾಜಾ ಸದಸಿ ಯಾಚಿತಃ ।
ಕಃ ಶಕ್ತಃ ಸೋಢುಮಾಪನ್ನಬಾಲಾಪತ್ಯಾರ್ತಿದರ್ಶನಮ್ ॥ ೧೨೦
ತದಾದೇಶೇನ ಚ ಪ್ರಾಪ್ತಾ ಮಯಾ ತ್ವಚ್ಚರಣಾಂತಿಕಮ್ ।
ವಿಪದಶ್ಚ ನಿವೃತ್ತಾ ಮೇ ದ್ವಾರಾತ್ ಪ್ರತಿಹತಾ ಇವ ॥ ೧೨೧
ಇತ್ಯೇಷ ಮಮ ವೃತ್ತಾಂತೋ ನಾಮ್ನಾ ಪಿಂಗಲಿಕಾಪ್ಯಹಮ್ ।
ಆಬಾಲ್ಯಾಗ್ನಿಕ್ರಿಯಾಧೂಮ್ರೈರ್ಯನ್ಮೇ ಪಿಂಗಲಿತೇ ದೃಶೌ ॥ ೧೨೨

೧೨೩. ದೇವಿ, ನನ್ನ ಮೈದುನ ಶಾಂತಿಕರನು ವಿದೇಶಕ್ಕೆ ಹೋದವನು ಯಾವ ದೇಶದಲ್ಲಿದ್ದಾನೆ ಎಂಬುದು ಇಂದಿಗೂ ತಿಳಿದುಬಂದಿಲ್ಲ."

೧೨೪. ಹೀಗೆ ತನ್ನ ವೃತ್ತಾಂತವನ್ನು ಹೇಳಿದ ಬ್ರಾಹ್ಮಣಿಯು ಒಳ್ಳೆಯ ಕುಲದಲ್ಲಿ ಹುಟ್ಟಿದವಳೆಂದು ನಿಶ್ಚಯಿಸಿ ಏನನ್ನೋ ತರ್ಕಿಸಿ ರಾಣಿಯು ಪ್ರೀತಿಯಿಂದ ಅವಳಿಗೆ ಹೀಗೆ ಹೇಳಿದಳು.

೧೨೫. ""ಇಲ್ಲಿ ಶಾಂತಿಕರನೆಂಬುವನು ನಮ್ಮ ಪುರೋಹಿತನಾಗಿದ್ದಾನೆ. ಬೇರೆ ದೇಶದಿಂದ ಬಂದಿರುವ ಅವನು ನಿನ್ನ ಮೈದುನನೇ ಇರಬೇಕು ಎಂದುಕೊಂಡಿದ್ದೇನೆ".

೧೨೬. ಕಾತರಳಾಗಿದ್ದ ಬ್ರಾಹ್ಮಣಿಗೆ ಹೀಗೆ ಹೇಳಿ ರಾತ್ರಿಯನ್ನು ಕಳೆದು ಬೆಳಗಾದ ಮೇಲೆ ಶಾಂತಿಕರನನ್ನು ಕರೆಸಿ ರಾಣಿಯು ಅವನ ವಂಶ ಯಾವುದೆಂದು ಕೇಳಿದಳು.

೧೨೭. ಅವನು ವಂಶವನ್ನು ಹೇಳಿದ ಮೇಲೆ ದೃಢವಾದ ನಂಬಿಕೆಯು ಹುಟ್ಟಿದುದರಿಂದ 'ಇವಳು ನಿನ್ನ ಅತ್ತಿಗೆ' ಎಂದು ಆ ಬ್ರಾಹ್ಮಣಿಯನ್ನು ತೋರಿಸಿದಳು.

೧೨೮. ಅವನಿಗೆ ಅವಳ ಗುರುತು ಸಿಕ್ಕಿತು. ಬಂಧುಗಳ ನಾಶದ ಬಗೆಗೆ ಅವನು ತಿಳಿದುಕೊಂಡನು. ಆ ಮೇಲೆ ಶಾಂತಿಕರನು ತನ್ನ ಅತ್ತಿಗೆಯನ್ನು ಮನೆಗೆ ಕರೆದೊಯ್ದನು.

೧೨೯. ಅಲ್ಲಿ ತಂದೆತಾಯಿಗಳನ್ನೂ ಅಣ್ಣನನ್ನೂ ನೆನೆಸಿಕೊಂಡು ದುಃಖಿಸಿ ಶಾಂತಿಕರನು ಇಬ್ಬರು ಮಕ್ಕಳ ತಾಯಿಯಾಗಿದ್ದ ಅತ್ತಿಗೆಯನ್ನು ಸಮಾಧಾನಪಡಿಸಿದನು.

---

ಸ ತು ಶಾಂತಿಕರೋ ದೇವಿ ದೇವರೋ ಮೇ ವಿದೇಶಗಃ ।
ಕುತ್ರ ತಿಷ್ಠತಿ ದೇಶೇಽಸಾವಿತಿ ನಾದ್ಯಾಪಿ ಬುಧ್ಯತೇ ॥ ೧೨೩

ಏವಮುಕ್ತಸ್ವವೃತ್ತಾಂತಾಂ ಕುಲೀನೇತ್ಯವಧಾರ್ಯ ತಾಮ್ ।
ಪ್ರೀತ್ಯೈನಾಂ ಬ್ರಾಹ್ಮಣೀಂ ದೇವೀ ಸಾ ವಿತರ್ಕ್ಯೈವಮಬ್ರವೀತ್ ॥ ೧೨೪

ಇಹ ಶಾಂತಿಕರೋ ನಾಮ ಸ್ಥಿತೋಽಸ್ಮಾಕಂ ಪುರೋಹಿತಃ ।
ವೈದೇಶಿಕಃ ಸ ಜಾನೇಽಹಂ ದೇವರಸ್ತೇ ಭವಿಷ್ಯತಿ ॥ ೧೨೫

ಇತ್ಯುಕ್ತ್ವಾ ಬ್ರಾಹ್ಮಣೀಮುತ್ಕಾಂ ನೀತ್ವಾ ರಾತ್ರಿಂ ತದೈವ ತಾಮ್ ।
ದೇವೀ ಶಾಂತಿಕರಂ ಪ್ರಾತರಾನಾಯ್ಯಾಪೃಚ್ಛದನ್ವಯಮ್ ॥ ೧೨೬

ಉಕ್ತಾನ್ವಯಾಯ ತಸ್ಮೈ ಚ ಸಾ ಸಂಜಾತಸುನಿಶ್ಚಯಾ ।
ಇಯಂ ತೇ ಭ್ರಾತೃಜಾಯೇತಿ ಬ್ರಾಹ್ಮಣೀಂ ತಾಮದರ್ಶಯತ್ ॥ ೧೨೭

ಜಾತಾಯಾಂ ಚ ಪರಿಜ್ಞಪ್ತೌ ಜ್ಞಾತಬಂಧುಕ್ಷಯೋಽಥ ಸಃ ।
ಬ್ರಾಹ್ಮಣೀಂ ಭ್ರಾತೃಜಾಯಾಂ ತಾಂ ನಿನ್ಯೇ ಶಾಂತಿಕರೋ ಗೃಹಮ್ ॥ ೧೨೮

ತತ್ರಾನುಶೋಚ್ಯ ಪಿತರೌ ಭ್ರಾತರಂ ಚ ಯಥೋಚಿತಮ್ ।
ಆಶ್ವಾಸಯಾಮಾಸ ಸ ತಾಂ ಬಾಲಕದ್ವಿತಯಾನ್ವಿತಾಮ್ ॥ ೧೨೯

೧೩೦. ರಾಣಿ ವಾಸವದತ್ತೆಯು ಆ ಇಬ್ಬರು ಬಾಲಕರೂ ತನಗೆ ಮುಂದೆ ಹುಟ್ಟಲಿದ್ದ ಮಗುವಿನ ಪುರೋಹಿತರಾಗಬೇಕು ಎಂದು ಸಂಕಲ್ಪಿಸಿದಳು.

೧೩೧. ರಾಣಿ ವಾಸವದತ್ತೆಯು ಅವರಿಗೆ ಹೆಚ್ಚು ಸಂಪತ್ತನ್ನು ಕೊಟ್ಟದ್ದಲ್ಲದೆ ಹಿರಿಯ ಬಾಲಕನಿಗೆ ಶಾಂತಿಸೋಮ, ಇನ್ನೊಬ್ಬನಿಗೆ ವೈಶ್ವಾನರ ಎಂದು ಹೆಸರುಗಳನ್ನು ಇಟ್ಟಳು.

೧೩೨. ಮನುಷ್ಯನನ್ನು ಅವನ ಕರ್ಮಗಳೇ ಕುರುಡನನ್ನು ಒಯ್ದಂತೆ ಮುಂದೆ ನಡೆಸಿ ಫಲದ ಸ್ಥಳಕ್ಕೆ ಒಯ್ಯುತ್ತವೆ. ಅವನ ಪೌರುಷವು ಕೇವಲ ನಿಮಿತ್ತ

೧೩೩. ಏಕೆಂದರೆ ಆ ಇಬ್ಬರು ಹುಡುಗರು, ಅವರ ತಾಯಿ, ಮತ್ತು ಶಾಂತಿಕರ ಇವರೆಲ್ಲ ಒಟ್ಟಿಗೆ ಸೇರಿದುದಲ್ಲದೆ ಬೇಕಾದಷ್ಟು ಸಂಪತ್ತನ್ನೂ ಪಡೆದುಕೊಂಡರು.

೧೩೪-೧೩೫. ಹೀಗೆ ದಿವಸಗಳು ಕಳೆಯುತ್ತಿರಲು ಒಮ್ಮೆ ರಾಣಿಯ ಅರಮನೆಗೆ ಒಬ್ಬ ಕುಂಬಾರಿಣಿಯು ಮಡಿಕೆಗಳನ್ನು ತೆಗೆದುಕೊಂಡು ಐವರು ಮಕ್ಕಳೊಂದಿಗೆ ಬಂದುದನ್ನು ನೋಡಿ ದೇವಿ ವಾಸವದತ್ತೆಯು ಪಕ್ಕದಲ್ಲಿದ್ದ ಪಿಂಗಳಿಕೆಗೆ ಹೀಗೆ ಹೇಳಿದಳು.

೧೩೬ ""ಸಖಿ, ನೋಡು, ಇವಳಿಗೆ ಐದು ಮಕ್ಕಳು, ನನಗೆ ಒಂದು ಮಗುವೂ ಇಲ್ಲ. ಇಂಥವಳಿಗೂ ಇಂತಹ ಪುಣ್ಯ, ಆದರೆ ನನ್ನಂಥವಳಿಗಿಲ್ಲ.

---

ದೇವೀ ವಾಸವದತ್ತಾಪಿ ತಸ್ಯಾಸ್ತೌ ಬಾಲಕೌ ಸುತೌ ।
ಪುರೋಹಿತೌ ಸ್ವಪುತ್ರಸ್ಯ ಭಾವಿನಃ ಪರ್ಯಕಲ್ಪಯತ್ ॥ ೧೩೦
ಜ್ಯೇಷ್ಠಸ್ತಯೋಃ ಶಾಂತಿಸೋಮೋ ನಾಮ್ನಾ ವೈಶ್ವಾನರೋ□ಪರಃ ।
ಕೃತಸ್ತಯೈವ ದೇವ್ಯಾ ಚ ವಿತೀರ್ಣಬಹುಸಂಪದಾ ॥ ೧೩೧
ಅಂಧಸ್ಯೇವಾಸ್ಯ ಲೋಕಸ್ಯ ಫಲಭೂಮಿಂ ಸ್ವಕರ್ಮಭಿಃ ।
ಪುರೋಗೈರ್ನೀಯಮಾನಸ್ಯ ಹೇತುಮಾತ್ರಂ ಸ್ವಪೌರುಷಮ್ ॥ ೧೩೨
ಯದೇತ್ಯ ಲಬ್ಧವಿಭವಾಸ್ತತ್ರ ಸರ್ವೇ□ಪಿ ಸಂಗತಾಃ ।
ಬಾಲಕೌ ತೌ ತಯೋಃ ಸಾ ಚ ಮಾತಾ ಶಾಂತಿಕರಶ್ಚ ಸಃ ॥ ೧೩೩
ತತೋ ಗಚ್ಛತ್ಸು ದಿವಸೇಷ್ವೇಕದಾ ಪಂಚಭಿಃ ಸುತೈಃ ।
ಸಹಾಗತಾಮುಪಾದಾಯ ಶರಾವಾನ್ ಕುಂಭಕಾರಿಕಾಮ್ ॥ ೧೩೪
ದೃಷ್ಟ್ವಾ ಸ್ವಮಂದಿರೇ ಕಾಂಚಿದ್ದೇವ್ಯಾ ವಾಸವದತ್ತಯಾ ।
ಸಾ ಬ್ರಾಹ್ಮಣೀ ಪಿಂಗಲಿಕಾ ಜಗದೇ ಪಾರ್ಶ್ವವರ್ತಿನೀ ॥ ೧೩೫
ಪಂಚೈತಸ್ಯಾಃ ಸುತೋ□ದ್ಯಾಪಿ ನೈಕೋ ಮೇ ಸಖಿ ದೃಶ್ಯತಾಮ್ ।
ಪುಣ್ಯಾನಾಮೀದೃಶಾಂ ಪಾತ್ರಮೀದೃಶ್ಯಪಿ ನ ಮಾದೃಶೀ ॥ ೧೩೬

೧೩೭. ಆಗ ಪಿಂಗಳಿಕೆ ಹೇಳಿದಳು "ದೇವಿ, ಪಾಪದಿಂದ ತುಂಬಿದ ಇಂಥ ಮಕ್ಕಳು ದರಿದ್ರರಿಗೆ ಹೆಚ್ಚಾಗಿ ಹುಟ್ಟಿ ದುಃಖಕ್ಕೆ ಕಾರಣರಾಗುತ್ತಾರೆ.

೧೩೮. ನಿಮ್ಮಂಥವರಲ್ಲಿ ಹುಟ್ಟುವ ಮಗನು ಯಾವನೋ ಉತ್ತಮ ಗುಣದವನು ಆಗಿರುತ್ತಾನೆ. ಆದ್ದರಿಂದ ತ್ವರೆ ಬೇಡ. ಬೇಗನೆ ನಿನಗೆ ಯೋಗ್ಯನಾದ ಮಗನನ್ನು ಪಡೆಯುವೆ.'

೧೩೯. ಹೀಗೆ ಪಿಂಗಳಿಕೆಯು ಹೇಳಿದರೂ ವಾಸವದತ್ತೆ ಮಗನು ಹುಟ್ಟಬೇಕೆಂಬ ವಿಷಯದಲ್ಲಿ ಆತಂಕಗೊಂಡವಳಾಗಿ ಅದೇ ಚಿಂತೆಯಿಂದ ಮನಸ್ಸನ್ನು ತುಂಬಿಕೊಂಡಿದ್ದಳು.

೧೪೦-೧೪೧. ಆಗ ಅಲ್ಲಿಗೆ ಬಂದ ವತ್ಸರಾಜನು "ದೇವಿ, ಶಿವನ ಆರಾಧನೆಯಿಂದ ನಿನಗೆ ಮಗನು ಹುಟ್ಟುವನೆಂದು ನಾರದನು ಹೇಳಿದ್ದಾನೆ. ಆದ್ದರಿಂದ ವರಗಳನ್ನು ಕೊಡುವ ಆ ಶಿವನನ್ನು ನಾವು ಆರಾಧಿಸಬೇಕು' ಎಂದು ಹೇಳಿದನು. ಇದರಿಂದ ಭರವಸೆಯನ್ನು ಮೂಡಿಸಿಕೊಂಡ ರಾಣಿ ವಾಸವದತ್ತೆಯು ಬೇಗನೆ ವ್ರತವನ್ನು ಆಚರಿಸಲು ನಿಶ್ಚಯ ಮಾಡಿದಳು.

೧೪೨. ಆಕೆಯು ವ್ರತವನ್ನು ಸ್ವೀಕರಿಸಿದ ಮೇಲೆ ಮಂತ್ರಿಗಳೂ ಪ್ರಜೆಗಳೂ, ರಾಜನೂ ಶಂಕರನ ಆರಾಧನೆಯ ವ್ರತವನ್ನು ಮಾಡತೊಡಗಿದರು.

---

ತತಃ ಪಿಂಗಲಿಕಾವಾದೀದ್ ದೇವಿ ದುಃಖಾಯ ಜಾಯತೇ ।
ಪ್ರಜೇಯಂ ಪಾಪಭೂಯಿಷ್ಠಾ ದರಿದ್ರೇಷ್ವೇವ ಭೂಯಸೀ ॥ ೧೩೭
ಯಷ್ಮಾದೃಶೇಷು ಜಾಯೇತ ಯಃ ಸ ಕೋಽಪ್ಯುತ್ತಮೋ ಭವೇತ್ ।
ತದಲಂ ತ್ವರಯಾ ಪ್ರಾಪ್ಸ್ಯಸ್ಯಚಿರಾತ್ ಸ್ವೋಚಿತಂ ಸುತಮ್ ॥ ೧೩೮
ಇತಿ ಪಿಂಗಲಿಕೋಕ್ತಾಪಿ ಸೋತ್ಸುಕಾ ಸುತಜನ್ಮನಿ ।
ಅಭೂದ್ ವಾಸವದತ್ತಾ ಸಾ ತಚ್ಚಿಂತಾಕ್ರಾಂತಮಾನಸಾ ॥ ೧೩೯
ಗಿರಿಶಾರಾಧನಪ್ರಾಪ್ಯಂ ಪುತ್ರಂ ತೇ ನಾರದೋಽಭ್ಯಧಾತ್ ।
ತದ್ದೇವಿ ವರದೋಽವಶ್ಯಮಾರಾಧ್ಯಃ ಸ ಶಿವೋಽತ್ರ ನಃ ॥ ೧೪೦
ಇತ್ಯುಕ್ತಾ ವತ್ಸರಾಜೇನ ತತ್ಕಾಲಂ ಚಾಗತೇನ ಸಾ ।
ದೇವೀ ಲಬ್ಧಾಶಯೇನಾಶು ಚಕಾರ ವ್ರತನಿಶ್ಚಯಮ್ ॥ ೧೪೧
ತಸ್ಯಾಮಾತ್ತವ್ರತಾಯಾಂ ತು ಸ ರಾಜಾಪಿ ಸಮಂತ್ರಿಕಃ ।
ಸರಾಷ್ಟ್ರಶ್ಚಾಪಿ ವಿದಧೇ ಶಂಕರಾರಾಧನವ್ರತಮ್ ॥ ೧೪೨

೧೪೩. ದಂಪತಿಗಳು ಮೂರು ರಾತ್ರಿ ಉಪವಾಸ ಮಾಡಿದರು. ಆಮೇಲೆ ಆ ಭಗವಂತನು ತಾನೇ ಕನಸಿನಲ್ಲಿ ಪ್ರಸನ್ನನಾಗಿ ಕಾಣಿಸಿಕೊಂಡು ಹೀಗೆ ಅಪ್ಪಣೆ ಮಾಡಿದನು.

೧೪೪. ""ಎದ್ದೇಳಿ, ಮನ್ಮಥಾಂಶನಾದ ಮಗನು ನಿಮಗೆ ಹುಟ್ಟುವನು. ಅವನು ನನ್ನ ಅನುಗ್ರಹದಿಂದ ವಿದ್ಯಾಧರರಿಗೆಲ್ಲ ದೊರೆಯಾಗುವನು."

೧೪೫. ಹೀಗೆ ನುಡಿದು ಚಂದ್ರಮೌಳಿ ಶಂಕರನು ಅದೃಶ್ಯನಾದನು. ಆ ದಂಪತಿಗಳು ಎಚ್ಚೆತ್ತು ವರವು ದೊರಕಿದುದರಿಂದ ಕೃತಾರ್ಥರಾಗಿ ಸಹಜವಾದ ಆನಂದದಲ್ಲಿ ಮಿಂದರು.

೧೪೬. ಬೆಳಗಿನ ಜಾವದಲ್ಲಿ ಎದ್ದು ರಾಣಿಯೂ ರಾಜನೂ ಪ್ರಜೆಗಳಿಗೆ ಆ ಕನಸಿನ ವರ್ಣನೆಯ ಅಮೃತರಸದ ಪಾನದಿಂದ ತೃಪ್ತಿಯನ್ನು ಉಂಟುಮಾಡಿ ಬಂಧುಗಳಿಂದಲೂ ಸೇವಕರಿಂದಲೂ ಕೂಡಿಕೊಂಡು ಉತ್ಸವವನ್ನು ಹಮ್ಮಿಕೊಂಡವರಾಗಿ ವ್ರತದ ಪಾರಣೆಯನ್ನು ನೆರವೇರಿಸಿದರು.

೧೪೭. ಕೆಲವು ದಿನಗಳು ಕಳೆದ ಮೇಲೆ ವಾಸವದತ್ತೆಯ ಕನಸಿನಲ್ಲಿ ಜಟೆಗಳನ್ನು ಧರಿಸಿದ್ದ ಯಾರೋ ಪುರುಷನು ಕಾಣಿಸಿಕೊಂಡು ಹತ್ತಿರ ಬಂದು ಅವಳಿಗೆ ಒಂದು ಹಣ್ಣನ್ನು ಕೊಟ್ಟನು.

---

ತ್ರಿರಾತ್ರೋಪೋಷಿತೌ ತೌ ಚ ದಂಪತೀ ಸ ವಿಭುಸ್ತತಃ ।
ಪ್ರಸಾದಪ್ರಕಟೀಭೂತಃ ಸ್ವಯಂ ಸ್ವಪ್ನೇ ಸಮಾದಿಶತ್ ॥ ೧೪೩

ಉತ್ತಿಷ್ಠತಂ ಸ ಯುವಯೋಃ ಕಾಮಾಂಶೋ ಜನಿತಾ ಸುತಃ ।
ನಾಥೋ ವಿದ್ಯಾಧರಾಣಾಂ ಯೋ ಭವಿತಾ ಮತ್ಪ್ರಸಾದತಃ ॥ ೧೪೪

ಇತಿ ವಚನಮುದೀರ್ಯ ಚಂದ್ರಮೌಲೌ
ಸಪದಿ ತಿರೋಹಿತತಾಂ ಗತೇ ಪ್ರಬುಧ್ಯ ।
ಅಧಿಗತವರಮಾಶು ದಂಪತೀ ತೌ
ಪ್ರಮುದಮಕೃತ್ರಿಮಮಾಪತುಃ ಕೃತಾರ್ಥೌ ॥ ೧೪೫

ಉತ್ಥಾಯ ಚೋಷಸಿ ತತಃ ಪ್ರಕೃತೀರ್ವಿಧಾಯ
ತತ್ಸ್ವಪ್ನಕೀರ್ತನಸುಧಾರಸತರ್ಪಿತಾಸ್ತಾಃ ।
ದೇವೀ ಚ ಸಾ ನರಪತಿಶ್ಚ ಸಬಂಧುಭೃತ್ಯೌ
ಬದ್ಧೋತ್ಸವೌ ವಿದಧತುರ್ವ್ರತಪಾರಣಾನಿ ॥ ೧೪೬

ಕತಿಪಯದಿವಸಾಪಗಮೇ ತಸ್ಯಾಃ ಸ್ವಪ್ನೇ ಜಟಾಧರಃ ಪುರುಷಃ ।
ಕೋಽಪ್ಯಥ ದೇವ್ಯಾ ವಾಸವದತ್ತಾಯಾಃ ಫಲಮುಪೇತ್ಯ ದದೌ ॥ ೧೪೭

೧೫೮. ಆ ಸ್ವಪ್ನವನ್ನು ಸ್ಫುಟವಾಗಿ ರಾಣಿಯು ನಿವೇದಿಸಲು ವತ್ಸರಾಜನು (ಅದನ್ನು ಕೇಳಿ) ಅವಳೊಡನೆ ಆನಂದಿಸಿದನು. ಮಂತ್ರಿಗಳು ಅವನನ್ನು ಅಭಿನಂದಿಸಿದರು. ಶಿವನೇ ಹಣ್ಣಿನ ರೂಪದಲ್ಲಿ ಮಗನನ್ನು ಕೊಟ್ಟಿದ್ದಾನೆಂದು ಚಿಂತಿಸಿ ವತ್ಸರಾಜನು ತನ್ನ ಮನೋರಥವು ಹತ್ತಿರದಲ್ಲಿದೆ ಎಂದು ಎಣಿಸಿದನು.

**ಮಹಾಕವಿ ಶ್ರೀ ಸೋಮದೆವಭಟ್ಟನು ರಚಿಸಿದ**
**ಕಥಾಸರಿತ್ಸಾಗರದ ನರವಾಹನದತ್ತಜನನಲಂಬಕದಲ್ಲಿ**
**ಮೊದಲನೆಯ ತರಂಗ ಮುಗಿಯಿತು.**

---

ತತಃ ಸ ವಿನಿವೇದಿತಸ್ಫುಟತಥಾವಿಧಸ್ವಪ್ನಯಾ
ಸಹ ಪ್ರಮುದಿತಸ್ತಯಾ ಸಮಭಿನಂದಿತೋ ಮಂತ್ರಿಭಿಃ ।
ವಿಚಿಂತ್ಯ ಶಶಿಮೌಲಿನಾ ಫಲನಿಭೇನ ದತ್ತಂ ಸುತಂ
ಮನೋರಥಮದೂರಗಂ ಗಣಯತಿ ಸ್ಮ ವತ್ಸೇಶ್ವರಃ ॥ ೧೫೮

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**
**ಕಥಾಸರಿತ್ಸಾಗರೇ ನರವಾಹನದತ್ತಜನನಲಂಬಕೇ**
**ಪ್ರಥಮಸ್ತರಂಗಃ**

---

## ಎರಡನೆಯ ತರಂಗ

೧ ಅನಂತರ ಶೀಘ್ರದಲ್ಲೇ ವತ್ಸರಾಜನ ಹೃದಯದ ಆನಂದಕ್ಕೆ ಕಾರಣವಾದ ಹಾಗೂ ಮನ್ಮಥನ ಅಂಶದ ಅವತಾರದಿಂದ ಉಜ್ಜ್ವಲವೂ ಆದ ವಾಸವದತ್ತೆಯ ಗರ್ಭವು ಉಂಟಾಯಿತು.

೨. ಚಂಚಲ ಕಣ್ಣುಗಳಿಂದ ಶೋಭಿಸುತ್ತಿದ್ದ ಹಾಗೂ ಸ್ವಲ್ಪ ಬಿಳಿಚಿಕೊಂಡಿದ್ದ ರಾಣಿಯ ಮುಖ ಗರ್ಭದಲ್ಲಿದ್ದ ಮನ್ಮಥನ ಮೇಲಿನ ಒಲುಮೆಯಿಂದ ಹತ್ತಿರಕ್ಕೆ ಬಂದಿರುವ ಚಂದ್ರನೋ ಎಂಬಂತೆ ಕಂಗೊಳಿಸುತ್ತಿತ್ತು.

೩ ಅವಳ ರತ್ನಖಚಿತ ಮಂಚದ ಎರಡು ಪಕ್ಕಗಳಲ್ಲೂ ಇದ್ದ ಪ್ರತಿಮೆಗಳು ಅವಳು ಮಧ್ಯೆ ಕುಳಿತಿದ್ದಾಗ ಪತಿಯ ಮೇಲಿದ್ದ ಸ್ನೇಹದಿಂದ ಬಂದಿದ್ದ ರತಿ–ಪ್ರೀತಿಯರಂತೆ ಶೋಭಿಸುತ್ತಿದ್ದುವು.

೪. ಭಾವಿ ವಿದ್ಯಾಧರ ಚಕ್ರವರ್ತಿಯು ಗರ್ಭದಲ್ಲಿರುವಾಗಲೇ ಅವನ ಸೇವೆಗಾಗಿ ಬಂದು ನಿಂತ, ಇಷ್ಟಾರ್ಥಗಳನ್ನೆಲ್ಲ ನೀಡುವ ಮೂರ್ತೀಭವಿಸಿದ ವಿದ್ಯೆಗಳಂತಿದ್ದ ಸಖಿಯರು ಆ ರಾಣಿಗೆ ಸೇವೆಯನ್ನು ಮಾಡುತ್ತಿದ್ದರು.

---

## ದ್ವಿತೀಯಸ್ತರಂಗಃ

ಅಥ ವಾಸವದತ್ತಾಯಾ ವತ್ಸೇಶಹೃದಯೋತ್ಸವಃ ।
ಸಂಬಭೂವಾಚಿರಾದ್ ಗರ್ಭಃ ಕಾಮಾಂಶಾವತರೋಜ್ಜ್ವಲಃ ॥ ೧
ಸಾ ಬಭೌ ಲೋಲನೇತ್ರೇಣ ಮುಖೇನಾಪಾಂಡುಕಾಂತಿನಾ ।
ಶಶಾಂಕೇನೇವ ಗರ್ಭಸ್ಥಕಾಮಪ್ರೇಮೋಪಗಾಮಿನಾ ॥ ೨
ಆಸೀನಾಯಾಃ ಪತಿಸ್ನೇಹಾದ್ ರತಿಪ್ರೀತೀ ಇವಾಗತೇ ।
ರೇಜತುಃ ಪ್ರತಿಮೇ ತಸ್ಯಾ ಮಣಿಪರ್ಯಂಕಪಾರ್ಶ್ವಯೋಃ ॥ ೩
ಭಾವೀ ವಿದ್ಯಾಧರಾಧೀಶಗರ್ಭಸೇವಾರ್ಥಮಿಷ್ಟದಾಃ ।
ಮೂರ್ತಾ ವಿದ್ಯಾ ಇವಾಯಾತಾಃ ಸಖ್ಯಸ್ತಾಂ ಪರ್ಯುಪಾಸತ ॥ ೪

೫ ಸ್ವಲ್ಪ ನೀಳವಾದ ಚಿಗುರಿನಂತೆ ಶ್ಯಾಮಲವರ್ಣವನ್ನು ಹೊಂದಿದ್ದ ಅವಳ ಸ್ತನಗಳು ಮಗನು ಗರ್ಭದಲ್ಲಿರುವಾಗಲೇ ಮಾಡಬೇಕಾದ ಅಭಿಷೇಕಕ್ಕಾಗಿ ತಂದ ಕಲಶಗಳೋ ಎಂಬಂತಿದ್ದವು.

೬ ಸ್ವಚ್ಛವಾಗಿ ಹೊಳೆಯುತ್ತಿದ್ದ ಮಣಿಖಚಿತವಾದ ನೆಲದಿಂದ ಕಾಂತಿಮಯವಾಗಿ ಶೋಭಿಸುತ್ತಿದ್ದ ಮಂದಿರದ ಮಧ್ಯದಲ್ಲಿ ಸುಖವಾದ ಹಾಸಿಗೆಯಲ್ಲಿ ಮಲಗಿ ಅವಳು ವಿರಾಜಿಸುತ್ತಿದ್ದಳು.

೮. ಗೋಪುರದ ಮಧ್ಯದಲ್ಲಿದ್ದ ರತ್ನಗಳಲ್ಲಿ ಮೂಡಿದ ಅವಳ ಪ್ರತಿಬಿಂಬವು ನಮಸ್ಕಾರವನ್ನು ಮಾಡಲು ಬಂದ ವಿದ್ಯಾಧರಲಕ್ಷ್ಮಿಯಂತೆ ಕಂಗೊಳಿಸುತ್ತಿತ್ತು.

೯. ಪ್ರಾಸಂಗಿಕವಾಗಿ ಕೇಳಿದ ಕಥೆಗಳನ್ನು ಹಾಗೂ ಮಂತ್ರಗಳ ಸಾಧನೆಯಲ್ಲಿ ಆಸಕ್ತರಾದ ಸಾಧಕ ಶ್ರೇಷ್ಠರ ಕಥೆಗಳನ್ನು ಕೇಳುವುದರಲ್ಲೂ ಅವಳಿಗೆ ಬಯಕೆ ಉಂಟಾಯಿತು.

೧೦. ಕನಸಿನಲ್ಲಿ ಅವಳು ಆಕಾಶದ ಮಡಿಲನ್ನು ಏರಿ ಕುಳಿತಿದ್ದಾಗ ರಸಮಯವಾದ ಸಂಗೀತವನ್ನು ಆರಂಭಿಸಿದ ಶ್ರೇಷ್ಠ ವಿದ್ಯಾಧರಸ್ತ್ರೀಯರು ಅವಳಿಗೆ ಸೇವೆಯನ್ನು ಸಲ್ಲಿಸುತ್ತಿದ್ದರು.

೧೧. ಎಚ್ಚರಗೊಂಡ ಮೇಲೂ ಅವಳು ಭೂಲೋಕಕ್ಕೆ ಕೌತುಕವೆನಿಸುವ ಅದೇ ರೀತಿಯ ಆಕಾಶದ ಆಟಗಳ ವಿಲಾಸವನ್ನು ಸಾಕ್ಷಾತ್ತಾಗಿ ಅನುಭವಿಸಲು ಬಯಸಿದಳು.

---

ವಿನೀಲಪಲ್ಲವಶ್ಯಾಮಮುಖೌ ಸಾಥ ಪಯೋಧರೌ ।
ಸೂನೋರ್ಗರ್ಭಾಭಿಷೇಕಾಯ ಬಭಾರ ಕಲಶಾವಿವ ॥ ೫
ಸ್ವಚ್ಛಸ್ಫುರಿತಸಚ್ಛಾಯಮಣಿಕುಟ್ಟಿಮಶೋಭಿನಃ ।
ಸುಖಶಯ್ಯಾಗತಾ ಮಧ್ಯೇ ಮಂದಿರಸ್ಯ ರರಾಜ ಸಾ ॥ ೬
ಭಾವಿ ತತ್ತನಯಾಕ್ರಾಂತಿಶಂಕಾಕಂಪಿತವಾರಿಭಿಃ ।
ಉಪೇತ್ಯ ಸೇವ್ಯಮಾನೇವ ಸಮಂತಾದ್ ರತ್ನರಾಶಿಭಿಃ ॥ ೭
ತಸ್ಯಾ ವಿಮಾನಮಧ್ಯಸ್ಥ ರತ್ನೋತ್ಥಾ ಪ್ರತಿಮಾ ಬಭೌ ।
ವಿದ್ಯಾಧರಶ್ರೀರ್ನಭಸಾ ಪ್ರಣಾಮಾರ್ಥಮಿವಾಗತಾ ॥ ೮
ಮಂತ್ರಸಾಧನಸಂನದ್ಧಸಾಧಕೇಂದ್ರಕಥಾಸು ಚ ।
ಬಭೂವ ಸಾ ದೋಹದಿನೀ ಪ್ರಸಂಗೋಪನತಾಸು ಚ ॥ ೯
ಸರಸಾರಬ್ಧಸಂಗೀತಾ ವಿದ್ಯಾಧರವರಾಂಗನಾಃ ।
ಸ್ವಪ್ನೇ ತಾಮಂಬರೋತ್ಸಂಗಮಾರೂಢಾಮುಪತಸ್ಥಿರೇ ॥ ೧೦
ಪ್ರಬುದ್ಧಾ ಸೇವಿತುಂ ಸಾಕ್ಷಾತ್ ತದೇವಾಭಿಲಲಾಷ ಸಾ ।
ನಭಃ ಕ್ರೀಡಾವಿಲಸಿತಂ ಲಕ್ಷ್ಯಭೂತಲಕೌತುಕಮ್ ॥ ೧೧

೧೨. ರಾಣಿ ವಾಸವದತ್ತೆಯ ಈ ಬಯಕೆಗಳನ್ನು ಯೌಗಂಧರಾಯಣನು ಯಂತ್ರ ಮಂತ್ರ ಇಂದ್ರಜಾಲ ಮುಂತಾದ ಪ್ರಯೋಗಗಳಿಂದ ಈಡೇರಿಸಿದನು.

೧೩. ವಾಸವದತ್ತೆಯು ಆ ಪ್ರಯೋಗಗಳಿಂದ ಆಕಾಶದಲ್ಲಿದ್ದು ನಗರದ ನಾರಿಯರ ತೆರೆದ ರೆಪ್ಪೆಯ ಕಣ್ಣುಗಳಿಗೆ ಅಚ್ಚರಿಯನ್ನುಂಟುಮಾಡುವ ಬೇರೆ ಬೇರೆ ಪ್ರಯೋಗಗಳಿಂದ ಬಾನಿನಲ್ಲೇ ವಿಹಾರ ಮಾಡಿದಳು.

೧೪. ಒಮ್ಮೆ ಅವಳು ತನ್ನ ವಾಸಗೃಹದಲ್ಲಿದ್ದಾಗ ವಿದ್ಯಾಧರರ ವಿಸ್ತಾರವಾದ ಕಥೆಗಳನ್ನು ಕೇಳುವ ಕುತೂಹಲವು ಅವಳ ಮನಸ್ಸಿನಲ್ಲಿ ಮೂಡಿತು.

೧೫. ಅವಳು ಕೇಳಿಕೊಂಡಾಗ ಯೌಗಂಧರಾಯಣನು ಈ ಕಥೆಯನ್ನು ಎಲ್ಲರಿಗೂ ಕೇಳಿಸುವಂತೆ ಹೇಳತೊಡಗಿದನು.

## ಜೀಮೂತವಾಹನನ ಕಥೆ

೧೬. ಅಂಬಿಕೆಯ ತಂದೆ ಪರ್ವತರಾಜ ಹಿಮವಂತನು ಕೇವಲ ಪರ್ವತಗಳ ರಾಜನಲ್ಲ, ಗೌರೀಪತಿ ಶಂಕರನಿಗೂ ಅವನು ಪೂಜ್ಯನು.

೧೭. ವಿದ್ಯಾಧರರಿಗೆಲ್ಲ ನಿವಾಸಸ್ಥಾನವಾದ ಆ ಹಿಮಾಲಯದಲ್ಲಿ ವಿದ್ಯಾಧರರ ರಾಜ ಜೀಮೂತಕೇತು ವಾಸ ಮಾಡುತ್ತಿದ್ದನು.

---

ತಂ ಚ ದೋಹದಮೇತಸ್ಯಾ ದೇವ್ಯಾ ಯೌಗಂಧರಾಯಣಃ ।
ಯಂತ್ರಮಂತ್ರೇಂದ್ರಜಾಲಾದಿಪ್ರಯೋಗೈಃ ಸಮಪೂರಯತ್ ॥ ೧೨

ವಿಜಹಾರ ಚ ಸಾ ತೈಸ್ತೈಃ ಪ್ರಯೋಗೈರ್ಗಗನಸ್ಥಿತಾ ।
ಪೌರನಾರೀಜನೋತ್ಪಕ್ಷ್ಮಲೋಚನಾಶ್ಚರ್ಯದಾಯಿಭಿಃ ॥ ೧೩

ಏಕದಾ ವಾಸಕಸ್ಥಾಯಾಸ್ತಸ್ಯಾಶ್ಚ ಸಮಜಾಯತ ।
ಹೃದಿ ವಿದ್ಯಾಧರೋದಾರಕಥಾಶ್ರವಣಕೌತುಕಮ್ ॥ ೧೪

ತತಸ್ತಯಾರ್ಥಿತೋ ದೇವ್ಯಾ ತತ್ರ ಯೌಗಂಧರಾಯಣಃ ।
ತಸ್ಯಾಃ ಸರ್ವೇಷು ಶೃಣ್ವತ್ಸು ನಿಜಗಾದ ಕಥಾಮಿಮಾಮ್ ॥ ೧೫

ಅಸ್ತ್ಯಂಬಿಕಾಜನಯಿತಾ ನಗೇಂದ್ರೋ ಹಿಮವಾನಿತಿ ।
ನ ಕೇವಲಂ ಗಿರೀಣಾಂ ಯೋ ಗುರುರ್ಗೌರೀಪತೇರಪಿ ॥ ೧೬

ವಿದ್ಯಾಧರನಿವಾಸೇ ಚ ತಸ್ಮಿನ್ ವಿದ್ಯಾಧರಾಧಿಪಃ ।
ಉವಾಸ ರಾಜಾ ಜೀಮೂತಕೇತುರ್ನಾಮ ಮಹಾಚಲೇ ॥ ೧೭

೧೮. ಅವನ ಮನೆಯಲ್ಲಿ ವಂಶಪರಂಪರೆಯಿಂದ ಬಂದಿದ್ದ ಕಲ್ಪವೃಕ್ಷವಿತ್ತು. ಅದು ಅನ್ವರ್ಥವಾದ ಹೆಸರನ್ನು ಪಡೆದು ಪ್ರಖ್ಯಾತವಾಗಿದ್ದು ಎಲ್ಲ ಮನೋರಥಗಳನ್ನೂ ಈಡೇರಿಸುತ್ತಿತ್ತು.

೧೯. ಯಾವಾಗಲೋ ಒಂದು ಸಲ ರಾಜ ಜೀಮೂತಕೇತು ದೇವತಾಸ್ವರೂಪವಾದ ಆ ಕಲ್ಪವೃಕ್ಷವನ್ನು ಉದ್ಯಾನದಲ್ಲಿ ಸಮೀಪಿಸಿ ಯಾಚನೆ ಮಾಡಿದನು.

೨೦. ""ನಿನ್ನಿಂದ ನಾವು ಯಾವಾಗಲೂ ನಮ್ಮ ಇಷ್ಟಾರ್ಥಗಳನ್ನು ಪಡೆದುಕೊಳ್ಳುತ್ತಿದ್ದೇವೆ. ವೃಕ್ಷದೇವ, ಮಕ್ಕಳಿಲ್ಲದ ನನಗೆ ಸದ್ಗುಣಗಳನ್ನು ಹೊಂದಿರುವ ಮಗನನ್ನು ಕೊಡು".

೨೧. ಆಗ ಕಲ್ಪವೃಕ್ಷವು ""ರಾಜನೇ, ನಿನಗೆ ಪೂರ್ವಜನ್ಮದ ಸ್ಮರಣೆಯನ್ನುಳ್ಳವನೂ ದಾನವೀರನೂ ಎಲ್ಲ ಪ್ರಾಣಿಗಳಿಗೆ ಹಿತವನ್ನು ಮಾಡುವವನೂ ಆದ ಮಗನು ಹುಟ್ಟುವನು" ಎಂದು ಹೇಳಿತು.

೨೨. ಅದನ್ನು ಕೇಳಿ ಸಂತುಷ್ಟನಾದ ಜೀಮೂಕೇತು ಆ ಕಲ್ಪವೃಕ್ಷಕ್ಕೆ ನಮಸ್ಕರಿಸಿ, ಅಲ್ಲಿಂದ ಹೋಗಿ ತನ್ನ ಪತ್ನಿಗೆ ವಿಷಯವನ್ನು ತಿಳಿಸಿ ಆನಂದವನ್ನುಂಟುಮಾಡಿದನು.

೨೩. ಅನಂತರ ಆ ರಾಜನಿಗೆ ಶೀಘ್ರವೇ ಮಗನು ಹುಟ್ಟಿದನು. ತಂದೆಯು ಅವನಿಗೆ ಜೀಮೂತವಾಹನ ಎಂಬ ಹೆಸರನ್ನಿಟ್ಟನು.

---

ತಸ್ಯಾಭೂತ್ ಕಲ್ಪವೃಕ್ಷಶ್ಚ ಗೃಹೇ ಪಿತೃಕ್ರಮಾಗತಃ ।
ನಾಮ್ನಾನ್ವರ್ಥೇನ ವಿಖ್ಯಾತೋ ಯೋ ಮನೋರಥದಾಯಕಃ ॥ ೧೮
ಕದಾಚಿಚ್ಚ ಸ ಜೀಮೂತಕೇತೂ ರಾಜಾಭ್ಯುಪೇತ್ಯ ತಮ್ ।
ಉದ್ಯಾನೇ ದೇವತಾತ್ಮಾನಂ ಕಲ್ಪದ್ರುಮಮಯಾಚತ ॥ ೧೯
ಸರ್ವದಾ ಪ್ರಾಪ್ಯತೇಽಸ್ಮಾಭಿಸ್ತ್ವತ್ತಃ ಸರ್ವಮಭೀಪ್ಸಿತಮ್ ।
ತದಪುತ್ರಾಯ ಮೇ ದೇಹಿ ದೇವ ಪುತ್ರಂ ಗುಣಾನ್ವಿತಮ್ ॥ ೨೦
ತತಃ ಕಲ್ಪದ್ರುಮೋಽವಾದೀದ್ರಾಜನ್ನುತ್ಪತ್ಸ್ಯತೇ ತವ ।
ಜಾತಿಸ್ಮರೋ ದಾನವೀರಃ ಸರ್ವಭೂತಹಿತಃ ಸುತಃ ॥ ೨೧
ತಚ್ಛ್ರುತ್ವಾ ಸ ಪ್ರಹೃಷ್ಟಃ ಸನ್ ಕಲ್ಪವೃಕ್ಷಂ ಪ್ರಣಮ್ಯ ತಮ್ ।
ಗತ್ವಾ ನಿವೇದ್ಯ ತದ್ರಾಜಾ ನಿಜಾಂ ದೇವೀಮನಂದಯತ್ ॥ ೨೨
ಅಥ ತಸ್ಯಾಚಿರಾದೇವ ರಾಜ್ಞಃ ಸೂನುರಜಾಯತ ।
ಜೀಮೂತವಾಹನಂ ತಂ ಚ ನಾಮ್ನಾ ಸ ವಿದಧೇ ಪಿತಾ ॥ ೨೩

೨೪. ಅನಂತರ ಜೀಮೂತವಾಹನನು ಸಕಲ ಪ್ರಾಣಿಗಳಲ್ಲೂ ತನಗೆ ಸಹಜವಾದ ಕರುಣೆಯೊಡನೆ ಮಹಾಸತ್ತ್ವನಾಗಿ ಬೆಳೆದನು.

೨೫. ಕ್ರಮಶಃ ಅವನು ಯುವರಾಜಪದವಿಯನ್ನು ಪಡೆದನು. ಜಗತ್ತಿಗೆಲ್ಲ ಕರುಣೆಯನ್ನು ತೋರಿಸುತ್ತಿದ್ದ ಅವನು ಸೇವೆಯಿಂದ ತಂದೆಯನ್ನು ಪ್ರಸನ್ನಗೊಳಿಸಿ ಏಕಾಂತದಲ್ಲಿಂತು ಬಿನ್ನವಿಸಿದನು.

೨೬. "ತಂದೆಯೆ, ಈ ಪ್ರಪಂಚದಲ್ಲಿ ಎಲ್ಲ ವಸ್ತುಗಳೂ ಕ್ಷಣಮಾತ್ರದಲ್ಲಿ ನಾಶ ಹೊಂದುವುವೆಂದೂ, ಮಹಾತ್ಮರ ನಿರ್ಮಲವಾದ ಕೀರ್ತಿಯೊಂದೇ ಪ್ರಳಯದ ವರೆಗೂ ಸ್ಥಿರವಾಗಿರುವುದೆಂದೂ ತಿಳಿದುಕೊಂಡಿದ್ದೇನೆ.

೨೭. ಆ ಯಶಸ್ಸು ಪರೋಪಕಾರದಿಂದ ಬಂದಿದ್ದಾದರಂತೂ ಸರಿ, ಉದಾರ ಹೃದಯದವರಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯವಾದ ಬೇರೆ ಯಾವ ಧನವಿರಲು ಸಾಧ್ಯ ?

೨೮. ಸಂಪತ್ತು ಮಿಂಚಿನಂತೆ ಚಂಚಲವಾದಾಗ ಜನರ ಕಣ್ಣಿಗೆ ನೋವನ್ನೇ ಉಂಟು ಮಾಡುತ್ತದೆ. ಆ ಸಂಪತ್ತು ಪರರಿಗೆ ಉಪಕಾರವನ್ನು ಮಾಡುವುದಲ್ಲದಿದ್ದರೆ ಕ್ಷೀಣಿಸುತ್ತದೆ.

೨೯. ಆದ್ದರಿಂದ ನಮಗೆ ಇಷ್ಟಾರ್ಥಗಳನ್ನೀಯುವ ಈ ಕಲ್ಪವೃಕ್ಷವನ್ನು ಪರೋಪಕಾರಕ್ಕಾಗಿ ನಾವು ಬಳಸಿಕೊಂಡರೆ ಆಗ ಅದರ ಫಲ ಸಿಕ್ಕಿದಂತಾಗಬಹುದು.

---

ತತಃ ಸಹಜಯಾ ಸಾಕಂ ಸರ್ವಭೂತಾನುಕಂಪಯಾ ।
ಜಗಾಮ ಸ ಮಹಾಸತ್ತ್ವೋ ವೃದ್ಧಿಂ ಜೀಮೂತವಾಹನಃ ॥ ೨೪
ಕ್ರಮಾಚ್ಚ ಯೌವರಾಜ್ಯಸ್ಥಃ ಪರಿಚರ್ಯಾಪ್ರಸಾದಿತಮ್ ।
ಲೋಕಾನುಕಂಪೀ ಪಿತರಂ ವಿಜನೇ ಸ ವ್ಯಜಿಜ್ಞಪತ್ ॥ ೨೫
ಜಾನಾಮಿ ತಾತ ಯದ್ಭಾವಾ ಭವೇಽಸ್ಮಿನ್ ಕ್ಷಣಭಂಗುರಾಃ ।
ಸ್ಥಿರಂ ತು ಮಹತಾಮೇಕಮಾಕಲ್ಪಮಮಲಂ ಯಶಃ ॥ ೨೬
ಪರೋಪಕೃತಿಸಂಭೂತಂ ತದೇವ ಯದಿ ಹಂತ ತತ್ ।
ಕಿಮನ್ಯತ್ ಸ್ಯಾದುದಾರಾಣಾಂ ಧನಂ ಪ್ರಾಣಾಧಿಕಪ್ರಿಯಮ್ ॥ ೨೭
ಸಂಪಚ್ಚ ವಿದ್ಯುದಿವ ಸಾ ಲೋಕಲೋಚನಖೇದಕೃತ್ ।
ಲೋಲಾ ಕ್ವಾಪಿ ಲಯಂ ಯಾತಿ ಯಾ ಪರಾನುಪಕಾರಿಣೀ ॥ ೨೮
ತದೇಷ ಕಲ್ಪವಿಟಪೀ ಕಾಮದೋ ಯೋಽಸ್ತಿ ನಃ, ಸ ಚೇತ್ ।
ಪರಾರ್ಥಂ ವಿನಿಯುಜ್ಯೇತ ತದಾಪ್ತಂ ತತ್ಫಲಂ ಭವೇತ್ ॥ ೨೯

೩೦. ಈ ಕಲ್ಪವೃಕ್ಷವು ಕೊಡುವ ಸಮೃದ್ಧಿಗಳಿಂದ, ಈ ನಿರ್ಧನರಾದ ಜನರ ಸಮುದಾಯವೆಲ್ಲ ಸಿರಿವಂತವಾಗುವಂತೆ ನಾನು ಮಾಡಿಬಿಡುತ್ತೇನೆ.'

೩೧. ಹೀಗೆ ತಂದೆಗೆ ಬಿನ್ನವಿಸಿ ಅವನ ಅಪ್ಪಣೆಯನ್ನು ಪಡೆದುಕೊಂಡು ಜೀಮೂತವಾಹನನು ಹೋಗಿ ಕಲ್ಪವೃಕ್ಷಕ್ಕೆ ಹೀಗೆ ಹೇಳಿದನು.

೩೨. '"ದೇವ, ನೀನು ಬಹುಕಾಲದವರೆಗೆ ನಮ್ಮ ಇಷ್ಟಾರ್ಥಗಳ ಫಲವನ್ನು ನೀಡುತ್ತಿರುವೆ. ಆದ್ದರಿಂದ ಇಂದು ನನ್ನ ಈ ಒಂದು ಆಸೆಯನ್ನು ಪೂರೈಸಿಬಿಡು.

೩೩ ಸ್ನೇಹಿತನೇ, ಈ ಸಮಸ್ತ ಪೃಥ್ವಿಯಲ್ಲಿ ಬಡವರಿಲ್ಲದಂತೆ ಮಾಡು. ನಿನಗೆ ಶುಭವಾಗಲಿ. ಹಣಬೇಕೆಂದು ಕೇಳುವ ಈ ಜಗತ್ತಿಗೆ ನಿನ್ನನ್ನು ಕೊಟ್ಟಿದ್ದೇನೆ."

೩೪. ಹೀಗೆ ಆ ಧೀರ ಜೀಮೂತವಾಹನನು ಹೇಳಲು ಕಲ್ಪವೃಕ್ಷವು ಯಥೇಚ್ಛವಾಗಿ ಚಿನ್ನವನ್ನು ಭೂಲೋಕದಲ್ಲಿ ಮಳೆಗರೆಯಿತು. ಎಲ್ಲ ಪ್ರಜೆಗಳೂ ಆನಂದಪಟ್ಟರು.

೩೫ ದಯಾಳುವೂ ಬೋಧಿಸತ್ತ್ವನ ಅಂಶವುಳ್ಳವನೂ ಆದ ಜೀಮೂತವಾಹನನಲ್ಲದೆ ಬೇರೆ ಯಾವ ಪುಣ್ಯವಂತನು ತಾನೆ ಕಲ್ಪವೃಕ್ಷವನ್ನೂ ಯಾಚಕರ ವಶಕ್ಕೆ ಕೊಡಲು ಶಕ್ತನಾದಾನು ?

೩೬ ಇದರಿಂದ ದಿಕ್ಕು ದಿಕ್ಕಿನಲ್ಲೂ ಅವನಲ್ಲಿ ಜನರ ಪ್ರೀತಿಯು ಉಕ್ಕಿತು. ಜೀಮೂತವಾಹನನ ಶುಭ್ರವಾದ ಕೀರ್ತಿಯು ಎಲ್ಲೆಲ್ಲೂ ವಿಶದವಾಗಿ ಹರಡಿತು.

---

ತತ್ತಥಾಹಂ ಕರೋಮೀಹ ಯಥೈತಸ್ಯ ಸಮೃದ್ಧಿಭಿಃ ।
ಅದರಿದ್ರಾ ಭವತ್ಯೇಷಾ ಸರ್ವಾರ್ಥಿಜನಸಂಹತಿಃ ॥ ೩೦

ಇತಿ ವಿಜ್ಞಾಪ್ಯ ಪಿತರಂ ತದನುಜ್ಞಾಮವಾಪ್ಯ ಸಃ ।
ಜೀಮೂತವಾಹನೋ ಗತ್ವಾ ತಂ ಕಲ್ಪದ್ರುಮಮಬ್ರವೀತ್ ॥ ೩೧

ದೇವ ತ್ವಂ ಶಶ್ವದಸ್ಮಾಕಮಭೀಷ್ಟಫಲದಾಯಕಃ ।
ತದೇಕಮಿದಮದ್ಯ ತ್ವಂ ಮಮ ಪೂರಯ ವಾಂಛಿತಮ್ ॥ ೩೨

ಅದರಿದ್ರಾಂ ಕುರುಷ್ವೈತಾಂ ಪೃಥಿವೀಮಖಿಲಾಂ ಸಖೇ ।
ಸ್ವಸ್ತ್ಯಸ್ತು ತೇ ಪ್ರದತ್ತೋऽಸಿ ಲೋಕಾಯ ದ್ರವಿಣಾರ್ಥಿನೇ ॥ ೩೩

ಇತ್ಯುಕ್ತಸ್ತೇನ ಧೀರೇಣ ಕಲ್ಪವೃಕ್ಷೋ ವವರ್ಷ ಸಃ ।
ಕನಕಂ ಭೂತಲೇ ಭೂರಿ ನನಂದುಶ್ಚಾಖಿಲಾಃ ಪ್ರಜಾಃ ॥ ೩೪

ದಯಾಲೋರ್ಬೋಧಿಸತ್ತ್ವಾಂಶಾತ್ ಕೋऽನ್ಯೋ ಜೀಮೂತವಾಹನಾತ್ ।
ಶಕ್ನುಯಾದರ್ಥಿಸಾತ್ ಕರ್ತುಮಪಿ ಕಲ್ಪದ್ರುಮಂ ಕೃತೀ ॥ ೩೫

ಇತಿ ಜಾತಾನುರಾಗಾಸು ತತೋ ದಿಕ್ಷು ವಿದಿಕ್ಷ್ವಪಿ ।
ಜೀಮೂತವಾಹನಸ್ಯೋಚ್ಚೈಃ ಪಪ್ರಥೇ ವಿಶದಂ ಯಶಃ ॥ ೩೬

೩೭ ಜೀಮೂತಕೇತುವಿನ ಮಗನ ಕೀರ್ತಿಯಿಂದ ಅವನ ರಾಜ್ಯದ ಬೇರುಗಳು ದೃಢವಾದವು. ಅದನ್ನು ನೋಡಿ ಅವನ ಗೋತ್ರದಲ್ಲೇ ಹುಟ್ಟಿದ್ದ ದಾಯಾದರು ಮತ್ಸರವನ್ನು ಹೊಂದಿ ಮನೋವಿಕಾರಗಳಿಗೆ ಈಡಾದರು.

೩೮. ಕಲ್ಪವೃಕ್ಷವು ದಾನಕ್ಕೆ ಕೊಡಲ್ಪಟ್ಟುದರಿಂದ ಜಾಗವನ್ನು ಬಿಟ್ಟಿದೆ, ಅದರ ಪ್ರಭಾವ ಈಗ ಇಲ್ಲ. ಆದ್ದರಿಂದ ರಾಜ್ಯವನ್ನು ಗೆದ್ದುಕೊಳ್ಳುವುದು ಸುಲಭ ಎಂದು ಅವರು ಆಲೋಚಿಸಿದರು.

೩೯. ಅವರೆಲ್ಲ ಒಟ್ಟಿಗೆ ಸೇರಿ ಯುದ್ಧಕ್ಕೆ ಬರಲು ನಿಶ್ಚಯ ಮಾಡಿದಾಗ ಧೀರ ಜೀಮೂತವಾಹನನು ತಂದೆಗೆ ಹೀಗೆ ಹೇಳಿದನು.

೪೦. ""ಈ ಶರೀರವೇ ನೀರ ಮೇಲಿನ ಗುಳ್ಳೆಯಂತೆ ಇರುವಾಗ ಬಿರುಗಾಳಿಯಲ್ಲಿಟ್ಟ ದೀಪದಂತೆ ಚಂಚಲವಾದ ಸಂಪತ್ತುಗಳು ಯಾರಿಗೋಸ್ಕರ ?

೪೧. ವಿಶಾಲಹೃದಯವುಳ್ಳ ಯಾವನು ಬೇರೆಯವರನ್ನು ಬಗ್ಗುಬಡಿದು ಈ ಸಂಪತ್ತುಗಳನ್ನು ಪಡೆಯಲು ಬಯಸುತ್ತಾನೆ ? ತಂದೆ, ಈ ಕಾರಣದಿಂದ ನಾನು ದಾಯಾದಿಗಳೊಡನೆ ಯುದ್ಧ ಮಾಡಲಾರೆನು.

೪೨. ರಾಜ್ಯವನ್ನು ಬಿಟ್ಟು ನಾನು ಇಲ್ಲಿಂದ ಯಾವುದಾದರೊಂದು ಕಾಡಿಗೆ ಹೋಗುತ್ತೇನೆ. ಈ ಸಣ್ಣ ಮನಸ್ಸಿನವರು ಇಲ್ಲಿರಲಿ. ನಮ್ಮ ವಂಶದ ನಾಶ ಆಗುವುದು ಬೇಡ."

---

ತತಃ ಪುತ್ರಪ್ರಥಾಬದ್ಧಮೂಲಂ ರಾಜ್ಯಂ ಸಮತ್ಸರಾಃ ।
ದೃಷ್ಟ್ವಾ ಜೀಮೂತಕೇತೋಸ್ತದ್ ಗೋತ್ರಜಾ ವಿಕೃತಿಂ ಯಯುಃ ॥ ೩೭
ದಾನೋಪಯುಕ್ತಸತ್ಕಲ್ಪವೃಕ್ಷಮುಕ್ತಾಸ್ಪದಂ ಚ ತತ್ ।
ಮೇನಿರೇ ನಿಷ್ಪ್ರಭಾವತ್ವಾಜ್ಜೇತುಂ ಸುಕರಮೇವ ತೇ ॥ ೩೮
ತತಃ ಸಂಭೂಯ ಯುದ್ಧಾಯ ಕೃತಬುದ್ಧಿಷು ತೇಷು ಚ ।
ಪಿತರಂ ತಮುವಾಚೈವಂ ಧೀರೋ ಜೀಮೂತವಾಹನಃ ॥ ೩೯
ಯಥಾ ಶರೀರಮೇವೇದಂ ಜಲಬುದ್ಬುದಸಂನಿಭಮ್ ।
ಪ್ರವಾತದೀಪಚಪಲಾಸ್ತಥಾ ಕಸ್ಯ ಕೃತೇ ಶ್ರಿಯಃ ॥ ೪೦
ತಾ ಅಪ್ಯನ್ಯೋಪಮರ್ದೇನ ಮನಸ್ವೀ ಕೋಽಭಿವಾಂಛತಿ ।
ತಸ್ಮಾತ್ತಾತ ಮಯಾ ನೈವ ಯೋದ್ಧವ್ಯಂ ಗೋತ್ರಜೈಃ ಸಹ ॥ ೪೧
ರಾಜ್ಯಂ ತ್ಯಕ್ತ್ವಾ ತು ಗಂತವ್ಯಮಿತಃ ಕ್ವಾಪಿ ವನಂ ಮಯಾ ।
ಆಸತಾಂ ಕೃಪಣಾ ಏತೇ ಮಾ ಭೂತ್ ಸ್ವಕುಲಸಂಕ್ಷಯಃ ॥ ೪೨

೪೩. ಹೀಗೆ ಜೀಮೂತವಾಹನನು ಹೇಳಿದಾಗ ತಂದೆ ಜೀಮೂತಕೇತು ತಾನೂ ನಿಶ್ಚಯವನ್ನು ಮಾಡಿ ಇಂತು ನುಡಿದನು.

೪೪. "ಮಗನೆ, ನೀನು ತರುಣನಾಗಿದ್ದರೂ ಕರುಣೆಯಿಂದ ರಾಜ್ಯವನ್ನು ಹುಲ್ಲುಕಡ್ಡಿಯೋ ಎಂಬಂತೆ ಬಿಟ್ಟು ಕೊಟ್ಟಿರುವೆ. ಅದರಲ್ಲಿ ಮುದುಕನಾದ ನನಗೆ ಹಂಬಲವೇಕೆ ? ಆದ್ದರಿಂದ ನಾನೂ ಹೋಗಬೇಕು.'

೪೫. ಹೀಗೆ ಹೇಳಿದ ತಂದೆಯೊಡನೆ ಮತ್ತು ತಾಯಿಯೊಡನೆ ಜೀಮೂತವಾಹನನು 'ಹಾಗೆ ಮಾಡೋಣ' ಎಂದು ಹೇಳಿ ಮಲಯಪರ್ವತಕ್ಕೆ ತೆರಳಿದನು.

೪೬. ಅದು ಸಿದ್ಧರ ವಾಸಸ್ಥಾನವಾಗಿದ್ದು ಅಲ್ಲಿನ ಹೊಳೆಗಳನ್ನು (ದಡಗಳಲ್ಲಿ ಬೆಳೆದ) ಶ್ರೀಗಂಧದ ಮರಗಳು ಮುಚ್ಚಿದ್ದುವು. ಅಲ್ಲಿದ್ದ ಆಶ್ರಮದಲ್ಲಿ ಜೀಮೂತವಾಹನನು ತಂದೆಯ ಸೇವೆಯನ್ನು ಮಾಡುತ್ತಾ ನೆಲೆಸಿದನು.

೪೭. ಅಲ್ಲಿ ಸಿದ್ಧರ ಚಕ್ರವರ್ತಿ ವಿಶ್ವಾವಸುವಿನ ಮಗ ಮಿತ್ರಾವಸು ಎಂಬ ಜಿತೇಂದ್ರಿಯನು ಜೀಮೂತವಾಹನನ ಗೆಳೆಯನಾದನು.

೪೮. ಜ್ಞಾನಿ ಜೀಮೂತವಾಹನನು ಯಾವಾಗಲೋ ಒಮ್ಮೆ ಮಿತ್ರಾವಸುವಿನ ತಂಗಿಯಾಗಿದ್ದ ಒಬ್ಬ ಕನ್ಯೆಯನ್ನು ಕಂಡನು. ಅವಳು ಅವನ ಜನ್ಮಾಂತರದ ನಲ್ಲೆ.

೪೯. ಆಗ ಆ ಇಬ್ಬರು ಯುವಕಯುವತಿಯರ ಪರಸ್ಪರ ನೋಟವು ಮನಸ್ಸುಗಳೆಂಬ ಜಿಂಕೆಗಳ ಬಲವಾದ ಬಲೆಯ ಬಂಧನದಂತಾಗಿಹೋಯಿತು.

---

ಇತ್ಯುಕ್ತವಂತಂ ಜೀಮೂತವಾಹನಂ ಸ ಪಿತಾ ತತಃ ।
ಜೀಮೂತಕೇತುರಪ್ಯೇವಂ ಜಗಾದ ಕೃತನಿಶ್ಚಯಃ ॥ ೪೩

ಮಯಾಪಿ ಪುತ್ರ ಗಂತವ್ಯಂ ಕಾ ಹಿ ವೃದ್ಧಸ್ಯ ಮೇ ಸ್ಪೃಹಾ ।
ರಾಜ್ಯೇ ತೃಣ ಇವ ತ್ಯಕ್ತೇ ಯೂನಾಪಿ ಕೃಪಯಾ ತ್ವಯಾ ॥ ೪೪

ಏವಮುಕ್ತವತಾ ಸಾಕಂ ಸಭಾರ್ಯೇಣ ತಥೇತಿ ಸಃ ।
ಪಿತ್ರಾ ಜಗಾಮ ಜೀಮೂತವಾಹನೋ ಮಲಯಾಚಲಮ್ ॥ ೪೫

ತತ್ರಾಧಿವಾಸೇ ಸಿದ್ಧಾನಾಂ ಚಂದನಚ್ಛನ್ನ ನಿರ್ಝರೇ ।
ಸ ತಸ್ಥಾವಾಶ್ರಮಪದೇ ಪರಿಚರ್ಯಾಪರಃ ಪಿತುಃ ॥ ೪೬

ಅಥ ಸಿದ್ಧಾಧಿರಾಜಸ್ಯ ವಶೀ ವಿಶ್ವಾವಸೋಃ ಸುತಃ ।
ಮಿತ್ರಂ ಮಿತ್ರಾವಸುರ್ನಾಮ ತಸ್ಯಾತ್ರ ಸಮಪದ್ಯತ ॥ ೪೭

ತತ್ಸ್ವಸಾರಂ ಚ ಸೋ□ಪಶ್ಯದೇಕಾಂತೇ ಜಾತು ಕನ್ಯಕಾಮ್ ।
ಜನ್ಮಾಂತರಪ್ರಿಯತಮಾಂ ಜ್ಞಾನೀ ಜೀಮೂತವಾಹನಃ ॥ ೪೮

ತತ್ಕಾಲಂ ಚ ತಯೋಸ್ತುಲ್ಯಂ ಯೂನೋರನ್ಯೋನ್ಯದರ್ಶನಮ್ ।
ಅಭೂನ್ಮನೋಮೃಗಾಮಂದವಾಗುರಾಬಂಧಸಂನಿಭಮ್ ॥ ೪೯

೫೦. ಒಮ್ಮೆ ಮಿತ್ರಾವಸು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಮೂರು ಲೋಕಗಳಿಗೂ ಪೂಜ್ಯನಾದ ಜೀಮೂತವಾಹನನಿಗಿಂತೆಂದನು.

೫೧. ""ನನ್ನ ತಂಗಿ ಮಲಯವತಿ ಎಂಬ ಕನ್ಯೆ ಇದ್ದಾಳೆ. ಅವಳನ್ನು ನಿನಗೆ ಕೊಡುತ್ತೇನೆ. ನನ್ನ ಆಸೆಯನ್ನು ಮುರಿದು ಹಾಕಬೇಡ".

೫೨. ಆ ಮಾತನ್ನು ಕೇಳಿದ ಕೂಡಲೇ ಜೀಮೂತವಾಹನನು ಅವನಿಗೆ ಹೇಳಿದನು. ""ಯುವರಾಜ, ಅವಳು ಹಿಂದಿನ ಜನ್ಮದಲ್ಲೂ ನನ್ನ ಹೆಂಡತಿಯಾಗಿದ್ದಳು.

೫೩. ಅಲ್ಲಿ ನೀನೂ ನನ್ನ ಎರಡನೆಯ ಹೃದಯವೇ ಆಗಿದ್ದ ಮಿತ್ರನಾಗಿದ್ದೆ. ನನಗೆ ಜನ್ಮಾಂತರದ ಸ್ಮರಣೆ ಇದೆ. ಪೂರ್ಣವಾಗಿ ಹಿಂದಿನ ಜನ್ಮವನ್ನು ನೆನಪಿಸಿಕೊಳ್ಳಬಲ್ಲೆ"

೫೪. ಹೀಗೆ ಜೀಮೂತವಾಹನನು ಹೇಳಿದಾಗ ಮಿತ್ರಾವಸು ""ಹಿಂದಿನ ಜನ್ಮದ ಕಥೆಯನ್ನು ಸ್ವಲ್ಪ ಹೇಳು. ನನಗೆ ಕುತೂಹಲ ಉಂಟಾಗಿದೆ" ಎಂದನು.

೫೫. ಮಿತ್ರಾವಸುವಿನ ಈ ಮಾತನ್ನು ಕೇಳಿ ಪುಣ್ಯಶಾಲಿ ಜೀಮೂತವಾಹನನು ಅವನಿಗೆ ಪೂರ್ವಜನ್ಮದ ಈ ಕಥೆಯನ್ನು ಹೇಳಿದನು.

---

ತತೋಽಕಸ್ಮಾತ್ ಸಮಭ್ಯೇತ್ಯ ತ್ರಿಜಗತ್ಪೂಜ್ಯಮೇಕದಾ ।
ಜೀಮೂತವಾಹನಂ ಪ್ರೀತಃ ಸ ಮಿತ್ರಾವಸುರಭ್ಯಧಾತ್ ॥ ೫೦
ಕನ್ಯಾ ಮಲಯವತ್ಯಾಖ್ಯಾ ಸ್ವಸಾ ಮೇಽಸ್ತಿ ಕನೀಯಸೀ ।
ತಾಮಹಂ ತೇ ಪ್ರಯಚ್ಛಾಮಿ ಮಮೇಚ್ಛಾಂ ಮಾನ್ಯಥಾ ಕೃಥಾಃ ॥ ೫೧
ತಚ್ಛ್ರುತ್ವೈವ ಸ ಜೀಮೂತವಾಹನೋಽಪಿ ಜಗಾದ ತಮ್ ।
ಯುವರಾಜ ಮಮಾಭೂತ್ ಸಾ ಭಾರ್ಯಾ ಪೂರ್ವೇಽಪಿ ಜನ್ಮನಿ ॥ ೫೨
ತ್ವಂ ಚ ತತ್ರೈವ ಮೇ ಜಾತೋ ದ್ವಿತೀಯಂ ಹೃದಯಂ ಸುಹೃತ್ ।
ಜಾತಿಸ್ಮರೋಽಸ್ಮ್ಯಹಂ ಸರ್ವಂ ಪೂರ್ವಜನ್ಮ ಸ್ಮರಾಮಿ ತತ್ ॥ ೫೩
ಇತ್ಯುಕ್ತವಂತಂ ತತ್ಕಾಲಂ ಮಿತ್ರಾವಸುರುವಾಚ ತಮ್ ।
ಜನ್ಮಾಂತರಕಥಾಂ ತಾವದ್ಬ್ರೂಹಿ ಕೌತುಕಂ ಹಿ ಮೇ ॥ ೫೪
ಏತನ್ಮಿತ್ರಾವಸೋಃ ಶ್ರುತ್ವಾ ತಸ್ಮೈ ಜೀಮೂತವಾಹನಃ ।
ಸುಕೃತೀ ಕಥಯಾಮಾಸ ಪೂರ್ವಜನ್ಮಕಥಾಮಿಮಾಮ್ ॥ ೫೫

## ಜೀಮೂತವಾಹನನ ಪೂರ್ವಜನ್ಮದ ಕಥೆ

೫೬. ಹಿಂದೆ ನಾನು ಆಕಾಶದಲ್ಲಿ ಸಂಚರಿಸುತ್ತಿದ್ದ ವಿದ್ಯಾಧರನಾಗಿದ್ದೆನು. ಒಮ್ಮೆ ನಾನು ಹಿಮಾಲಯದ ಶಿಖರಗಳ ಮಾರ್ಗದಿಂದ ಹೋಗುತ್ತಿದ್ದೆ.

೫೭. ಆಗ ಅಲ್ಲಿ ಕೆಳಗೆ ಗೌರಿಯೊಡನೆ ಶಿವನು ಆಟವಾಡುತ್ತಿದ್ದನು. ನಾನು ಅವನನ್ನು ದಾಟಿ ಹೋದದ್ದರಿಂದ ಕೋಪಗೊಂಡು "ಮಾನವ ಯೋನಿಯಲ್ಲಿ ಹುಟ್ಟು" ಎಂದು ಶಾಪವನ್ನಿತ್ತನು.

೫೮. ""ವಿದ್ಯಾಧರಿಯನ್ನು ಹೆಂಡತಿಯನ್ನಾಗಿ ಪಡೆದು ಮಗನನ್ನು ನಿನ್ನ ಸ್ಥಾನದಲ್ಲಿ ಕೂಡಿಸಿದಾಗ ನಿನ್ನ ಪೂರ್ವಜನ್ಮವನ್ನು ಜ್ಞಾಪಿಸಿಕೊಂಡು ಮತ್ತೆ ವಿದ್ಯಾಧರ ಮಧ್ಯದಲ್ಲಿ ಹುಟ್ಟನ್ನು ಪಡೆಯುವೆ".

೫೯. ಹೀಗೆ ಶಾಪದ ಕೊನೆಯನ್ನು ಹೇಳಿ ಶಿವನು ಅದೃಶ್ಯನಾಗಲು ಅದನ್ನು ಕೇಳಿ ನಾನು ಬಹುಬೇಗನೆ ಭೂಲೋಕದಲ್ಲಿ ವೈಶ್ಯರ ಕುಲದಲ್ಲಿ ಹುಟ್ಟಿದೆನು.

೬೦. ವಲಭೀ ಎಂಬ ಹೆಸರಿನ ನಗರದಲ್ಲಿ ಮಹಾಧನ ಎಂಬ ವ್ಯಾಪಾರಿಯ ಮಗನಾಗಿ ವಸುದತ್ತ ಎಂಬ ಹೆಸರಿನಿಂದ ನಾನು ಬೆಳೆದೆನು.

೬೧. ಕಾಲಕಳೆದಂತೆ ನಾನು ಹರೆಯದಲ್ಲಿ ತಂದೆಯಿಂದ ಎಲ್ಲ ಸಾಮಗ್ರಿಗಳನ್ನೂ ಪಡೆದು ಅವನ ಆದೇಶಾನುಸಾರವಾಗಿ ಬೇರೆ ದೇಶಕ್ಕೆ ವ್ಯಾಪಾರದ ವಹಿವಾಟಿಗಾಗಿ ಹೋದೆನು.

---

ಅಸ್ತಿ ಪೂರ್ವಮಹಂ ವ್ಯೋಮಚಾರೀ ವಿದ್ಯಾಧರೋಽಭವಮ್ ।
ಹಿಮವಚ್ಛೃಂಗಮಾರ್ಗೇಣ ಗತೋಽಭೂವಂ ಕದಾಚನ ॥ ೫೬
ತತಶ್ಚಾಧಃ ಸ್ಥಿತಸ್ತತ್ರ ಕ್ರೀಡನ್ ಗೌರ್ಯಾ ಸಮಂ ಹರಃ ।
ಶಶಾಪೋಲ್ಲಂಘನಕ್ರುದ್ಧೋ ಮರ್ತ್ಯಯೋನೌ ಪತೇತಿ ಮಾಮ್ ॥ ೫೭
ಪ್ರಾಪ್ಯ ವಿದ್ಯಾಧರೀಂ ಭಾರ್ಯಾಂ ನಿಯೋಜ್ಯ ಸ್ವಪದೇ ಸುತಮ್ ।
ಪುನರ್ವೈದ್ಯಾಧರೀಂ ಯೋನಿಂ ಸ್ಮೃತಜಾತಿಃ ಪ್ರಪತ್ಸ್ಯಸೇ ॥ ೫೮
ಏವಂ ನಿಶಮ್ಯ ಶಾಪಾಂತಮುಕ್ತ್ವಾ ಶರ್ವೇ ತಿರೋಹಿತೇ ।
ಅಚಿರೇಣೈವ ಜಾತೋಽಹಂ ಭೂತಲೇ ವಣಿಜಾಂ ಕುಲೇ ॥ ೫೯
ನಗರ್ಯಾಂ ವಲಭೀನಾಮ್ನ್ಯಾಂ ಮಹಾಧನವಣಿಕ್‌ಸುತಃ ।
ವಸುದತ್ತಾಭಿಧಾನಃ ಸನ್ ವೃದ್ಧಿಂ ಚ ಗತವಾನಹಮ್ ॥ ೬೦
ಕಾಲೇನ ಯೌವನಸ್ಥಶ್ಚ ಪಿತ್ರಾ ಕೃತಪರಿಚ್ಛದಃ ।
ದ್ವೀಪಾಂತರಂ ಗತೋಽಭೂವಂ ವಣಿಜ್ಯಾಯೈ ತದಾಜ್ಞಯಾ ॥ ೬೧

೬೨. ಆಗ ನಾನು ಅಡವಿಯಲ್ಲಿ ಬರುತ್ತಿರುವಾಗ ದರೋಡೆಕೋರರು ನನ್ನ ಮೇಲೆ ದಾಳಿ ಮಾಡಿ, ಹಣವನ್ನೆಲ್ಲ ಕದ್ದುಕೊಂಡು ನನ್ನನ್ನೂ ಕಟ್ಟಿ ತಮ್ಮ ಹಳ್ಳಿಯ ಚಂಡಿಕಾದೇವಾಲಯಕ್ಕೆ ಒಯ್ದರು.

೬೩. ಆ ದೇವಾಲಯದ ಮೇಲೆ ಉದ್ದವಾದ ಬಾವುಟ ಹಾರಾಡುತ್ತಿತ್ತು. ಕೆಂಪು ಬಟ್ಟೆಯ ಆ ಪತಾಕೆಯು ಪಶುಗಳ ಪ್ರಾಣಗಳನ್ನು ಹೀರಲು ಬಯಸುವ ಯಮನ ನಾಲಿಗೆಯಂತೆ ಕಾಣಿಸುತ್ತಿತ್ತು.

೬೪. ಅವರ ಪ್ರಭು ಪುಲಿಂದಕನು ದೇವಿಯನ್ನು ಪೂಜಿಸುತ್ತಿರಲು ಅವರು ನನ್ನನ್ನು ಬಲಿಕೊಡಲು ಆ ಪ್ರಭುವಿನ ಸಮೀಪಕ್ಕೆ ಕರೆದೊಯ್ದರು.

೬೫. ಅವನು ಬೇಡರ ಕುಲದವನಾದರೂ ನನ್ನನ್ನು ನೋಡಿದ ಕೂಡಲೇ ನನ್ನ ಬಗ್ಗೆ ಅವನ ಹೃದಯ ಮೃದುವಾಯಿತು. ನಿಷ್ಕಾರಣವಾಗಿ ಸ್ನೇಹವನ್ನು ಹೊಂದುವ ಮನಸ್ಸು ಜನ್ಮಾಂತರದ ಪ್ರೀತಿಯನ್ನು ಸೂಚಿಸುತ್ತದೆಯಷ್ಟೆ

೬೬. ಆಮೇಲೆ ಆ ಬೇಡರ ಒಡೆಯನು ನನ್ನನ್ನು ವಧೆಯಿಂದ ಬಿಡಿಸಿ ತನ್ನನ್ನೇ ಬಲಿಕೊಟ್ಟುಕೊಂಡು ಪೂಜೆಯ ಮುಕ್ತಾಯವನ್ನು ಮಾಡಲು ಬಯಸಿದನು.

೬೭. '"ಹಾಗೆ ಮಾಡಬೇಡ. ನಿನ್ನಲ್ಲಿ ಪ್ರಸನ್ನಳಾಗಿದ್ದೇನೆ. ವರವನ್ನು ಬೇಡಿಕೋ" ಎಂದು ದಿವ್ಯವಾದ ವಾಣಿಯು ಹೇಳಲು ಸಂತುಷ್ಟನಾದ ಅವನು ಇಂತೆಂದನು.

---

ಆಗಚ್ಛಂತಂ ತತೋಽಟವ್ಯಾಂ ತಸ್ಕರಾ ವಿನಿಪತ್ಯ ಮಾಮ್ ।
ಹೃತಸ್ವಮನಯನ್ ಬದ್ಧ್ವಾ ಸ್ವಪಲ್ಲೀಂ ಚಂಡಿಕಾಗೃಹಮ್ ॥ ೬೨
ವಿಲೋಲದೀರ್ಘಯಾ ಘೋರಂ ರಕ್ತಾಂಶುಕಪತಾಕಯಾ ।
ಜಿಘತ್ಸತಃ ಪಶುಪ್ರಾಣಾನ್ ಕೃತಾಂತಸ್ಯೇವ ಜಿಹ್ವಯಾ ॥ ೬೩
ತತ್ರಾಹಮುಪಹಾರಾರ್ಥಮುಪನೀತೋ ನಿಜಸ್ಯ ತೈಃ ।
ಪ್ರಭೋಃ ಪುಲಿಂದಕಾಖ್ಯಸ್ಯ ದೇವೀಂ ಪೂಜಯತೋಽಂತಿಕಮ್ ॥ ೬೪
ಸ ದೃಷ್ಟ್ವೈವಾರ್ದ್ರಹೃದಯಃ ಶಬರೋಽಪ್ಯಭವನ್ಮಯಿ ।
ವಕ್ತಿ ಜನ್ಮಾಂತರಪ್ರೀತಿಂ ಮನಃ ಸ್ನಿಹ್ಯದಕಾರಣಮ್ ॥ ೬೫
ತತೋ ಮಾಂ ಮೋಚಯಿತ್ವೈವ ವಧಾತ್ ಸ ಶಬರಾಧಿಪಃ ।
ಐಚ್ಛದಾತ್ಮೋಪಹಾರೇಣ ಕರ್ತುಂ ಪೂಜಾಸಮಾಪನಮ್ ॥ ೬೬
ಮೈವಂ ಕೃಥಾಃ ಪ್ರಸನ್ನಾಸ್ಮಿ ತವ ಯಾಚಸ್ವ ಮಾಂ ವರಮ್ ।
ಇತ್ಯುಕ್ತೋ ದಿವ್ಯಯಾ ವಾಚಾ ಪ್ರಹೃಷ್ಟಶ್ಚ ಜಗಾದ ಸಃ ॥ ೬೭

೧೮. '"ನೀನು ಪ್ರಸನ್ನಳಾದ ಮೇಲೆ ಬೇರೆ ವರ ಯಾವುದಿದೆ? ಆದರೂ ಇಷ್ಟನ್ನು ಮಾತ್ರ ಬೇಡಿಕೊಳ್ಳುತ್ತೇನೆ. ಮುಂದಿನ ಜನ್ಮದಲ್ಲೂ ನನಗೆ ಈ ವ್ಯಾಪಾರಿಯೊಡನೆ ಗೆಳೆತನ ಉಂಟಾಗಲಿ".

೧೯. ಹಾಗೇ ಆಗಲಿ ಎಂದು ಹೇಳಿ ವಾಣಿಯು ನಿಂತಿತು. ಆಮೇಲೆ ಶಬರನು ವಿಶಿಷ್ಟವಾದ ಸಂಪತ್ತನ್ನು ನನಗೆ ಕೊಟ್ಟು ನನ್ನ ಮನೆಗೆ ಕಳುಹಿಸಿದನು.

೨೦. ಮೃತ್ಯುವಿನ ಬಾಯಿನಿಂದಲೂ ಪ್ರವಾಸದಿಂದಲೂ ನಾನು ಹಿಂದಿರುಗಿ ಬಂದಾಗ ವಿಷಯವನ್ನೆಲ್ಲ ಅರಿತುಕೊಂಡ ನನ್ನ ತಂದೆಯು ದೊಡ್ಡ ಉತ್ಸವವನ್ನೇ ನಡೆಸಿದನು.

೨೧. ಕೆಲವು ಕಾಲ ಕಳೆದ ಮೇಲೆ ವ್ಯಾಪಾರಿಗಳ ಸಾಲನ್ನು ಲೂಟಿ ಮಾಡಿದನೆಂಬ ಕಾರಣದಿಂದ ರಾಜನಿಂದ ಸೆರೆ ಹಿಡಿಸಿ ತರಲ್ಪಟ್ಟ ಆ ಬೇಡರ ನಾಯಕನನ್ನು ನಾನು ನೋಡಿದೆನು.

೨೨. ಆ ಕ್ಷಣದಲ್ಲೇ ನಾನು ತಂದೆಗೆ ಹೇಳಿ ರಾಜನಿಗೆ ಬಿನ್ನವಿಸಿ ಒಂದು ಲಕ್ಷ ಹೊನ್ನನ್ನಿತ್ತು ಮರಣದಂಡನೆಯಿಂದ ಬೇಡರ ನಾಯಕನನ್ನು ಬಿಡಿಸಿಕೊಂಡೆನು.

೨೩. ಪ್ರಾಣವನ್ನು ನೀಡಿದ ಉಪಕಾರಕ್ಕೆ ಹೀಗೆ ಪ್ರತ್ಯುಪಕಾರವನ್ನು ಮಾಡಿ ಮನೆಗೆ ಕರೆತಂದು ಪ್ರೀತಿಯಿಂದ ಪೂರ್ಣವಾಗಿ ದೀರ್ಘಕಾಲದವರೆಗೆ ಅವನಿಗೆ ಉಪಚಾರವನ್ನು ಮಾಡಿದೆನು.

---

ತ್ವಂ ಪ್ರಸನ್ನಾ ವರಃ ಕೋಽನ್ಯಸ್ತಥಾಪ್ಯೇತಾವದರ್ಥಯೇ ।
ಜನ್ಮಾಂತರೇಽಪಿ ಮೇ ಸಖ್ಯಮನೇನ ವಣಿಜಾಸ್ತ್ವಿತಿ ॥ ೧೮
ಏವಮಸ್ತ್ವಿತಿ ಶಾಂತಾಯಾಂ ವಾಚಿ ಮಾಂ ಶಬರೋಽಥ ಸಃ ।
ಪ್ರದತ್ತಸವಿಶೇಷಾರ್ಥಂ ಪ್ರಜಿಘಾಯ ನಿಜಂ ಗೃಹಮ್ ॥ ೧೯
ಮೃತ್ಯೋರ್ಮುಖಾತ್ ಪ್ರವಾಸಾಚ್ಚ ತತಃ ಪ್ರತ್ಯಾಗತೇ ಮಯಿ ।
ಅಕರೋಜ್ಜ್ಞಾತವೃತ್ತಾಂತಃ ಪಿತಾ ಮಮ ಮಹೋತ್ಸವಮ್ ॥ ೨೦
ಕಾಲೇನ ತತ್ರ ಚಾಪಶ್ಯಮಹಂ ಸಾರ್ಥಾವಲುಂಠನಾತ್ ।
ವಷ್ಟಬ್ಧ್ವಾನಾಯಿತಂ ರಾಜ್ಞಾ ತಮೇವ ಶಬರಾಧಿಪಮ್ ॥ ೨೧
ತತ್ಕ್ಷಣಂ ಪಿತುರಾವೇದ್ಯ ವಿಜ್ಞಪ್ಯ ಚ ಮಹೀಪತಿಮ್ ।
ಮೋಚಿತಃ ಸ್ವರ್ಣಲಕ್ಷೇಣ ಸ ಮಯಾ ವಧನಿಗ್ರಹಾತ್ ॥ ೨೨
ಪ್ರಾಣದಾನೋಪಕಾರಸ್ಯ ಕೃತ್ವೈವಂ ಪ್ರತ್ಯುಪಕ್ರಿಯಾಮ್ ।
ಆನೀಯ ಚ ಗೃಹಂ ಪ್ರೀತ್ಯಾ ಪೂರ್ಣಂ ಸಂಮಾನಿತಶ್ಚಿರಮ್ ॥ ೨೩

೭೪. ಸತ್ಕಾರ ಮಾಡಿ ಕಳುಹಿಸಿಕೊಟ್ಟಾಗ ಆ ಬೇಡರ ಒಡೆಯನು ಒಲವಿನಿಂದ ಮೆದುವಾಗಿದ್ದ ತನ್ನ ಹೃದಯವನ್ನು ನನ್ನಲ್ಲಿಟ್ಟು ತನ್ನ ಹಳ್ಳಿಗೆ ಹೋದನು.

೭೫. ಮತ್ತೆ ನನ್ನ ಉಪಕಾರವನ್ನು ತೀರಿಸಲು ನನಗೆ ಕಾಣಿಕೆಯನ್ನು ಕೊಡಬೇಕೆಂದು ಚಿಂತಿಸಿ ತನ್ನ ಬಳಿ ಇದ್ದ ಮುತ್ತು, ಕಸ್ತೂರಿ ಮುಂತಾದುದೆಲ್ಲವೂ ಅಲ್ಪ ಎಂದು ಅವನು ಭಾವಿಸಿದನು.

೭೬. ಅನಂತರ ಅತಿಶಯದ ಮುತ್ತುಗಳ ರಾಶಿಯನ್ನು ನನಗೋಸ್ಕರ ಸಂಪಾದಿಸಲು ಅವನು ಬಿಲ್ಲನ್ನು ಹಿಡಿದು ಆನೆಗಳನ್ನು ಕೊಲ್ಲಲು ಹಿಮಾಲಯಕ್ಕೆ ಹೋದನು.

೭೭. ಅಲ್ಲಿ ಅಲೆದಾಡುತ್ತಾ ಒಂದು ದೊಡ್ಡ ನೀರಿನ ಕೊಳವನ್ನು ಅವನು ತಲುಪಿದನು. ಅದರ ದಡದಲ್ಲಿ ಒಂದು ದೇವಾಲಯವಿತ್ತು ಆ ಕೊಳದಲ್ಲಿದ್ದ ತಾವರೆ ಹೂವುಗಳೂ ಅವನಂತೆ ಮಿತ್ರರಾಗಿಗಳಾಗಿ (ಸ್ನೇಹಿತನಲ್ಲಿ ಅಥವಾ ಸೂರ್ಯನಲ್ಲಿ ಒಲವನ್ನುಳ್ಳವು ಗಳಾಗಿ) ಪ್ರೀತಿಯನ್ನು ತೋರಿಸಿದವು.

೭೮. ಕಾಡಾನೆಗಳು ನೀರನ್ನು ಕುಡಿಯಲು ಅಲ್ಲಿಗೆ ಬರುತ್ತವೆ ಎಂದು ಊಹಿಸಿ ಅವುಗಳನ್ನು ಕೊಲ್ಲಲು ಕೈಯಲ್ಲಿ ಬಿಲ್ಲನ್ನು ಹಿಡಿದು ರಹಸ್ಯಜಾಗದಲ್ಲಿ ಅವಿತುಕೊಂಡು ಅವನು ನಿಂತಿದ್ದನು.

---

ಸತ್ಕೃತ್ಯ ಪ್ರೇಷಿತಶ್ಚಾಥ ಹೃದಯಂ ಪ್ರೇಮಪೇಶಲಮ್ ।
ನಿಧಾಯ ಮಯಿ ಪಲ್ಲೀಂ ಸ್ವಾಂ ಪ್ರಾಯಾತ್ ಸ ಶಬರಾಧಿಪಃ ॥ ೭೪
ತತ್ರ ಪ್ರತ್ಯುಪಕಾರಾರ್ಥಂ ಚಿಂತಯನ್ ಪ್ರಾಭೃತಂ ಮಮ ।
ಸ್ವಲ್ಪಂ ಸ ಮೇನೇ ಸ್ವಾಧೀನಂ ಮುಕ್ತಾಕಸ್ತೂರಿಕಾದ್ಯಪಿ ॥ ೭೫
ತತಃ ಸಾತಿಶಯಂ ಪ್ರಾಪ್ತುಂ ಮುಕ್ತಾಸಾರಂ ಸ ಮತ್ಕೃತೇ ।
ಧನುರ್ದ್ವಿತೀಯಃ ಪ್ರಯಯೌ ಗಜಾನ್ ಹಂತುಂ ಹಿಮಾಲಯಮ್ ॥ ೭೬
ಭ್ರಮಂಶ್ಚ ತತ್ರ ತೀರಸ್ಥದೇವಾಗಾರಂ ಮಹತ್ಸರಃ ।
ಪ್ರಾಪ ತುಲ್ಯೈಃ ಕೃತಪ್ರೀತಿಸ್ತದಬ್ಜೈರ್ಮಿತ್ರರಾಗಿಭಿಃ ॥ ೭೭
ತತ್ರಾಶಂಕ್ಯಾಂಬುಪಾನಾರ್ಥಮಾಗಮಂ ವನ್ಯಹಸ್ತಿನಾಮ್ ।
ಛನ್ನಃ ಸ ತಸ್ಥಾವೇಕಾಂತೇ ಸಚಾಪಸ್ತಜ್ಜಿಘಾಂಸಯಾ ॥ ೭೮

೭೯–೮೦. ಅಷ್ಟರಲ್ಲಿ ಕೊಳದ ದಡದಲ್ಲಿದ್ದ ಶಿವನನ್ನು ಪೂಜಿಸಲು ಅಲ್ಲಿಗೆ ಬಂದ ಸಿಂಹವಾಹನೆಯಾದ ಅದ್ಭುತಾಕಾರೆ ಕುಮಾರಿಯೊಬ್ಬಳನ್ನು ಅವನು ಕಂಡನು. ಹಿಮಾಚಲದ ಇನ್ನೊಬ್ಬ ಮಗಳೋ ಎಂಬಂತೆ ಇದ್ದ ಅವಳು ಕನ್ಯಾವಸ್ಥೆಯಲ್ಲಿದ್ದು ಶಂಭುವಿನ ಸೇವೆಯಲ್ಲಿ ತೊಡಗಿದ್ದಳು.

೮೧. ಅವಳನ್ನು ನೋಡಿ ಅಚ್ಚರಿಗೆ ಈಡಾದ ಬೇಡ ಹೀಗೆ ಚಿಂತಿಸಿದನು. "ಇವಳು ಯಾರಿರಬಹುದು ? ಮನುಷ್ಯಸ್ತ್ರೀ ಆಗಿದ್ದರೆ ಸಿಂಹವಾಹನೆ ಆಗಿರುವುದು ಹೇಗೆ ?

೮೨. ಅಥವಾ ದಿವ್ಯಸ್ತ್ರೀ ಆಗಿರುವುದಾದರೆ ನನ್ನಂಥವರಿಗೆ ಕಾಣಿಸುತ್ತಿರುವುದು ಹೇಗೆ ? ಆದ್ದರಿಂದ ನನ್ನ ಕಣ್ಣುಗಳು ಹಿಂದೆ ಮಾಡಿದ್ದ ಪುಣ್ಯಗಳ ಮೂರ್ತೀಭವಿಸಿದ ಪರಿಪಾಕವೇ ಇವಳು.

೮೩. ಇವಳೊಡನೆ ಆ ನನ್ನ ಸ್ನೇಹಿತನನ್ನು ಜೋಡಿಸಿದರೆ ಆಗ ನಾನು ಅವನಿಗೆ ಬೇರೊಂದು ರೀತಿಯ ಉಪಕಾರವನ್ನು ಮಾಡಿದಂತಾಗುತ್ತದೆ.

೮೪. ಆದ್ದರಿಂದ ಇವಳು ಯಾರೆಂದು ತಿಳಿದುಕೊಳ್ಳಲು ಹತ್ತಿರ ಹೋಗುವುದೇ ಸರಿ' ಎಂದು ಆಲೋಚಿಸಿ ಆ ನನ್ನ ಗೆಳೆಯ ಬೇಡನು ಅವಳ ಬಳಿಗೆ ಹೋದನು.

---

ತಾವತ್ತತ್ರ ಸರಸ್ತೀರಗತಂ ಪೂಜಯಿತುಂ ಹರಮ್ ।
ಆಗತಾಮದ್ಭುತಾಕಾರಾಂ ಕುಮಾರೀಂ ಸಿಂಹವಾಹನಾಮ್ ॥ ೭೯
ಸ ದದರ್ಶ ತುಷಾರಾದ್ರಿರಾಜಪುತ್ರೀಮಿವಾಪರಾಮ್ ।
ಪರಿಚರ್ಯಾಪರಾಂ ಶಂಭೋಃ ಕನ್ಯಕಾಭಾವವರ್ತಿನೀಮ್ ॥ ೮೦
ದೃಷ್ಟ್ವಾ ಚ ವಿಸ್ಮಯಾಕ್ರಾಂತಃ ಶಬರಃ ಸ ವ್ಯಚಿಂತಯತ್ ।
ಕೇಯಂ ಸ್ಯಾದ್ ಯದಿ ಮರ್ತ್ಯಸ್ತ್ರೀ ತತ್ ಕಥಂ ಸಿಂಹವಾಹನಾ ॥ ೮೧
ಅಥ ದಿವ್ಯಾ ಕಥಂ ದೃಶ್ಯಾ ಮಾದೃಶೈಸ್ತದಿಯಂ ಧ್ರುವಮ್ ।
ಚಕ್ಷುಷೋಃ ಪೂರ್ವಪುಣ್ಯಾನಾಂ ಮೂರ್ತಾ ಪರಿಣತಿರ್ಮಮ ॥ ೮೨
ಅನಯಾ ಯದಿ ಮಿತ್ರಂ ತಂ ಯೋಜಯೇಯಮಹಂ ತತಃ ।
ಕಾಪ್ಯನ್ಯೈವ ಮಯಾ ತಸ್ಯ ಕೃತಾ ಸ್ಯಾತ್ ಪ್ರತ್ಯುಪಕ್ರಿಯಾ ॥ ೮೩
ತದೇತಾಮುಪಸರ್ಪಾಮಿ ತಾವಜ್ಜಿಜ್ಞಾಸಿತುಂ ವರಮ್ ।
ಇತ್ಯಾಲೋಚ್ಯ ಸ ಮಿತ್ರಂ ಮೇ ಶಬರಸ್ತಾಮುಪಾಯಯೌ ॥ ೮೪

೮೫. ನೆರಳಿನಲ್ಲಿ ನಿಂತುಕೊಂಡ ಸಿಂಹದಿಂದ ಅವಳು ಅಪ್ಸರಲ್ಲಿ ಇಳಿದು ಕೊಳದ ಬಳಿ ಬಂದು ತಾವರೆ ಹೂವುಗಳನ್ನು ಕುಯ್ದು ಸಂಗ್ರಹಿಸಲಾರಂಭಿಸಿದಳು.

೮೬. ಬೇಡನು ಅವಳ ಸಮೀಪಕ್ಕೆ ಬಂದು ನಮಸ್ಕಾರ ಮಾಡಿದಾಗ ಅವನನ್ನು ನೋಡಿ ಅಪೂರ್ವವಾದ ಅತಿಥಿ ಎಂಬ ಪ್ರೀತಿಯಿಂದ ಸ್ವಾಗತವನ್ನು ಕೋರಿ ಸಂತೋಷವನ್ನುಂಟುಮಾಡಿದಳು.

೮೭. "ನೀನು ಯಾರು ? ಅತ್ಯಂತ ದುರ್ಗಮವಾದ ಈ ಜಾಗಕ್ಕೆ ಏಕೆ ಬಂದಿರುವೆ ?' ಎಂದು ಆಕೆ ಕೇಳಿದಾಗ ಶಬರನಿಂತು ಉತ್ತರವನ್ನು ಕೊಟ್ಟನು.

೮೮. "ಭವಾನಿಯ ಪಾದಗಳನ್ನೇ ಆಶ್ರಯಿಸಿರುವ ನಾನೊಬ್ಬ ಬೇಡರ ಒಡೆಯ. ಆನೆಗಳ ಮುತ್ತುಗಳ ಆಸೆಯಿಂದ ಈ ಕಾಡಿಗೆ ಬಂದಿದ್ದೇನೆ.

೮೯. ದೇವಿ, ಈಗ ನಿನ್ನನ್ನು ನೋಡಿ ನನಗೆ ಆತ್ಮೀಯನೂ ಪ್ರಾಣಗಳನ್ನು ಕೊಟ್ಟವನೂ ಆದ ಸಾರ್ಥವಾಹನ ಮಗ ಶ್ರೀಮಂತ ವಸುದತ್ತನು ನನ್ನ ನೆನಪಿಗೆ ಬಂದನು.

೯೦. ಚೆಲುವೆ, ನಿನ್ನಂತೆ ಅವನೂ ರೂಪದಿಂದಲೂ ಯೌವನದಿಂದಲೂ ಅದ್ವಿತೀಯನಾಗಿ ಈ ಜಗತ್ತಿನ ಕಣ್ಣುಗಳಿಗೆ ಅಮೃತದ ಚೆಲುಮೆಯಂತಿದ್ದಾನೆ.

೯೧. ಸ್ನೇಹ, ಔದಾರ್ಯ, ಕರುಣೆ ಮತ್ತು ಧೈರ್ಯಗಳಿಗೆ ನಿಧಿಯಾದ ಅವನು ಯಾವ ಹುಡುಗಿಯ ಕಂಕಣಸಹಿತವಾದ ಕೈಯನ್ನು ಹಿಡಿಯುವನೋ ಅವಳೇ ಧನ್ಯೆ.

---

ತಾವಚ್ಚ ಸಾವತೀರ್ಯೈವ ಸಿಂಹಾಚ್ಛಾಯಾನಿಷಾದಿನಃ ।
ಕನ್ಯಾಗತ್ಯ ಸರಃ ಪದ್ಮಾನ್ಯವಚೇತುಂ ಪ್ರಚಕ್ರಮೇ ॥ ೮೫
ತಂ ಚ ದೃಷ್ಟ್ವಾಂತಿಕಪ್ರಾಪ್ತಂ ಶಬರಂ ಸಾ ಕೃತಾನತಿಮ್ ।
ಅಪೂರ್ವಮತಿಥಿಪ್ರೀತ್ಯಾ ಸ್ವಾಗತೇನಾನ್ವರಂಜಯತ್ ॥ ೮೬
ಕಸ್ತ್ವಂ ಕಿಂ ಚಾಗತೋಽಸ್ಯೇತಾಂ ಭೂಮಿಮತ್ಯಂತದುರ್ಗಮಾಮ್ ।
ಇತಿ ಪೃಷ್ಟವತೀಂ ತಾಂ ಚ ಶಬರಃ ಪ್ರತ್ಯುವಾಚ ಸಃ ॥ ೮೭
ಅಹಂ ಭವಾನೀಪಾದೈಕಶರಣಃ ಶಬರಾಧಿಪಃ ।
ಆಗತೋಽಸ್ಮಿ ಚ ಮಾತಂಗಮುಕ್ತಾಹೇತೋರಿದಂ ವನಮ್ ॥ ೮೮
ತ್ವಾಂ ಚ ದೃಷ್ಟ್ವಾಧುನಾತ್ಮೀಯೋ ದೇವಿ ಪ್ರಾಣಪ್ರದಃ ಸುಹೃತ್ ।
ಸಾರ್ಥವಾಹಸುತಃ ಶ್ರೀಮಾನ್ ವಸುದತ್ತೋ ಮಯಾ ಸ್ಮೃತಃ ॥ ೮೯
ಸ ಹಿ ತ್ವಮಿವ ರೂಪೇಣ ಯೌವನೇನ ಚ ಸುಂದರಿ ।
ಅದ್ವಿತೀಯೋಽಸ್ಯ ವಿಶ್ವಸ್ಯ ನಯನಾಮೃತನಿರ್ಝರಃ ॥ ೯೦
ಸಾ ಧನ್ಯಾ ಕನ್ಯಕಾ ಲೋಕೇ ಯಸ್ಯಾಸ್ತೇನೇಹ ಗೃಹ್ಯತೇ ।
ಮೈತ್ರೀದಾನದಯಾಧೈರ್ಯನಿಧಿನಾ ಕಂಕಣೀ ಕರಃ ॥ ೯೧

೬೨. ನಿನ್ನ ಈ ಆಕೃತಿಯು ಅಂಥವನ ಜೊತೆಗೆ ಸೇರದಿದ್ದರೆ, ಆ ಮನ್ಮಥನು ಧನುಸ್ಸನ್ನು ವ್ಯರ್ಥವಾಗಿ ಹೊತ್ತುಕೊಂಡಿದ್ದಾನೆಂದು ನನಗೆ ದುಃಖವಾಗುತ್ತದೆ.'

೬೩. ಮನ್ಮಥನ ಮೋಹಕ ಮಂತ್ರದ ಅಕ್ಷರಗಳಂತಿದ್ದ ಬೇಡರೊಡೆಯನ ಮಾತುಗಳು ಆ ಕುಮಾರಿಯ ಮನಸ್ಸನ್ನು ಅಪಹರಿಸಿದವು.

೬೪. ಮನ್ಮಥನಿಂದ ಪ್ರೇರಿತಳಾಗಿ ಅವಳು ಬೇಡನಿಗಿಂತೆಂದಳು. ""ಆ ನಿನ್ನ ಮಿತ್ರನೆಲ್ಲಿದ್ದಾನೋ, ಅಲ್ಲಿಂದ ಕರೆದು ತಂದು ನನಗೆ ತೋರಿಸು".

೬೫ ಆ ಮಾತನ್ನು ಕೇಳಿ, ಹಾಗೇ ಆಗಲಿ ಎಂದು ಹೇಳಿ ಆಗಲೇ ಆ ಬೇಡನು ತಾನು ಕೃತಾರ್ಥನಾದೆನೆಂದು ತಿಳಿದುಕೊಂಡು ಸಂತೋಷಪಡುತ್ತಾ ಅಲ್ಲಿಂದ ಹೊರಟನು.

೬೬ ತನ್ನ ಹಳ್ಳಿಯನ್ನು ಸೇರಿ ಮುತ್ತು, ಕಸ್ತೂರಿ ಇತ್ಯಾದಿಗಳನ್ನು ತೆಗೆದುಕೊಂಡು ನಮ್ಮ ಮನೆಗೆ ಬಂದನು. ಅವನು ತಂದ ಪದಾರ್ಥಗಳು ಅಪಾರವಾಗಿದ್ದು ನೂರಾರು ಪ್ರಾಣಿಗಳು ಹೊರುವಂತಿದ್ದವು.

೬೭ ಅಲ್ಲಿ ಒಳಗೆ ಬಂದ ಅವನನ್ನು ಎಲ್ಲರೂ ಗೌರವಿಸಿದರು. ಅನೇಕ ಲಕ್ಷ ಹೊನ್ನುಗಳ ಬೆಲೆಯ ಆ ಕಾಣಿಕೆಯನ್ನು ಅವನು ನನ್ನ ತಂದೆಗೆ ಅರ್ಪಿಸಿದನು.

೬೮. ಆ ದಿನವು ಹಬ್ಬದಂತೆ ಕಳೆದುಹೋಯಿತು. ರಾತ್ರಿ ಏಕಾಂತದಲ್ಲಿ ಅವನು ನನಗೆ ಮೊದಲಿನಿಂದ ಆರಂಭಿಸಿ ಕನ್ಯೆಯ ದರ್ಶನದ ವೃತ್ತಾಂತವನ್ನು ಬಣ್ಣಿಸಿದನು.

---

ತತ್ತ್ವದಾಕೃತಿರೇಷಾ ಚೇತ್ ತಾದೃಶೇನ ನ ಯುಜ್ಯತೇ ।
ವ್ಯರ್ಥಂ ವಹತಿ ತತ್ಕಾಮಃ ಕೋದಂಡಮಿತಿ ಮೇ ವ್ಯಥಾ ॥ ೬೨
ಇತಿ ವ್ಯಾಧೇಂದ್ರವಚನೈಃ ಸದ್ಯೋಽಪಹೃತಮಾನಸಾ ।
ಸಾಭೂತ್ ಕುಮಾರೀ ಕಂದರ್ಪಮೋಹಮಂತ್ರಾಕ್ಷರೈರಿವ ॥ ೬೩
ಉವಾಚ ತಂ ಚ ಶಬರಂ ಪ್ರೇರ್ಯಮಾಣಾ ಮನೋಭುವಾ ।
ಕ್ವ ಸ ತೇ ಸುಹೃದಾನೀಯ ತಾವನ್ಮೇ ದರ್ಶ್ಯತಾಮಿತಿ ॥ ೬೪
ತಚ್ಛ್ರುತ್ವಾ ಚ ತಥೇತ್ಯುಕ್ತ್ವಾ ತಾಮಾಮಂತ್ರ್ಯ ತದೈವ ಸಃ ।
ಕೃತಾರ್ಥಮಾನೀ ಮುದಿತಃ ಪ್ರತಸ್ಥೇ ಶಬರಸ್ತತಃ ॥ ೬೫
ಪ್ರಾಪ್ಯ ಸ್ವಪಲ್ಲೀಮಾದಾಯ ಮುಕ್ತಾಮೃಗಮದಾದಿಕಮ್ ।
ಭೂರಿ ಭಾರಶತೈರ್ಹಾರ್ಯಮಸ್ಮದ್ಗೃಹಮಥಾಯಯೌ ॥ ೬೬
ಸರ್ವೈಃ ಪುರಸ್ಕೃತಸ್ತತ್ರ ಪ್ರವಿಶ್ಯ ಪ್ರಾಭೃತಂ ಚ ತತ್ ।
ಮತ್ಪಿತ್ರೇ ಸ ಬಹುಸ್ವರ್ಣಲಕ್ಷಮೂಲ್ಯಂ ನ್ಯವೇದಯತ್ ॥ ೬೭
ಉತ್ಸವೇನ ಚ ಯಾತೇಽಸ್ಮಿನ್ ದಿನೇ ರಾತ್ರೌ ಸ ಮೇ ರಹಃ ।
ಕನ್ಯಾದರ್ಶನವೃತ್ತಾಂತಂ ತಮಾಮೂಲಾದವರ್ಣಯತ್ ॥ ೬೮

೯೯. 'ಬಾ, ಅಲ್ಲಿಗೆ ಹೋಗೋಣ' ಎಂದು ಹೇಳಿ ಉತ್ಕಂಠಿತನಾಗಿದ್ದ ನನ್ನನ್ನು ಕರೆದುಕೊಂಡು ರಾತ್ರಿಯಲ್ಲೇ ಆ ಬೇಡರೊಡೆಯನು ತನ್ನಿಚ್ಛೆಯಂತೆ ಹೊರಟನು.

೧೦೦. ಬೇಡರೊಡೆಯನ ಜೊತೆಯಾಗಿ ನಾನು ಎಲ್ಲಿಗೋ ಹೋಗಿರುವುದನ್ನು ಬೆಳಗಾದ ಮೇಲೆ ತಿಳಿದುಕೊಂಡ ನನ್ನ ತಂದೆಯು ಅವನಲ್ಲಿದ್ದ ಪ್ರೀತಿಯ ನಂಬಿಕೆಯಿಂದ ಧೈರ್ಯವನ್ನವಲಂಬಿಸಿ ಸುಮ್ಮನಿದ್ದನು.

೧೦೧. ವೇಗದಿಂದ ನಡೆಯುತ್ತಿದ್ದ ಮತ್ತು ದಾರಿಯನ್ನು ಮಾಡಿಕೊಡುತ್ತಿದ್ದ ಆ ಬೇಡರೊಡೆಯನು ಕ್ರಮವಾಗಿ ನನ್ನನ್ನು ಹಿಮಾಲಯಕ್ಕೆ ಕರೆದೊಯ್ದನು.

೧೦೨. ಸಾಯಂಕಾಲದ ವೇಳೆಗೆ ಆ ಕೊಳದ ಬಳಿಗೆ ಬಂದು ಮಿಂದು ಸಿಹಿ ಹಣ್ಣುಗಳನ್ನು ತಿಂದು ನಾನೂ ಅವನೂ ಆ ರಾತ್ರಿಯನ್ನು ಆ ಕಾಡಿನಲ್ಲೇ ಕಳೆದೆವು.

೧೦೩–೧೦೪. ಆ ಕೊಳದ ನೀರನ್ನು ಕುಡಿದ ನಮಗೆ ಇರುಳಿನಲ್ಲಿ ಆ ಬೆಟ್ಟದ ಕಾಡು ರತಿಯ ವಾಸದ ಮನೆಯಂತೆ ವಿಶ್ರಾಂತಿಯನ್ನು ನೀಡಿತು. ಅದರಲ್ಲಿ ಬಳ್ಳಿಗಳು ಹೂವುಗಳನ್ನೆರಚುತ್ತಿದ್ದುವು. ದುಂಬಿಗಳ ಇಂಚರದಿಂದ ಅದು ಅಂದವಾಗಿತ್ತು. ಶುದ್ಧವಾದ ಗಾಳಿ ಬೀಸುತ್ತಿದ್ದು ಮನಸ್ಸನ್ನು ಆಕರ್ಷಿಸುತ್ತಿತ್ತು. ಹೊಳೆಯುತ್ತಿದ್ದ ಗಿಡಮೂಲಿಕೆಗಳೇ ಅಲ್ಲಿ ಸೊಡರುಗಳಾಗಿದ್ದುವು.

---

ಏಹಿ ತತ್ರೈವ ಗಚ್ಛಾವ ಇತ್ಯುಕ್ತ್ವಾ ಚ ಸಮುತ್ಸುಕಮ್ ।
ಮಾಮಾದಾಯ ನಿಶಿ ಸ್ವೈರಂ ಸ ಪ್ರಾಯಾಚ್ಛಬರಾಧಿಪಃ ॥ ೯೯
ಪ್ರಾತಶ್ಚ ಮಾಂ ಗತಂ ಕ್ವಾಪಿ ಬುದ್ಧ್ವಾ ಸ ಶಬರಾಧಿಪಮ್ ।
ತತ್ಪ್ರೀತಿಪ್ರತ್ಯಯಾತ್ ತಸ್ಥೌ ಧೃತಿಮಾಲಂಬ್ಯ ಮತ್ಪಿತಾ ॥ ೧೦೦
ಅಹಂ ಚ ಪ್ರಾಪಿತೋಽಭೂವಂ ಕ್ರಮಾತ್ತೇನ ತರಸ್ವಿನಾ ।
ಶಬರೇಣ ತುಷಾರಾದ್ರಿಂ ಕೃತಾಧ್ವಪರಿಕರ್ಮಣಾ ॥ ೧೦೧
ತಚ್ಚ ಪ್ರಾಪ್ಯ ಸರಃ ಸಾಯಂ ಸ್ನಾತ್ವಾ ಸ್ವಾದುಫಲಾಶನೌ ।
ಅಹಂ ಚ ಸ ಚ ತಾಮೇಕಾಂ ವನೇ ತತ್ರೋಷಿತೌ ನಿಶಾಮ್ ॥ ೧೦೨
ಲತಾಭಿಃ ಕೀರ್ಣಕುಸುಮಂ ಭೃಂಗೀಸಂಗೀತಸುಂದರಮ್ ।
ಶುಭಗಂಧವಹಂ ಹಾರಿ ಜ್ವಲಿತೌಷಧಿದೀಪಿಕಮ್ ॥ ೧೦೩
ರತೇಸ್ತದ್ ವಾಸವೇಶ್ಮೇವ ವಿಶ್ರಾಂತ್ಯೈ ಗಿರಕಾನನಮ್ ।
ಆವಯೋರಭವನ್ನಕ್ತಂ ಪಿಬತೋಸ್ತತ್ ಸರೋವರಮ್ ॥ ೧೦೪

೧೦೫-೧೦೬ ಮಾರನೆಯ ದಿನ ಅವಳನ್ನು ನೋಡುವ ತವಕದಿಂದ ಅದುರುತ್ತಿದ್ದ ನನ್ನ ಬಲಗಣ್ಣು ಅವಳ ಬರುವಿಕೆಯನ್ನು ಸೂಚಿಸುತ್ತಿರುವಾಗ ಹೆಜ್ಜೆ ಹೆಜ್ಜೆಗೂ ಅವಳ ಬಗ್ಗೆ ತಹತಹ ಪಡುತ್ತಿದ್ದ ಮತ್ತು ಅವಳ ದಾರಿಯಲ್ಲೇ ಓಡಿಹೋಗುತ್ತಿದ್ದ ನನ್ನ ಮನಸ್ಸಿನಿಂದ ಎದುರುಗೊಳ್ಳಲ್ಪಟ್ಟವಳಂತೆ ಆ ಕನ್ಯೆಯು ಬಂದಳು.

೧೦೭ ಕೇಸರಗಳಿಂದ ತುಂಬಿದ್ದ ಸಿಂಹದ ಮೇಲೆ ಕುಳಿತು ಬಂದ ಸುಂದರಿಯು ಮಾಗಿಕಾಲದ ಮೋಡಗಳ ಮಡಿಲಿನಲ್ಲಿ ಮಲಗಿದ ಚಂದಿರನ ಕಲೆಯಂತಿದ್ದಳು.

೧೦೮. ಅವಳನ್ನು ನೋಡುತ್ತಿದ್ದಾಗ ನನ್ನಲ್ಲಿ ಅಚ್ಚರಿಯೂ ಉತ್ಕಂಠೆಯೂ ಭಯವೂ ಉಕ್ಕಿದವು. ಆಗ ನನ್ನ ಹೃದಯ ಹೇಗಿತ್ತೋ ನಾನರಿಯೆ.

೧೦೯. ಅನಂತರ ಆ ಕನ್ಯೆಯು ಸಿಂಹದಿಂದ ಇಳಿದು ಹೂಗಳನ್ನು ಕುಯ್ದು ಸಂಗ್ರಹಿಸಿ, ಕೊಳದಲ್ಲಿ ಮಿಂದು ಅದರ ದಡದಲ್ಲಿದ್ದ ಶಿವನನ್ನು ಪೂಜಿಸಿದಳು.

೧೧೦. ಪೂಜೆ ಮುಗಿದ ಮೇಲೆ ನನ್ನ ಗೆಳೆಯ ಬೇಡನು ಬಳಿಗೆ ಹೋಗಿ ನಮಸ್ಕರಿಸಿ ತಾನು ಯಾರೆಂದು ಹೇಳಿದಾಗ ಅವಳು ಆದರವನ್ನು ತೋರಿಸಿದಳು. ಆಮೇಲೆ ಅವನಿಂತೆಂದನು.

೧೧೧. ""ದೇವಿ, ನಿನಗೆ ಅನುರೂಪವರನಾದ ನನ್ನ ಸ್ನೇಹಿತನನ್ನು ಕರೆದುಕೊಂಡು ಬಂದಿದ್ದೇನೆ. ನೀನು ಇಷ್ಟಪಡುವುದಾದರೆ ಈಗಲೇ ಅವನನ್ನು ತೋರಿಸುತ್ತೇನೆ.

---

ತತೋಽನ್ಯೇದ್ಯುಃ ಪ್ರತಿಪದಂ ತತ್ತದುತ್ಕಲಿಕಾಭೃತಾ ।
ಪ್ರತ್ಯುದ್ಗತೇವ ಮನಸಾ ಮಮ ತನ್ಮಾರ್ಗಧಾವಿನಾ ॥ ೧೦೫
ಚಕ್ಷುಷಾ ದಕ್ಷಿಣೇನಾಪಿ ಸೂಚಿತಾಗಮನಾಮುನಾ ।
ದಿದೃಕ್ಷಯೇವ ಸ್ಫುರತಾ ಸಾ ಕನ್ಯಾತ್ರಾಗತಾಭವತ್ ॥ ೧೦೬
ಸಟಾಲಸಿಂಹಪೃಷ್ಠಸ್ಥಾ ಸುಭ್ರೂರ್ದೃಷ್ಟಾ ಮಯಾ ಚ ಸಾ ।
ಶರದಂಭೋಧರೋತ್ಸಂಗಸಂಗಿನೀವೈಂದವೀ ಕಲಾ ॥ ೧೦೭
ವಿಲಸದ್ವಿಸ್ಮಯೌತ್ಸುಕ್ಯಸಾಧ್ವಸಂ ಪಶ್ಯತಶ್ಚ ತಾಮ್ ।
ಮಮಾವರ್ತತ ತತ್ಕಾಲಂ ನ ಜಾನೇ ಹೃದಯಂ ಕಥಮ್ ॥ ೧೦೮
ಅಥಾವತೀರ್ಯ ಸಿಂಹಾತ್ ಸಾ ಪುಷ್ಪಾಣ್ಯುಚ್ಚಿತ್ಯ ಕನ್ಯಕಾ ।
ಸ್ನಾತ್ವಾ ಸರಸಿ ತತ್ತೀರಗತಂ ಹರಮಪೂಜಯತ್ ॥ ೧೦೯
ಪೂಜಾವಸಾನೇ ಚೋಪೇತ್ಯ ಸ ಸಖಾ ಶಬರೋ ಮಮ ।
ಪ್ರಣಮ್ಯಾತ್ಮಾನಮಾವೇದ್ಯ ತಾಮವೋಚತ್ ಕೃತಾದರಾಮ್ ॥ ೧೧೦
ಆನೀತಃ ಸ ಮಯಾ ದೇವಿ ಸುಹೃದ್ಯೋಗ್ಯೋ ವರಸ್ತವ ।
ಮನ್ಯಸೇ ಯದಿ ತತ್ತುಭ್ಯಂ ದರ್ಶಯಾಮ್ಯಧುನೈವ ತಮ್ ॥ ೧೧೧

೧೨. ಅದನ್ನು ಕೇಳಿ ಆಕೆ 'ತೋರಿಸು' ಎಂದು ಹೇಳಲು ಆ ಬೇಡನು ಬಂದು ನನ್ನನ್ನು ಅವಳ ಬಳಿಗೆ ಕರೆದುಕೊಂಡು ಹೋಗಿ ತೋರಿಸಿದನು.

೧೩. ಅವಳು ನನ್ನನ್ನು ಪ್ರೇಮವನ್ನು ಸುರಿಸುತ್ತಿದ್ದ ಕುಡಿಗಣ್ಣಿನ ನೋಟದಿಂದ ನೋಡಿ ಮನ್ಮಥನ ಆವೇಶಕ್ಕೆ ಒಳಗಾಗಿ ಆ ಬೇಡರೊಡೆಯನಿಗೆ ಹೇಳಿದಳು.

೧೪. ""ನಿನ್ನ ಮಿತ್ರನು ಮನುಷ್ಯನಲ್ಲ. ನಿಶ್ಚಿತವಾಗಿ ಯಾವನೋ ದೇವತೆ. ನನ್ನನ್ನು ವಂಚಿಸಲು ಇಂದು ಬಂದಿದ್ದಾನೆ. ಮನುಷ್ಯನಾಗಿ ಇಂಥ ಆಕಾರ ಎಲ್ಲಿಂದ ಬಂದೀತು ?"

೧೫. ಅದನ್ನು ಕೇಳಿ ಅವಳಲ್ಲಿ ನಂಬಿಕೆಯನ್ನು ಹುಟ್ಟಿಸಲು ನಾನೇ ಹೀಗೆ ನುಡಿದೆನು. ""ಸುಂದರಿ, ಸತ್ಯವಾಗಿಯೂ ನಾನು ಮನುಷ್ಯನೇ. ನೇರ ನುಡಿಯ ಜನರಲ್ಲಿ ಕಪಟವೇಕೆ ?

೧೬. ನಾನು ವಲಭೀನಿವಾಸಿಯಾದ ಸಾರ್ಥವಾಹನೊಬ್ಬನ ಮಗನು. ಮಹಾಧನ ಎಂಬ ಹೆಸರಿನ ಆ ವ್ಯಾಪಾರಿಗೆ ಮಹೇಶ್ವರನ ವರದಿಂದ ಹುಟ್ಟಿದವನು ನಾನು.

೧೭. ಮಗನಿಗೋಸ್ಕರ ಶಿವನನ್ನು ಉದ್ದೇಶಿಸಿ ತಪಸ್ಸನ್ನು ಮಾಡುತ್ತಿದ್ದ ಮಹಾಧನನಿಗೆ ಸಂತುಷ್ಟನಾಗಿದ್ದ ಆ ಭಗವಂತನು ಕನಸಿನಲ್ಲಿ ಹೀಗೆ ಆದೇಶಿಸಿದನು.

೧೮. ""ಎದ್ದೇಳು, ಯಾವನೋ ಮಹಾತ್ಮನು ನಿನ್ನ ಮಗನಾಗಿ ಹುಟ್ಟುವನು. ಇದು ಪರಮ ರಹಸ್ಯ. ಈ ಬಗೆಗೆ ಹೆಚ್ಚು ಹೇಳುವುದು ಬೇಡ."

---

ತಚ್ಛ್ರುತ್ವಾ ದರ್ಶಯೇತ್ಯುಕ್ತೇ ತಯಾ ಸ ಶಬರಸ್ತತಃ ।
ಆಗತ್ಯ ನಿಕಟಂ ನೀತ್ವಾ ಮಾಂ ತಸ್ಯಾಃ ಸಮದರ್ಶಯತ್ ॥ ೧೨
ಸಾಪಿ ಮಾಂ ತಿರ್ಯಗಾಲೋಕ್ಯ ಚಕ್ಷುಷಾ ಪ್ರಣಯಸ್ರುತಾ ।
ಮದನಾವೇಶವಶಗಾ ಶಬರೇಶಂ ತಮಭ್ಯಧಾತ್ ॥ ೧೩
ಸಖಾ ತೇ ಮಾನುಷೋ ನಾಯಂ ಕಾಮಂ ಕೋಽಪ್ಯಯಮಾಗತಃ ।
ಮದ್ವಂಚನಾಯ ದೇವೋಽದ್ಯ ಮರ್ತ್ಯಸ್ಯೈಷಾಕೃತಿಃ ಕುತಃ ॥ ೧೪
ತದಾಕರ್ಣ್ಯೋಕ್ತವಾನಸ್ಮಿ ತಾಂ ಪ್ರತ್ಯಾಯಯಿತುಂ ಸ್ವಯಮ್ ।
ಸತ್ಯಂ ಸುಂದರಿ ಮರ್ತ್ಯೋಽಹಂ ಕಿಂ ವ್ಯಾಜೇನಾರ್ಜವೇ ಜನೇ ॥ ೧೫
ಅಹಂ ಹಿ ಸಾರ್ಥವಾಹಸ್ಯ ವಲಭೀವಾಸಿನಃ ಸುತಃ ।
ಮಹಾಧನಾಭಿಧಾನಸ್ಯ ಮಹೇಶ್ವರವರಾರ್ಜಿತಃ ॥ ೧೬
ತಪಸ್ಯನ್ ಸ ಹಿ ಪುತ್ರಾರ್ಥಮುದ್ದಿಶ್ಯ ಶಶಿಶೇಖರಮ್ ।
ಸಮಾದಿಶ್ಯತ ತೇನೈವಂ ಸ್ವಪ್ನೇ ದೇವೇನ ತುಷ್ಯತಾ ॥ ೧೭
ಉತ್ತಿಷ್ಠೋತ್ಪತ್ಸ್ಯತೇ ಕೋಽಪಿ ಮಹಾತ್ಮಾ ತನಯಸ್ತವ ।
ರಹಸ್ಯಂ ಪರಮಂ ಚೈತದಲಮುಕ್ತ್ವಾತ್ರ ವಿಸ್ತರಮ್ ॥ ೧೮

೧೯. ಇದನ್ನು ಕೇಳಿ ಎಚ್ಚೆತ್ತ ಅವನಿಗೆ ಕಾಲಕ್ರಮದಲ್ಲಿ ನಾನು ಮಗನಾಗಿ ಹುಟ್ಟಿ ವಸುದತ್ತ ಎಂದು ಹೆಸರನ್ನು ಪಡೆದೆನು.

೨೦. ಈ ಬೇಡರೊಡೆಯನು ನನಗೆ ತಾನಾಗಿ ಒದಗಿಬಂದ ಸ್ನೇಹಿತನು. ನಾನು ಬೇರೆ ದೇಶಕ್ಕೆ ಹೋಗಿದ್ದಾಗ ನನಗೆ ಸಿಕ್ಕಿದ ಇವನು ಕಷ್ಟಕಾಲದ ನನ್ನ ಏಕಮಾತ್ರ ಬಂಧು.

೨೧. ಸಂಕ್ಷಿಪ್ತವಾಗಿ ಇದು ನನ್ನ ವಾಸ್ತವ" ಎಂದು ಹೇಳಿ ನಾನು ಸುಮ್ಮನಾಗಲು ಆ ಕನ್ಯೆಯು ನಾಚಿ ತಲೆತಗ್ಗಿಸಿ ಹೀಗೆ ನುಡಿದಳು.

೨೨. ""ಶಿವನನ್ನು ಪೂಜಿಸಿದ ನನಗೆ ಕನಸಿನಲ್ಲಿ ಶಿವನೇ ಸಂತುಷ್ಟನಾಗಿ 'ಬೆಳಗಾದ ಮೇಲೆ ಪತಿಯನ್ನು ಪಡೆಯುವೆ' ಎಂದು ಹೇಳಿದನು.

೨೩. ಆದ್ದರಿಂದ ನೀನೇ ನನ್ನ ಪತಿ. ಈ ನಿನ್ನ ಗೆಳೆಯನು ನನ್ನ ಸೋದರ." ಎಂಬ ಮಾತಿನ ಅಮೃತದಿಂದ ನನ್ನನ್ನು ಆನಂದಗೊಳಿಸಿ ಅವಳು ಸುಮ್ಮನಾದಳು.

೨೪. ಆಮೇಲೆ ಅವಳೊಡನೆ ಮಾತನಾಡಿ ಸಂಪ್ರದಾಯಾನುಸಾರವಾಗಿ ಮದುವೆ ಮಾಡಿಕೊಳ್ಳಲು ಮಿತ್ರಸಹಿತನಾಗಿ ನಾನು ನನ್ನ ಮನೆಗೆ ಹೋಗಲು ನಿಶ್ಚಯವನ್ನು ಮಾಡಿದೆನು.

---

ಏತಚ್ಛ್ರುತ್ವಾ ಪ್ರಬುದ್ಧಸ್ಯ ತಸ್ಯ ಕಾಲೇನ ಚಾತ್ಮಜಃ ।
ಅಹಮೇಷ ಸಮುತ್ಪನ್ನೋ ವಸುದತ್ತ ಇತಿ ಶ್ರುತಃ ॥ ೧೯
ಅಯಂ ಚ ಶಬರಾಧೀಶಃ ಸ್ವಯಂವರಸುಹೃನ್ಮಯಾ ।
ದೇಶಾಂತರಗತೇನ ಪ್ರಾಕ್ ಪ್ರಾಪ್ತಃ ಕೃಚ್ಛ್ರೈಕಬಾಂಧವಃ ॥ ೨೦
ಏಷ ಮೇ ತತ್ತ್ವಸಂಕ್ಷೇಪ ಇತ್ಯುಕ್ತ್ವಾ ವಿರತೇ ಮಯಿ ।
ಅಭಾಷತಾಥ ಕನ್ಯಾ ಸಾ ಲಜ್ಜಯಾವನತಾನನಾ ॥ ೨೧
ಅಸ್ತ್ಯೇತನ್ಮಾಂ ಚ ಜಾನೇಽದ್ಯ ಸ್ವಪ್ನೇಽರ್ಚಿತವತೀಂ ಹರಃ ।
ಪ್ರಾತಃ ಪ್ರಾಪ್ಸ್ಯಸಿ ಭರ್ತಾರಮಿತಿ ತುಷ್ಟಃ ಕಿಲಾದಿಶತ್ ॥ ೨೨
ತಸ್ಮಾತ್ ತ್ವಮೇವ ಮೇ ಭರ್ತಾ ಭ್ರಾತಾಯಂ ಚ ಭವತ್ಸುಹೃತ್ ।
ಇತಿ ವಾಕ್ಸುಧಯಾ ಸಾ ಮಾಮಾನಂದ್ಯ ವಿರತಾಭವತ್ ॥ ೨೩
ಸಂಮಂತ್ರ್ಯಾಥ ತಯಾ ಸಾಕಂ ವಿವಾಹಾಯ ಯಥಾವಿಧಿ ।
ಅಕಾರ್ಷಂ ನಿಶ್ಚಯಂ ಗಂತುಂ ಸಮಿತ್ರೋಽಹಂ ನಿಜಂ ಗೃಹಮ್ ॥ ೨೪

೧೨೫. ಆಗ ಆ ಸುಂದರಿ ತನ್ನ ವಾಹನವಾದ ಸಿಂಹವನ್ನು ಸನ್ನೆಯಿಂದಲೇ ಕರೆದು ""ಆರ್ಯಪುತ್ರ ಇದನ್ನೇರು" ಎಂದು ನನಗೆ ಹೇಳಿದಳು.

೧೨೬. ಆ ಮೇಲೆ ನಾನು ಸಿಂಹವನ್ನೇರಿ ನನ್ನ ನಲ್ಲೆಯನ್ನು ಮಡಿಲಿನಲ್ಲಿ ಕೂಡಿಸಿಕೊಂಡೆನು. ಬೇಡರೊಡೆಯನು ಅನುಸರಿಸಿ ಬಂದನು.

೧೨೭. ಹೀಗೆ ಕೃತಕೃತ್ಯನಾಗಿ, ಮುಂದೆ ಆ ಮಿತ್ರನು ನಡೆಯುತ್ತಿರಲು, ಕಾಂತೆಯೊಡನೆ ಸಿಂಹದ ಮೇಲೆ ಕುಳಿತು ನನ್ನ ಮನೆಗೆ ಹೊರಟೆನು.

೧೨೮. ಆ ಬೇಡನು ಬಾಣಗಳಿಂದ ಕೊಂದ ಜಿಂಕೆಗಳ ಮಾಂಸದಿಂದ ಜೀವಿಸುತ್ತಾ ನಾವೆಲ್ಲರೂ ಕ್ರಮೇಣ ವಲಭೀನಗರವನ್ನು ತಲುಪಿದೆವು.

೧೨೯. ಅಲ್ಲಿ ಜನರು ಸಿಂಹದ ಮೇಲೆ ಕುಳಿತು ನಲ್ಲೆಯೊಡನೆ ಬಂದ ನನ್ನನ್ನು ನೋಡಿ ಆಶ್ಚರ್ಯಪಟ್ಟು ವೇಗವಾಗಿ ಹೋಗಿ ನನ್ನ ತಂದೆಗೆ ಹೇಳಿದರು.

೧೩೦. ನನ್ನ ತಂದೆಯು ಹರ್ಷದಿಂದ ನಮ್ಮನ್ನು ಎದುರುಗೊಂಡನು. ಸಿಂಹದಿಂದ ಇಳಿದು ಬಗ್ಗಿ ಕಾಲುಗಳಿಗೆ ನಮಸ್ಕರಿಸಿದ ನನ್ನನ್ನು ಆಶ್ಚರ್ಯಪಡುತ್ತಾ ಅಭಿನಂದಿಸಿದನು.

---

ತತಃ ಸಾ ಸಿಂಹಮಾಹೂಯ ವಾಹನಂ ತಂ ಸ್ವಸಂಜ್ಞಯಾ ।
ಅತ್ರಾರೋಹಾರ್ಯಪುತ್ರೇತಿ ಮಾಮಭಾಷತ ಸುಂದರೀ ॥ ೧೨೫
ಅಥಾಹಂ ತೇನ ಸುಹೃದಾನುಯಾತಃ ಶಬರೇಣ ತಮ್ ।
ಸಿಂಹಮಾರುಹ್ಯ ದಯಿತಾಮುತ್ಸಂಗೇ ತಾಂ ಗೃಹೀತವಾನ್ ॥ ೧೨೬
ತತಃ ಪ್ರಸ್ಥಿತವಾನಸ್ಮಿ ಕೃತಕೃತ್ಯೋ ನಿಜಂ ಗೃಹಮ್ ।
ಕಾಂತಯಾ ಸಹ ಸಿಂಹಸ್ಥೋ ಮಿತ್ರೇ ತಸ್ಮಿನ್ ಪುರಃಸರೇ ॥ ೧೨೭
ತದೀಯ ಶರನಿರ್ಭಿನ್ನಹರಿಣಾಮಿಷವೃತ್ತಯಃ ।
ಕ್ರಮೇಣ ತೇ ವಯಂ ಸರ್ವೇ ಸಂಪ್ರಾಪ್ತಾ ವಲಭೀಂ ಪುರೀಮ್ ॥ ೧೨೮
ತತ್ರ ಮಾಮಾಗತಂ ದೃಷ್ಟ್ವಾ ಸಿಂಹಾರೂಢಂ ಸವಲ್ಲಭಮ್ ।
ಸಾಶ್ಚರ್ಯಸ್ತದ್ ದ್ರುತಂ ಗತ್ವಾ ಮಮ ಪಿತ್ರೇ□ಬ್ರವೀಜ್ಜನಃ ॥ ೧೨೯
ಸೋ□ಪಿ ಪ್ರತ್ಯುದ್ಗತೋ ಹರ್ಷಾದವತೀರ್ಣಂ ಮೃಗೇಂದ್ರತಃ ।
ಪಾದಾವನಮ್ರಂ ದೃಷ್ಟ್ವಾ ಮಾಮಭ್ಯನಂದತ್ ಸವಿಸ್ಮಯಃ ॥ ೧೩೦

೧೩೧. ಕಾಲಿಗೆ ಬಿದ್ದು ನಮಸ್ಕಾರ ಮಾಡಿದ ಹಾಗೂ ನನಗೆ ಅನುರೂಪಳಾಗಿದ್ದ ಸರಿಸಾಟಿಯಿಲ್ಲದ ನನ್ನ ಹೆಂಡತಿಯನ್ನು ನೋಡಿ ಅವನು ಆನಂದದಿಂದ ಎಲ್ಲೂ ಹಿಡಿಸದಂತಾದನು.

೧೩೨. ನಮ್ಮನ್ನು ಮನೆಯೊಳಗೆ ಕರೆದುಕೊಂಡು ಹೋಗಿ, ಸಮಾಚಾರವನ್ನು ಕೇಳಿ ವಿಚಾರಿಸಿ ಬೇಡರೊಡೆಯನ ಸ್ನೇಹವನ್ನು ಹೊಗಳಿ ಹಬ್ಬವನ್ನಾಚರಿಸಿದನು.

೧೩೩. ಆಮೇಲೆ ಜ್ಯೌತಿಷಿಕರ ಆದೇಶಾನುಸಾರವಾಗಿ ಮಾರನೆಯ ದಿನ ಎಲ್ಲ ಬಂಧುಗಳೂ ಸೇರಿದ್ದಾಗ ನಾನು ಆ ಉತ್ತಮ ಕನ್ಯೆಯನ್ನು ಮದುವೆ ಮಾಡಿಕೊಂಡೆನು.

೧೩೪. ಎಲ್ಲರೂ ನೋಡುತ್ತಿದ್ದಂತೆಯೇ ಮದುವೆಯನ್ನು ನೋಡಿದ ನನ್ನ ವಧುವಿನ ವಾಹನವಾಗಿದ್ದ ಸಿಂಹವು ಇದ್ದಕ್ಕಿದಂತೆ ಮನುಷ್ಯನ ಆಕಾರವನ್ನು ತಳೆಯಿತು.

೧೩೫. "ಇದೇನು !' ಎಂದು ಅಲ್ಲಿದ್ದ ಎಲ್ಲ ಜನರೂ ಅಚ್ಚರಿಪಡಲು ದಿವ್ಯವಾದ ಬಟ್ಟೆಗಳನ್ನೂ ಒಡವೆಗಳನ್ನೂ ಧರಿಸಿದ್ದ ಆ ವ್ಯಕ್ತಿಯು ನಮಸ್ಕಾರ ಮಾಡಿ ನನಗೆ ಹೀಗೆ ಹೇಳಿದನು.

೧೩೬. "ನಾನು ಚಿತ್ರಾಂಗದನೆಂಬ ವಿದ್ಯಾಧರನು. ಈ ಕನ್ಯೆಯು ನನಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯಳಾದ ಮನೋವತೀ ಎಂಬ ಹೆಸರಿನ ಮಗಳು.

---

ಅನನ್ಯಸದೃಶೀಂ ತಾಂ ಚ ಕೃತಪಾದಾಭಿವಂದನಾಮ್ ।
ಪಶ್ಯನ್ ಮಮೋಚಿತಾಂ ಭಾರ್ಯಾಂ ನ ಮಾತಿ ಸ್ಮ ಮುದಾ ಕ್ವಚಿತ್ ॥
೧೩೧

ಪ್ರವೇಶ್ಯ ಮಂದಿರಂ ಚಾಸ್ಮಾತ್ ವೃತ್ತಾಂತಂ ಪರಿಪೃಚ್ಛ್ಯ ಚ ।
ಪ್ರಶಂಸನ್ ಶಬರಾಧೀಶಸೌಹಾರ್ದಂ ಚೋತ್ಸವಂ ವ್ಯಧಾತ್ ॥ ೧೩೨
ತತೋ ಮೌಹೂರ್ತಿಕಾದೇಶಾದನ್ಯೇದ್ಯುರ್ವರಕನ್ಯಕಾ ।
ಸಾ ಮಯಾ ಪರಿಣೀತಾಭೂನ್ಮಿಲಿತಾಖಿಲಬಂಧುನಾ ॥ ೧೩೩
ತದಾಲೋಕ್ಯ ಚ ಸೋಽಕಸ್ಮಾನ್ಮದ್ವಧೂವಾಹನಸ್ತದಾ ।
ಸಿಂಹಃ ಸರ್ವೇಷು ಪಶ್ಯತ್ಸು ಸಂಪನ್ನಃ ಪುರುಷಾಕೃತಿಃ ॥ ೧೩೪
ಕಿಮೇತದಿತಿ ವಿಭ್ರಾಂತೇ ಜನೇ ತತ್ರ ಸ್ಥಿತೇಽಖಿಲೇ ।
ಸ ದಿವ್ಯವಸ್ತ್ರಾಭರಣೋ ನಮನ್ಮಾಮೇವಮಬ್ರವೀತ್ ॥ ೧೩೫
ಅಹಂ ಚಿತ್ರಾಂಗದೋ ನಾಮ ವಿದ್ಯಾಧರ ಇಯಂ ಚ ಮೇ ।
ಸುತಾ ಮನೋವತೀ ನಾಮ ಕನ್ಯಾ ಪ್ರಾಣಾಧಿಕಪ್ರಿಯಾ ॥ ೧೩೬

೧೩೭ ಇವಳನ್ನು ಮಡಿಲಿನಲ್ಲಿ ಕೂಡಿಸಿಕೊಂಡು ಕಾಡುಗಳಲ್ಲಿ ಅಲೆದಾಡುತ್ತಿದ್ದ ನಾನು ಒಮ್ಮೆ ತೀರದಲ್ಲಿ ಅನೇಕ ತಪೋವನಗಳನ್ನು ಹೊಂದಿದ್ದ ಗಂಗೆಯ ಬಳಿ ಹೋದೆನು.

೧೩೮. ತಪಸ್ವಿಗಳನ್ನೆಲ್ಲಿ ದಾಟಿ ಹೋಗುವೆನೋ ಎಂಬ ಭಯದಿಂದ ಆ ನದಿಯ ಮಧ್ಯದಲ್ಲಿ ನಾನು ಹೋಗುತ್ತಿದ್ದಾಗ ನನ್ನ ಹೂವಿನ ಹಾರವು ದೈವಯೋಗದಿಂದ ಗಂಗೆಯ ನೀರಿನಲ್ಲಿ ಬಿದ್ದುಬಿಟ್ಟಿತು.

೧೩೯. ಆಗ ಅಲ್ಲಿ ನೀರಿನೊಳಗಿದ್ದ ನಾರದಮುನಿಯು ಎದ್ದು ನಿಂತನು. ಅವನ ಬೆನ್ನಿನ ಮೇಲೆ ಆ ಹಾರವು ಬಿದ್ದಿತೆಂದು ಕೋಪಿಸಿಕೊಂಡು ಆ ಮುನಿಯು ನನಗೆ ಶಾಪವನ್ನು ಕೊಟ್ಟನು.

೧೪೦. ""ಎಲೈ ಪಾಪಿ, ಈ ಉದ್ಧತಭಾವದಿಂದ ನೀನು ಸಿಂಹವಾಗುವೆ, ಹೋಗು ಹಿಮಾಲಯದಲ್ಲಿ ಇದ್ದು ಈ ನಿನ್ನ ಮಗಳನ್ನು ಬೆನ್ನಿನ ಮೇಲೆ ಹೊತ್ತುಕೊಂಡಿರು.

೧೪೧. ಯಾವಾಗ ಈ ನಿನ್ನ ಮಗಳನ್ನು ಮನುಷ್ಯನೊಬ್ಬನು ವರಿಸುವನೋ ಆಗ ಅದನ್ನು ನೋಡಿ ಈ ಶಾಪದಿಂದ ಮುಕ್ತಾಗುವೆ".

೧೪೨. ಮುನಿಯ ಶಾಪಕ್ಕೆ ಗುರಿಯಾದ ನಾನು ಸಿಂಹವಾಗಿ ಹಿಮಾಲಯದಲ್ಲಿ ಇದ್ದೆನು. ಶಿವನ ಪೂಜೆಯಲ್ಲಿ ನಿರತಳಾದ ಇವಳನ್ನು ಹೊತ್ತುಕೊಂಡಿರುತ್ತಿದ್ದೆನು.

---

ಏತಾಮಂಕೇ ಸದಾ ಕೃತ್ವಾ ವಿಪಿನೇನ ಭ್ರಮನ್ನಹಮ್ ।
ಪ್ರಾಪ್ತವಾನ್ ಏಕದಾ ಗಂಗಾಂ ಭೂರಿತೀರತಪೋವನಾಮ್ ॥ ೧೩೭
ತಪಸ್ವಿಲಂಘನತ್ರಾಸಾತ್ ತಸ್ಯಾ ಮಧ್ಯೇನ ಗಚ್ಛತಃ ।
ಅಪತನ್ಮಮ ದೈವಾಚ್ಚ ಪುಷ್ಪಮಾಲಾ ತದಂಭಸಿ ॥ ೧೩೮
ತತೋ□ಕಸ್ಮಾತ್ ಸಮುತ್ಥಾಯ ನಾರದೋ□ಂತರ್ಜಲಸ್ಥಿತಃ ।
ಪೃಷ್ಠೇ ತಯಾ ಪತಿತಯಾ ಕ್ರುದ್ಧೋ ಮಾಮಶಪನ್ಮುನಿಃ ॥ ೧೩೯
ಔದ್ಧತ್ಯೇನಾಮುನಾ ಪಾಪ ಗಚ್ಛ ಸಿಂಹೋ ಭವಿಷ್ಯಸಿ ।
ಹಿಮಾಚಲೇ ಗತಶ್ಚೈತಾಂ ಸುತಾಂ ಪೃಷ್ಠೇನ ವಕ್ಷ್ಯಸಿ ॥ ೧೪೦
ಯದಾ ಚ ಮಾನುಷೇಣೈಷಾ ಸುತಾ ತೇ ಪರಿಣೇಷ್ಯತೇ ।
ತದಾ ತದ್ದರ್ಶನಾದೇವ ಶಾಪಾದಸ್ಮಾದ್ ವಿಮೋಕ್ಷ್ಯಸೇ ॥ ೧೪೧
ಇತ್ಯಹಂ ಮುನಿನಾ ಶಪ್ತಃ ಸಿಂಹೀಭೂಯ ಹಿಮಾಚಲೇ ।
ಅತಿಷ್ಠಂ ತನಯಾಮೇತಾಂ ಹರಪೂಜಾಪರಾಂ ವಹನ್ ॥ ೧೪೨

೧೫೩. ಆಮೇಲೆ ಬೇಡರೊಡೆಯನ ಪ್ರಯತ್ನದಿಂದ ಇದೆಲ್ಲ ಹೇಗೆ ಎಲ್ಲರ ಒಳ್ಳೆಯದರಲ್ಲಿ ಪರಿಣಮಿಸಿತೆಂಬುದು ನಿನಗೇ ತಿಳಿದಿದೆ.

೧೫೪. ಆದ್ದರಿಂದ ಈಗ ನಾನು ಹೋಗುತ್ತೇನೆ. ನಿಮಗೆ ಮಂಗಳವಾಗಲಿ. ನನ್ನ ಶಾಪವು ಕಳೆಯಿತು." ಎಂದು ಹೇಳಿ ಆ ವಿದ್ಯಾಧರನು ಕೂಡಲೇ ಆಕಾಶಕ್ಕೆ ಹಾರಿಹೋದನು.

೧೫೫. ನನ್ನ ತಂದೆ ಆಶ್ಚರ್ಯದಲ್ಲಿ ಮುಳುಗಿ ಸ್ವಜನರೂ ಬಂಧುಗಳೂ ಆನಂದಿಸುತ್ತಿರಲು ಒಳ್ಳೆಯ ಸಂಬಂಧ ದೊರಕಿತೆಂದು ಸಂತುಷ್ಟನಾಗಿ ದೊಡ್ಡ ಉತ್ಸವವನ್ನು ಜರುಗಿಸಿದನು.

೧೫೬. ಸ್ನೇಹಿತರಿಗಾಗಿ ತಮ್ಮ ಪ್ರಾಣಗಳನ್ನೇ ಕೊಟ್ಟು ಉಪಕಾರವನ್ನು ಮಾಡಿಯೂ ಯಾರಿಗೆ ತೃಪ್ತಿ ಇಲ್ಲವೋ ಅಂಥ ನಿಷ್ಕಪಟ ಮಿತ್ರರ ಚರಿತದ ಬಗ್ಗೆ ಯಾರು ಯೋಚನೆ ಮಾಡುತ್ತಾರೆ ?

೧೫೭. ಶಬರಾಧಿಪತಿಯ ಆ ಉದಾರ ಕಾರ್ಯವನ್ನು ಮತ್ತೆ ಮತ್ತೆ ನೆನಪಿಸಿಕೊಂಡು ಚಮತ್ಕಾರಸಹಿತವಾಗಿ ಮೇಲೆ ಹೇಳಿದಂತೆ ಯಾವನು ತಾನೆ ಹೇಳುವುದಿಲ್ಲ ?

೧೫೮. ಅಲ್ಲಿದ್ದ ರಾಜನೂ ಅದನ್ನೆಲ್ಲ ಹಾಗೆಯೇ ತಿಳಿದುಕೊಂಡು ಆ ಒಳ್ಳೆಯ ಬುದ್ಧಿಯ ಬೇಡರೊಡೆಯನೊಡನೆ ನಮಗಿದ್ದ ಸ್ನೇಹದಿಂದ ಸಂತೋಷಪಟ್ಟನು.

---

ಅನಂತರಂ ಯಥಾ ಯತ್ನಾಚ್ಛಬರಾಧಿಪತೇರಿದಮ್ ।
ಸಂಪನ್ನಂ ಸರ್ವಕಲ್ಯಾಣಂ ತಥಾ ವಿದಿತಮೇವ ತೇ ॥ ೧೫೩

ತತ್ಸಾಧಯಾಮಿ ಭದ್ರಂ ವಸ್ತೀರ್ಣಃ ಶಾಪೋ ಮಯೈಷ ಸಃ ।
ಇತ್ಯುಕ್ತ್ವಾ ಸೋಽಭ್ಯುದಪತತ್ ಸದ್ಯೋ ವಿದ್ಯಾಧರೋ ನಭಃ ॥ ೧೫೪

ತತಸ್ತದ್ವಿಸ್ಮಯಾಕ್ರಾಂತೋ ನಮತ್ಸ್ವಜನಬಾಂಧವಃ ।
ಶ್ಲಾಘ್ಯಸಂಬಂಧಹೃಷ್ಟೋ ಮೇ ಪಿತಾಕಾರ್ಷೀನ್ಮಹೋತ್ಸವಮ್ ॥ ೧೫೫

ಕೋ ಹಿ ನಿರ್ವ್ಯಾಜಮಿತ್ರಾಣಾಂ ಚರಿತಂ ಚಿಂತಯಿಷ್ಯತಿ ।
ಸುಹೃತ್ಸು ನೈವ ತೃಪ್ಯಂತಿ ಪ್ರಾಣೈರಪ್ಯುಪಕೃತ್ಯ ಯೇ ॥ ೧೫೬

ಇತಿ ಚಾತ್ರ ನ ಕೋ ನಾಮ ಸಚಮತ್ಕಾರಮಭ್ಯಧಾತ್ ।
ಧ್ಯಾಯಂಧ್ಯಾಯಮುದಾರಂ ತಚ್ಛಬರಾಧಿಪಚೇಷ್ಟಿತಮ್ ॥ ೧೫೭

ರಾಜಾಪಿ ತತ್ತಥಾ ಬುದ್ಧ್ವಾ ತತ್ರತ್ಯಸ್ತಸ್ಯ ಸನ್ಮತೇಃ ।
ಅತುಷ್ಯದಸ್ಮತ್ಸ್ನೇಹೇನ ಶಬರಾಧಿಪತೇಃ ಪರಮ್ ॥ ೧೫೮

೧೫೯. ನನ್ನ ತಂದೆಯು ರಾಜನಿಗೆ ರತ್ನಗಳ ಕಾಣಿಕೆಯನ್ನು ಕೊಟ್ಟು ಆ ಬೇಡರ ನಾಯಕನಿಗೆ ಸಮಸ್ತ ಅಡವಿಯ ರಾಜ್ಯವನ್ನೂ ಕೊಡಿಸಿ ಸಂತುಷ್ಟನನ್ನಾಗಿ ಮಾಡಿದನು.

೧೬೦. ಆಮೇಲೆ ಮನೋವತಿಯೆಂಬ ಪತ್ನಿಯೊಡನೆ ಹಾಗೂ ಮಿತ್ರನಾದ ಬೇಡರೊಡೆಯನೊಡನೆ ಕೃತಾರ್ಥನಾಗಿ ನಾನು ಹಾಯಾಗಿ ಇದ್ದೆನು.

೧೬೧. ಆ ಶಬರರಾಜನು ತನ್ನ ದೇಶದ ವಾಸದ ಆಸಕ್ತಿಯನ್ನು ಕಡಿಮೆ ಮಾಡಿಕೊಂಡು ಹೆಚ್ಚಾಗಿ ನಮ್ಮ ಮನೆಯಲ್ಲೇ ವಾಸ ಮಾಡುತ್ತಿದ್ದನು.

೧೬೨. ಅನ್ಯೋನ್ಯರಿಗೆ ಮಾಡಿದ ಉಪಕಾರದಲ್ಲಿ ಎಂದೂ ನಮಗೆ ತೃಪ್ತಿಯೇ ಇರಲಿಲ್ಲ. ಹೀಗೆ ಮಿತ್ರರಾಗಿದ್ದ ನನಗೂ ಅವನಿಗೂ ಕಾಲವು ಕಳೆಯುತ್ತಿತ್ತು.

೧೬೩. ಬಹು ಬೇಗನೆ ಮನೋವತಿಯಲ್ಲಿ ನನಗೊಬ್ಬ ಮಗನು ಹುಟ್ಟಿದನು. ನಮ್ಮ ಸಮಸ್ತ ವಂಶದ ಹೃದಯದಲ್ಲಿದ್ದ ಸಂಭ್ರಮವು ಹೊರಗೆ ಬಂದಂತೆ ಆ ಮಗನು ಶೋಭಿಸಿದನು.

೧೬೪. ಹಿರಣ್ಯದತ್ತ ಎಂಬ ಹೆಸರಿನ ಅವನು ಮೆಲ್ಲ ಮೆಲ್ಲನೆ ಬೆಳೆದನು. ನಿಯಮಾನುಸಾರವಾಗಿ ವಿದ್ಯೆಯನ್ನು ಗಳಿಸಿ ಅನಂತರ ಅವನು ಮದುವೆ ಮಾಡಿಕೊಂಡನು.

---

ತುಷ್ಟಶ್ಚ ತಸ್ಮೈ ಮತ್ಪಿತ್ರಾ ದಾಪಿತಃ ಸಹಸೈವ ಚ ।
ಅಶೇಷಮಟವೀರಾಜ್ಯಂ ರತ್ನೋಪಾಯನದಾಯಿನಾ ॥ ೧೫೯
ತತಸ್ತಯಾ ಮನೋವತ್ಯಾ ಪತ್ನ್ಯಾ ಮಿತ್ರೇಣ ತೇನ ಚ ।
ಕೃತಾರ್ಥಃ ಶಬರೇಂದ್ರೇಣ ತತ್ರಾತಿಷ್ಠಮಹಂ ಸುಖೀ ॥ ೧೬೦
ಸ ಚ ಶ್ಲಥೀಕೃತಾತ್ಮೀಯದೇಶವಾಸರಸಸ್ತತಃ ।
ಭೂಯಸಾಸ್ಮದ್ಗೃಹೇಷ್ವೇವ ನ್ಯವಸಚ್ಛಬರಾಧಿಪಃ ॥ ೧೬೧
ಪರಸ್ಪರೋಪಕಾರೇಷು ಸರ್ವಕಾಲಮತೃಪ್ತಯೋಃ ।
ಸ ದ್ವಯೋರಗಮತ್ಕಾಲೋ ಮಮ ತಸ್ಯ ಚ ಮಿತ್ರಯೋಃ ॥ ೧೬೨
ಅಚಿರಾಚ್ಚ ಮನೋವತ್ಯಾಂ ತಸ್ಯಾಮಜನಿ ಮೇ ಸುತಃ ।
ಬಹಿಷ್ಕೃತಃ ಕುಲಸ್ಯೇವ ಕೃತ್ಸ್ನಸ್ಯ ಹೃದಯೋತ್ಸವಃ ॥ ೧೬೩
ಹಿರಣ್ಯದತ್ತನಾಮಾ ಚ ಸ ಶನೈರ್ವೃದ್ಧಿಮಾಯಯೌ ।
ಕೃತವಿದ್ಯೋ ಯಥಾವಚ್ಚ ಪರಿಣೀತೋಽಭವತ್ತತಃ ॥ ೧೬೪

೧೫೫. ಅದನ್ನು ನೋಡಿ ಜೀವಿತದ ಫಲವು ಪೂರ್ಣವಾಯಿತೆಂದು ತಿಳಿದು ನನ್ನ ವೃದ್ಧ ತಂದೆಯು ಶರೀರತ್ಯಾಗ ಮಾಡಲು ಹೆಂಡತಿಯೊಡನೆ ಗಂಗಾನದಿಗೆ ತೆರಳಿದನು.

೧೫೬. ಪಿತೃಶೋಕದಿಂದ ನೊಂದ ನನಗೆ ಬಂಧುಗಳು ಹೇಗೋ ಧೈರ್ಯವನ್ನು ತುಂಬಿದರು. ಆಮೇಲೆ ನನ್ನ ಮನೆಯ ಭಾರವನ್ನು ಹೊತ್ತುಕೊಳ್ಳಲು ನಿರ್ಧಾರ ಮಾಡಿದೆನು.

೧೫೭. ಆಗ ಒಂದು ಕಡೆ ಮನೋವತಿಯ ಮುದ್ದು ಮುಖದ ನೋಟ, ಇನ್ನೊಂದು ಕಡೆ ಶಬರರಾಜನ ಜೊತೆಯಾಟ ಇವು ನನ್ನನ್ನು ಸಂತೈಸಿದವು.

೧೫೮. ಒಳ್ಳೆಯ ಮಗನಿಂದ ಆನಂದವನ್ನು ತರುತ್ತಿದ್ದ, ಒಳ್ಳೆಯ ಹೆಂಡತಿಯಿಂದ ಮನೋಹರವಾಗಿದ್ದ, ಸ್ನೇಹಿತನ ಒಡನಾಟದಿಂದ ಸುಖ ತುಂಬಿದ್ದ ನನ್ನ ದಿವಸಗಳು ಕಳೆಯುತ್ತಿದ್ದವು.

೧೫೯. ಕಾಲಕಳೆದಂತೆ ಬೆಳೆಯುತ್ತಿದ್ದ ನನ್ನನ್ನು ಮುದಿತನವು ಗದ್ದದಲ್ಲಿ ಹಿಡಿದುಕೊಂಡಿತು. 'ಮಗನೇ, ಈಗಲೂ ಮನೆಯಲ್ಲಿ ಏನಿದೆ?' ಎಂದು ಅದು ಪ್ರೀತಿಯಿಂದ ನನಗೆ ಹಿತವನ್ನು ಹೇಳುವಂತಿತ್ತು.

೧೬೦. ಅದರಿಂದ ನನಗೆ ಕೂಡಲೇ ವೈರಾಗ್ಯವು ಹುಟ್ಟಿತು. ಕಾಡಿಗೆ ಹೋಗಲು ಇಚ್ಛಿಸಿ ನಾನು ನನ್ನ ಮಗನನ್ನು ಕುಟುಂಬದ ಭಾರವನ್ನು ಹೊರಲು ತೊಡಗಿಸಿದೆನು.

---

ತದ್ ದೃಷ್ಟ್ವಾ ಜೀವಿತಫಲಂ ಪೂರ್ಣಂ ಮತ್ವಾ ಚ ಮತ್ಪಿತಾ ।
ವೃದ್ಧೋ ಭಾಗೀರಥೀಂ ಪ್ರಾಯಾತ್ ಸದಾರೋ ದೇಹಮುಜ್ಝಿತುಮ್ ॥
೧೫೫

ತತೋಽಹಂ ಪಿತೃಶೋಕಾರ್ತಃ ಕಥಂಚಿದ್ ಬಾಂಧವೈರ್ಧೃತಿಮ್ ।
ಗ್ರಾಹಿತೋ ಗೃಹಭಾರಂ ಸ್ವಮುದ್ವೋಢುಂ ಪ್ರತಿಪನ್ನವಾನ್ ॥ ೧೫೬
ತದಾ ಮನೋವತೀಮುಗ್ಧಮುಖದರ್ಶನಮೇಕತಃ ।
ಅನ್ಯತಃ ಶಬರೇಂದ್ರೇಣ ಸಂಗಮೋ ಮಾಂ ವ್ಯನೋದಯತ್ ॥ ೧೫೭
ತತಃ ಸತ್ಪುತ್ರಸಾನಂದಾಃ ಸುಕಲತ್ರಮನೋರಮಾಃ ।
ಸುಹೃತ್ಸಮಾಗಮಸುಖಾಃ ಗತಾಸ್ತೇ ದಿವಸಾ ಮಮ ॥ ೧೫೮
ಕಾಲೇನಾಥ ಪ್ರವೃದ್ಧಂ ಮಾಮಗ್ರಹೀಚ್ಚುಬುಕೇ ಜರಾ ।
ಕಿಂ ಗೃಹೇಽದ್ಯಾಪಿ ಪುತ್ರೇತಿ ಪ್ರೀತ್ಯೇವ ಬ್ರುವತೀ ಹಿತಮ್ ॥ ೧೫೯
ತೇನಾಹಂ ಸಹಸೋತ್ಪನ್ನವೈರಾಗ್ಯಸ್ತನಯಂ ನಿಜಮ್ ।
ಕುಟುಂಬಭಾರೋದ್ವಹನೇ ವನಂ ವಾಂಛನ್ನಯೋಜಯಮ್ ॥ ೧೬೦

೧೬೧. ಬೇಡರ ರಾಜನೂ ನನ್ನಲ್ಲಿದ್ದ ಸ್ನೇಹದಿಂದ ರಾಜ್ಯವನ್ನು ತ್ಯಜಿಸಿ ಬಂದನು. ಅವನೊಡನೆ ಪತ್ನೀಸಮೇತನಾಗಿ ನಾನು ಕಾಲಂಜರ ಎಂಬ ಬೆಟ್ಟಕ್ಕೆ ಹೋದೆನು.

೧೬೨. ಅಲ್ಲಿಗೆ ತಲುಪಿದ ಮೇಲೆ ನನಗೆ ಆತ್ಮೀಯವಾದ ವಿದ್ಯಾಧರಜಾತಿಯೂ ಕೊನೆಗೊಂಡ ಶಿವಶಾಪವೂ ತಟ್ಟನೆ ನನ್ನ ನೆನಪಿಗೆ ಬಂದುವು.

೧೬೩. ಅದರಿಂದ ಮನುಷ್ಯಶರೀರವನ್ನು ತ್ಯಜಿಸಲು ಇಚ್ಛಿಸಿ ಕೂಡಲೇ ಆ ವಿಷಯವನ್ನು ನನ್ನ ಹೆಂಡತಿ ಮನೋವತಿಗೂ, ಮಿತ್ರ ಬೇಡರೊಡೆಯನಿಗೂ ಹೇಳಿದೆನು.

೧೬೪–೧೬೫. ಮುಂದಿನ ಜನ್ಮದಲ್ಲೂ ಇವರಿಬ್ಬರೂ ನನ್ನ ಹೆಂಡತಿ ಮತ್ತು ಗೆಳೆಯರಾಗಲಿ, ಅವರ ಸ್ಮರಣೆ ನನಗೆ ಉಂಟಾಗಲಿ ಎಂದು ಹೇಳಿ, ಶಿವನನ್ನು ಹೃದಯದಲ್ಲಿ ಧ್ಯಾನಿಸುತ್ತಾ ನಾನು ನನ್ನ ಹೆಂಡತಿ ಮತ್ತು ಮಿತ್ರನೊಡನೆ ಆ ಬೆಟ್ಟದ ತುದಿಯಿಂದ ವೇಗದಿಂದ ಬಿದ್ದು ಶರೀರವನ್ನು ತ್ಯಜಿಸಿದೆನು.

೧೬೬. ಅದೇ ನಾನು ಅನಂತರ ಜೀಮೂತವಾಹನ ಎಂಬ ಹೆಸರಿನಿಂದ ಈ ವಿದ್ಯಾಧರಕುಲದಲ್ಲಿ ಹುಟ್ಟಿದ್ದೇನೆ. ಈಗ ನಾನು ಹಿಂದಿನ ಜನ್ಮವನ್ನೆಲ್ಲ ನೆನಪಿಸಿ ಕೊಳ್ಳಬಲ್ಲೆ

---

ಸದಾರಶ್ಚ ಗತೋಽಭೂವಂ ಗಿರಿಂ ಕಾಲಂಜರಂ ತತಃ ।
ಮತ್ಸ್ನೇಹತ್ಯಕ್ತರಾಜ್ಯೇನ ಸಮಂ ಶಬರಭೂಭೃತಾ ॥ ೧೬೧
ತತ್ರ ಪ್ರಾಪ್ತೇನ ಚಾತ್ಮೀಯಾ ಜಾತಿರ್ವೈದ್ಯಾಧರೀ ಮಯಾ ।
ಶಾಪಶ್ಚ ಪ್ರಾಪ್ತಪರ್ಯಂತಃ ಸ ಶಾರ್ವಃ ಸಹಸಾ ಸ್ಮೃತಃ ॥ ೧೬೨
ತಚ್ಚ ಪತ್ನ್ಯೈ ಮನೋವತ್ಯೈ ತದೈವಾಖ್ಯಾತವಾನಹಮ್ ।
ಸಖ್ಯೇ ಚ ಶಬರೇಂದ್ರಾಯ ಮುಮುಕ್ಷುರ್ಮಾನುಷೀಂ ತನುಮ್ ॥ ೧೬೩
ಭಾರ್ಯಾಮಿತ್ರೇ ಇಮೇ ಏವ ಭೂಯಾಸ್ತಾಂ ಸ್ಮರತೋ ಮಮ ।
ಅನ್ಯಜನ್ಮನ್ಯಪೀತ್ಯುಕ್ತ್ವಾ ಹೃದಿ ಕೃತ್ವಾ ಚ ಶಂಕರಮ್ ॥ ೧೬೪
ಮಯಾ ಗಿರಿತಟಾತ್ತಸ್ಮಾನ್ನಿಪತ್ಯ ಪ್ರಸಭಂ ತತಃ ।
ತಾಭ್ಯಾಂ ಸ್ವಪತ್ನೀಮಿತ್ರಾಭ್ಯಾಂ ಸಹ ಮುಕ್ತಂ ಶರೀರಕಮ್ ॥ ೧೬೫
ಸೋಽಹಂ ತತಃ ಸಮುತ್ಪನ್ನೋ ನಾಮ್ನಾ ಜೀಮೂತವಾಹನಃ ।
ವಿದ್ಯಾಧರಕುಲೇಽಮುಷ್ಮಿನ್ನೇವ ಜಾತಿಸ್ಮರೋಽಧುನಾ ॥ ೧೬೬

೧೬೭. ಆ ಶಬರರೊಡೆಯನೇ ನೀನು, ಈಗ ಮುಕ್ಕಣ್ಣನ ಅನುಗ್ರಹದಿಂದ ಸಿದ್ಧರಾಜ ವಿಶ್ವಾವಸುವಿನ ಮಗ ಮಿತ್ರಾವಸು ಆಗಿ ಹುಟ್ಟಿರುವೆ.

೧೬೮. ಮಿತ್ರನೇ, ನನ್ನ ಭಾರ್ಯೆಯಾಗಿದ್ದ ವಿದ್ಯಾಧರಿ ಮನೋವತಿಯೇ ಈಗ ಮಲಯವತೀ ಎಂಬ ಹೆಸರಿನಿಂದ ನಿನ್ನ ತಂಗಿಯಾಗಿ ಹುಟ್ಟಿದ್ದಾಳೆ.

೧೬೯. ಹೀಗೆ ನಿನ್ನ ತಂಗಿಯು ನನ್ನ ಹಿಂದಿನ ಹೆಂಡತಿಯೇ. ನೀನೂ ನನ್ನ ಹಳೆಯ ಸ್ನೇಹಿತನೇ. ಆದ್ದರಿಂದ ಅವಳನ್ನು ಮದುವೆಯಾಗುವುದು ನನಗೆ ಸರಿಯಾದುದೇ.

೧೭೦. ಆದರೆ ಮೊದಲು ಇಲ್ಲಿಂದ ಹೋಗಿ ನನ್ನ ತಾಯಿತಂದೆಯರಿಗೆ ವಿಷಯವನ್ನು ತಿಳಿಸು. ಅವರು ಒಪ್ಪಿದರೆ ನಿನ್ನ ಇಷ್ಟಾರ್ಥ ನೆರವೇರುತ್ತದೆ."

೧೭೧. ಈ ಮಾತನ್ನು ಜೀಮೂತವಾಹನನಿಂದ ಕೇಳಿ ಮನಸ್ಸನ್ನು ಮುದಗೊಳಿಸಿಕೊಂಡ ಮಿತ್ರಾವಸು ಹೊರಟು ಅವನ ತಾಯಿತಂದೆಯರಿಗೆ ಅದನ್ನೆಲ್ಲ ಹೇಳಿದನು.

೧೭೨. ಅವರಿಬ್ಬರೂ ಅವನ ಮಾತನ್ನು ಒಪ್ಪಿ ಅಭಿನಂದಿಸಿದರು. ಮಿತ್ರಾವಸು ಸಂತೋಷಪಟ್ಟು ತನ್ನ ತಂದೆತಾಯಿಯರ ಬಳಿಗೆ ಹೋಗಿ ಅದೇ ವಿಷಯವನ್ನು ತಿಳಿಸಿದನು.

೧೭೩. ತಾವು ಅಪೇಕ್ಷಿಸಿದ್ದೇ ಆಯಿತೆಂದು ಅವರೂ ಸಂತೋಷಿಸಿದರು. ಯುವರಾಜ ಮಿತ್ರಾವಸು ಬೇಗ ಬೇಗನೆ ಮದುವೆಯ ಸಿದ್ಧತೆಗಳನ್ನು ಮಾಡಿದನು.

---

ಸ ಚಾಪಿ ಶಬರೇಂದ್ರಸ್ತ್ವಂ ಜಾತೋ ಮಿತ್ರಾವಸುಃ ಪುನಃ ।
ತ್ರ್ಯಕ್ಷಪ್ರಸಾದಾತ್ ಸಿದ್ಧಾನಾಂ ರಾಜ್ಞೋ ವಿಶ್ವಾವಸೋಃ ಸುತಃ ॥ ೧೬೭
ಸಾಪಿ ವಿದ್ಯಾಧರೀ ಮಿತ್ರ ಮಮ ಭಾರ್ಯಾ ಮನೋವತೀ ।
ತವ ಸ್ವಸಾ ಸಮುತ್ಪನ್ನಾ ನಾಮ್ನಾ ಮಲಯವತ್ಯಸೌ ॥ ೧೬೮
ಏವಂ ಮೇ ಪೂರ್ವಪತ್ನ್ಯೇಷಾ ಭಗಿನೀ ಮೇ ಭವಾನಪಿ ।
ಪೂರ್ವಮಿತ್ರಮತೋ ಯುಕ್ತಾ ಪರಿಣೇತುಮಸೌ ಮಮ ॥ ೧೬೯
ಕಿಂತು ಪೂರ್ವಮಿತೋ ಗತ್ವಾ ಮಮ ಪಿತ್ರೋರ್ನಿವೇದಯ ।
ತಯೋಃ ಪ್ರಮಾಣೀಕೃತಯೋಃ ಸಿದ್ಧ್ಯತ್ಯೇತತ್ತವೇಪ್ಸಿತಮ್ ॥ ೧೭೦
ಇತ್ಥಂ ನಿಶಮ್ಯ ಜೀಮೂತವಾಹನಾತ್ ಪ್ರೀತಮಾನಸಃ ।
ಗತ್ವಾ ಮಿತ್ರಾವಸುಃ ಸರ್ವಂ ತತ್ಪಿತೃಭ್ಯಾಂ ಶಶಂಸ ತತ್ ॥ ೧೭೧
ಅಭಿನಂದಿತವಾಕ್ಯಶ್ಚ ತಾಭ್ಯಾಂ ಹೃಷ್ಟಸ್ತಥೈವ ಸಃ ।
ಉಪಗಮ್ಯ ತಮೇವಾರ್ಥಂ ಸ್ವಪಿತೃಭ್ಯಾಂ ನ್ಯವೇದಯತ್ ॥ ೧೭೨
ತಯೋರೀಪ್ಸಿತಸಂಪತ್ತಿತುಷ್ಟಯೋಃ ಸತ್ವರಂ ಚ ಸಃ ।
ಯುವರಾಜೋ ವಿವಾಹಾಯ ಸಂಭಾರಮಕರೋತ್ ಸ್ವಸುಃ ॥ ೧೭೩

೧೭೪. ಆಮೇಲೆ ಸಿದ್ಧರ ರಾಜನಿಂದ ಸತ್ಕಾರವನ್ನು ಪಡೆದ ಜೀಮೂತವಾಹನನು ಮಲಯವತಿಯ ಕೈಯನ್ನು ವಿಧಿವತ್ತಾಗಿ ಹಿಡಿದನು.

೧೭೫. ಆಕಾಶಸಂಚಾರಿಗಳಾದ ಚಾರಣರು ಕುಣಿದಾಡಿದರು. ಸಿದ್ಧರ ಸಮೂಹಗಳೆಲ್ಲ ಬಂದು ಸೇರಿದವು. ಓಡಾಡುತ್ತಿದ್ದ ವಿದ್ಯಾಧರರಿಂದ ವಿಜೃಂಭಿಸುತ್ತಿದ್ದ ಉತ್ಸವವು ಅಲ್ಲಿ ನಡೆಯಿತು.

೧೭೬. ಮದುವೆಯನ್ನು ಮಾಡಿಕೊಂಡ ಜೀಮೂತವಾಹನನು ಮಲಯಪರ್ವತದಲ್ಲಿ ಪತ್ನೀ ಸಮೇತನಾಗಿ ಅಮೂಲ್ಯವಾದ ಐಶ್ವರ್ಯದೊಡನೆ ವಾಸಿಸುತ್ತಿದ್ದನು.

೧೭೭. ಒಮ್ಮೆ ಮಾವನ ಮಗ ಮಿತ್ರಾವಸುವಿನೊಡನೆ ಅವನು ಸಮುದ್ರತೀರದ ವನಗಳನ್ನು ನೋಡಲು ಹೋದನು.

೧೭೮. ಅಲ್ಲಿ ಒಬ್ಬ ಹರೆಯದ ವಯಸ್ಸಿನ ಮನುಷ್ಯನು ಹೆದರಿ ಬರುತ್ತಿದ್ದುದನ್ನೂ 'ಅಯ್ಯೋ ಮಗನೇ' ಎಂದು ಕೂಗಿ ಅಳುತ್ತಿದ್ದ ತಾಯಿಯನ್ನು ಹಿಂದಕ್ಕೆ ಅವನು ಕಳುಹಿಸುತ್ತಿದ್ದುದನ್ನೂ ಕಂಡನು.

೧೭೯. ಭಟನಂತೆ ಅವನ ಹಿಂದೆ ಬರುತ್ತಿದ್ದವನೊಬ್ಬನು ಆ ಮನುಷ್ಯನನ್ನು ದೊಡ್ಡ ಹಾಗೂ ಎತ್ತರವಾದ ಬಂಡೆಯ ಮೇಲಕ್ಕೆ ತಲುಪಿಸಿ ಬಿಟ್ಟು ಬರುತ್ತಿದ್ದುದನ್ನು ಅವನು ನೋಡಿದನು.

---

ತತೋ ಜಗ್ರಾಹ ವಿಧಿವತ್ತಸ್ಯಾಃ ಜೀಮೂತವಾಹನಃ ।
ಪಾಣಿಂ ಮಲಯವತ್ಯಾಃ ಸ ಸಿದ್ಧರಾಜಪುರಸ್ಕೃತಃ ॥ ೧೭೪
ಬಭೂವ ಚೋತ್ಸವಸ್ತತ್ರ ಚಂಚದ್‌ದ್ಯುಚರಚಾರಣಃ ।
ಸಂಮಿಲತ್‌ಸಿದ್ಧಸಂಘಾತೋ ವಲ್ಗದ್‌ವಿದ್ಯಾಧರೋದ್ಧುರಃ ॥ ೧೭೫
ಕೃತೋದ್ವಾಹಸ್ತತಸ್ತಸ್ಥೌ ತಸ್ಮಿನ್ ಜೀಮೂತವಾಹನಃ ।
ಮಲಯಾದ್ರೌ ಮಹಾರ್ಹೇಣ ವಿಭವೇನ ವಧೂಸಖಃ ॥ ೧೭೬
ಏಕದಾ ಚ ಶ್ವಶುರ್ಯೇಣ ಸ ಮಿತ್ರಾವಸುನಾ ಸಹ ।
ವೇಲಾವನಾನಿ ಜಲಧೇರವಲೋಕಯಿತುಂ ಯಯೌ ॥ ೧೭೭
ತತ್ರಾಪಶ್ಯಚ್ಚ ಪುರುಷಂ ಯುವಾನಂ ವಿಗ್ನಮಾಗತಮ್ ।
ನಿವರ್ತಯಂತಂ ಜನನೀಂ ಹಾ ಪುತ್ರೇತಿ ವಿರಾವಿಣೀಮ್ ॥ ೧೭೮
ಅಪರೇಣ ಪರಿತ್ಯಕ್ತಂ ಭಟೇನೇವಾನುಯಾಯಿನಾ ।
ಪುರುಷೇಣ ಪೃಥೂತ್ತುಂಗಂ ಪ್ರಾಪಯ್ಯೈಕಂ ಶಿಲಾತಲಮ್ ॥ ೧೭೯

೧೮೦. ಜೀಮೂತವಾಹನನು (ಅವನ ಬಳಿಗೆ ಹೋಗಿ) "ನೀನು ಯಾರು ? ನಿನಗೆ ಏನು ಬೇಕು ? ಯಾವ ಕಾರಣದಿಂದ ನಿನ್ನ ತಾಯಿ ನಿನಗಾಗಿ ಗೋಳಿಡುತ್ತಿದ್ದಾಳೆ?" ಎಂದು ಕೇಳಿದನು. ಆ ಮನುಷ್ಯನು ಅವನಿಗೆ ತನ್ನ ವೃತ್ತಾಂತವನ್ನು ಹೇಳತೊಡಗಿದನು.

## ಕದ್ರೂ-ವಿನತೆಯರ ಕಥೆ

೧೮೧. ಬಹು ಹಿಂದೆ ಕಶ್ಯಪನಿಗೆ ಕದ್ರೂ, ವಿನತಾ ಎಂಬ ಇಬ್ಬರು ಹೆಂಡತಿಯರಿದ್ದರು. ಪರಸ್ಪರ ಮಾತನಾಡುತ್ತಾ ಅವರು ವಿವಾದ ಮಾಡಿಕೊಂಡರು.

೧೮೨. ಮೊದಲನೆಯವಳು ಸೂರ್ಯನ ಕುದುರೆಗಳು ಕಪ್ಪಾಗಿವೆ ಎಂದೂ ಇನ್ನೊಬ್ಬಳು ಅವು ಬಿಳುಪಾಗಿವೆ ಎಂದೂ ಹೇಳಿದರು. (ಸೋತರೆ) ಗುಲಾಮಗಿರಿ ಮಾಡುವುದಾಗಿ ಪಣ ಕಟ್ಟಿಕೊಂಡರು.

೧೮೩. ತಾನು ಗೆಲ್ಲಬೇಕೆಂಬ ಆಸೆಯಿಂದ ಕದ್ರೂ ತನ್ನ ಮಕ್ಕಳಾದ ಸರ್ಪಗಳಿಂದ ವಿಷಮಯವಾದ ಫೂತ್ಕಾರಗಳನ್ನು ಮಾಡಿಸಿ ಸೂರ್ಯನ ಕುದುರೆಗಳನ್ನು ಕಪ್ಪಾಗಿ ಕಾಣಿಸುವಂತೆ ಮಾಡಿಸಿದಳು.

೧೮೪. ಹಾಗಿದ್ದಂತಹ ಕುದುರೆಗಳನ್ನು ತೋರಿಸಿ ಮೋಸದಿಂದ ಸೋಲಿಸಲ್ಪಟ್ಟ ವಿನತೆಯನ್ನು ಕದ್ರೂ ತನ್ನ ದಾಸಿಯನ್ನಾಗಿ ಮಾಡಿಕೊಂಡಳು. ಸ್ತ್ರೀಯರು ಬೇರೆಯವರಲ್ಲಿ ತೋರಿಸುವ ಅಸಹನೆಯು ಕಷ್ಟವನ್ನು ತರುತ್ತದೆಯಲ್ಲವೆ ?

---

ಕಸ್ತ್ವಂ ಕಿಮೀಹಸೇ ಕಿಂ ಚ ಮಾತಾ ತ್ವಾಂ ಶೋಚತೀತಿ ತಮ್ ।
ಸ ಪಪ್ರಚ್ಛ ತತಃ ಸೋಽಪಿ ತಸ್ಮೈ ವೃತ್ತಾಂತಮಬ್ರವೀತ್ ॥ ೧೮೦
ಪುರಾ ಕಶ್ಯಪಭಾರ್ಯೇ ದ್ವೇ ಕದ್ರೂಶ್ಚ ವಿನತಾ ತಥಾ ।
ಮಿಥಃ ಕಥಾಪ್ರಸಂಗೇನ ವಿವಾದಂ ಕಿಲ ಚಕ್ರತುಃ ॥ ೧೮೧
ಆದ್ಯಾ ಶ್ಯಾಮಾನ್ ರವೇರಶ್ವಾನ್ ಅವಾದೀದಪರಾ ಸಿತಾನ್ ।
ಅನ್ಯೋನ್ಯದಾಸಭಾವಂ ಚ ಪಣಮತ್ರ ಬಬಂಧತುಃ ॥ ೧೮೨
ತತೋ ಜಯಾರ್ಥಿನೀ ಕದ್ರೂಃ ಸ್ವೈರಂ ನಾಗೈರ್ನಿಜಾತ್ಮಜೈಃ ।
ವಿಷಫೂತ್ಕಾರಮಲಿನಾನ್ ಅರ್ಕಸ್ಯಾಶ್ವಾನಕಾರಯತ್ ॥ ೧೮೩
ತಾದೃಶಾಂಶ್ಚೋಪದರ್ಶ್ಯೈತಾನ್ ವಿನತಾಂ ಛದ್ಮನಾ ಜಿತಾಮ್ ।
ದಾಸೀಚಕಾರ ಕಷ್ಟಾ ಹಿ ಸ್ತ್ರೀಣಾಮನ್ಯಾಸಹಿಷ್ಣುತಾ ॥ ೧೮೪

೧೮೫. ಆ ವಿಷಯವನ್ನು ತಿಳಿದು ವಿನತೆಯ ಮಗ ಗರುಡನು ಬಂದು ಮೃದುವಾದ ಮಾತುಗಳಿಂದ ದಾಸ್ಯದಿಂದ ತನ್ನ ತಾಯಿಯ ಬಿಡುಗಡೆ ಆಗಬೇಕೆಂದು ಕದ್ರೂಳನ್ನು ಬೇಡಿಕೊಂಡನು.

೧೮೬–೧೮೭. ಆಗ ಕದ್ರೂಪುತ್ರರಾದ ಸರ್ಪಗಳು ಆಲೋಚಿಸಿ ಗರುಡನಿಗೆ ಹೀಗೆ ಹೇಳಿದವು. ""ಅಯ್ಯಾ ವೈನತೇಯ, ದೇವತೆಗಳು ಪಾಲ್ಗಡಲನ್ನು ಕಡೆಯಲಾರಂಭಿಸಿದ್ದಾರೆ. ಅಲ್ಲಿಂದ ಅಮೃತವನ್ನು ತಂದು ನಮಗೆ ಪ್ರತಿಯೊಬ್ಬರಿಗೂ ಕೊಡು. ಆಮೇಲೆ ನಿನ್ನ ತಾಯಿಯನ್ನು ಕರೆದುಕೊಂಡು ಹೋಗು. ನೀನು ಶಕ್ತಿಶಾಲಿಗಳಲ್ಲಿ ಶ್ರೇಷ್ಠನು ತಾನೆ".

೧೮೮. ನಾಗಗಳು ಹೇಳಿದ ಈ ಮಾತನ್ನು ಕೇಳಿ ಪಾಲ್ಗಡಲಿಗೆ ಹೋಗಿ ಅಮೃತಕ್ಕೋಸ್ಕರ ಗರುಡನು ತನ್ನ ಅಪಾರ ಶಕ್ತಿಯನ್ನು ತೋರಿಸಿದನು.

೧೮೯. ಗರುಡನ ಪರಾಕ್ರಮದಿಂದ ಸಂತುಷ್ಟನಾದ ಭಗವಾನ್ ಹರಿಯು ತಾನೇ ಅವನಿಗೆ ""ನಿನ್ನ ವಿಷಯದಲ್ಲಿ ಪ್ರಸನ್ನನಾಗಿದ್ದೇನೆ. ಯಾವುದಾದರೂ ವರವನ್ನು ಕೇಳಿಕೋ" ಎಂದು ಹೇಳಿದನು.

೧೯೦. ತಾಯಿಯ ಗುಲಾಮಗಿರಿಯಿಂದ ಸಿಟ್ಟಾಗಿದ್ದ ಗರುಡನು ""ನಾಗರು ನನಗೆ ಭಕ್ಷ್ಯರಾಗಲಿ" ಎಂಬ ವರವನ್ನು ಹರಿಯಲ್ಲಿ ಕೇಳಿಕೊಂಡನು.

---

ತದ್‌ಬುದ್ಧ್ವಾಗತ್ಯ ವಿನತಾತನಯೋ ಗರುಡಸ್ತದಾ ।
ಸಾಂತ್ವೇನ ಮಾತುರ್ದಾಸತ್ವಮುಕ್ತಿಂ ಕದ್ರೂಮಯಾಚತ ॥ ೧೮೫
ತತಃ ಕದ್ರೂಸುತಾ ನಾಗಾ ವಿಚಿಂತ್ಯೈವಂ ತಮಬ್ರುವನ್ ।
ಭೋ ವೈನತೇಯ ಕ್ಷೀರಾಬ್ಧಿಃ ಪ್ರಾರಬ್ಧೋ ಮಥಿತುಂ ಸುರೈಃ ॥ ೧೮೬
ತತಃ ಸುಧಾಂ ಸಮಾಹೃತ್ಯ ಪ್ರತಿವಸ್ತು ಪ್ರಯಚ್ಛ ನಃ ।
ಮಾತರಂ ಸ್ವೀಕುರುಷ್ವಾಥ ಭವಾನ್ ಹಿ ಬಲಿನಾಂ ವರಃ ॥ ೧೮೭
ಏತನ್ನಾಗವಚಃ ಶ್ರುತ್ವಾ ಗತ್ವಾ ಚ ಕ್ಷೀರವಾರಿಧಿಮ್ ।
ಸುಧಾರ್ಥಂ ದರ್ಶಯಾಮಾಸ ಗರುಡೋ ಗುರು ಪೌರುಷಮ್ ॥ ೧೮೮
ತತಃ ಪರಾಕ್ರಮಪ್ರೀತೋ ದೇವಸ್ತತ್ರ ಸ್ವಯಂ ಹರಿಃ ।
ತುಷ್ಟೋಽಸ್ಮಿ ತೇ ವರಂ ಕಂಚಿದ್ ವೃಣೀಷ್ವೇತ್ಯಾದಿದೇಶ ತಮ್ ॥ ೧೮೯
ನಾಗಾ ಭವಂತು ಮೇ ಭಕ್ಷ್ಯಾ ಇತಿ ಸೋಽಪಿ ಹರೇಸ್ತತಃ ।
ವೈನತೇಯೋ ವರಂ ವವ್ರೇ ಮಾತುರ್ದಾಸ್ಯೇನ ಕೋಪಿತಃ ॥ ೧೯೦

೧೯೧. 'ಹಾಗೇ ಆಗಲಿ' ಎಂದು ಹರಿಯು ಅಪ್ಪಣೆ ಕೊಟ್ಟನು. ಗರುಡನು ತನ್ನ ಬಲದಿಂದ ಅಮೃತವನ್ನು ಗಳಿಸಿದನು. ವಿಷಯವನ್ನು ತಿಳಿದುಕೊಂಡ ಇಂದ್ರನು ಅವನಿಗೆ ಹೀಗೆ ಹೇಳಿದನು.

೧೯೨. ""ಪಕ್ಷಿರಾಜ, ಮೂಢರಾದ ನಾಗರು ಅಮೃತವನ್ನು ತಿನ್ನದಿರುವಂತೆ, ಅವರಿಂದ ಅದನ್ನು ನಾನು ಮತ್ತೆ ಪಡೆದುಕೊಳ್ಳುವಂತೆ ನೀನು ಮಾಡಬೇಕು."

೧೯೩. ಅದನ್ನು ಕೇಳಿ ವಿಷ್ಣುಭಕ್ತರಲ್ಲಿ ಶ್ರೇಷ್ಠನಾದ ಗರುಡನು ಅಮೃತಕಲಶವನ್ನು ತೆಗೆದುಕೊಂಡು ನಾಗರ ಬಳಿಗೆ ಬಂದನು.

೧೯೪. ಅವನಿಗಿದ್ದ ವರದ ಮಹಿಮೆಯಿಂದ ಹೆದರಿ ಮೂಢರಾದ ಅವರ ಸಮೀಪಕ್ಕೆ ಹೋಗಿ ಅವನು ಹೀಗೆಂದನು. "ಅಮೃತವನ್ನಿಲ್ಲಿ ತಂದಿರುವೆನು. ನನ್ನ ತಾಯಿಯನ್ನು ಬಿಟ್ಟುಕೊಟ್ಟು ಅದನ್ನು ನೀವು ತೆಗೆದುಕೊಳ್ಳಿ.

೧೯೫. ನಿಮಗೆ ಭಯವಾದರೆ ದರ್ಭೆಗಳ ಹಾಸಿನ ಮೇಲೆ ಇದನ್ನು ಇಡುತ್ತೇನೆ. ನಮ್ಮ ಅಮ್ಮನನ್ನು ಬಿಡಿಸಿಕೊಂಡು ನಾನು ಹೋಗುತ್ತೇನೆ. ಆಮೇಲೆ ನೀವು ಅಮೃತವನ್ನು ತೆಗೆದುಕೊಳ್ಳಿ'.

೧೯೬. ಹಾಗೇ ಆಗಬಹುದು ಎಂದು ಆ ನಾಗರು ಹೇಳಿದಾಗ ಗರುಡನು ಅಮೃತಕಲಶವನ್ನು ಪವಿತ್ರವಾದ ದರ್ಭೆಯ ಹಾಸಿನಲ್ಲಿ ಇಟ್ಟನು. ಅವರು ಅವನ ತಾಯಿಯ ಬಿಡುಗಡೆ ಮಾಡಿದರು.

---

ತಥೇತಿ ಹರಿಣಾದಿಷ್ಟೋ ನಿಜವೀರ್ಯಾರ್ಜಿತಾಮೃತಃ ।
ಸ ಚೈವಮದ್ಯ ಶಕ್ರೇಣ ಗದಿತೋ ಜ್ಞಾತವಸ್ತುನಾ ॥ ೧೯೧
ತಥಾ ಪಕ್ಷೀಂದ್ರ ಕಾರ್ಯಂ ತೇ ಯಥಾ ಮೂಢೈರ್ನ ಭುಜ್ಯತೇ ।
ನಾಗೈಃ ಸುಧಾ ಯಥಾ ಚೈನಾಂ ತೇಭ್ಯಃ ಪ್ರತ್ಯಾಹರಾಮ್ಯಹಮ್ ॥ ೧೯೨
ಏತಚ್ಛ್ರುತ್ವಾ ತಥೇತ್ಯುಕ್ತ್ವಾ ಸ ವೈಷ್ಣವವರೋದ್ಧುರಃ ।
ಸುಧಾಕಲಶಮಾದಾಯ ತಾರ್ಕ್ಷ್ಯೋ ನಾಗಾನುಪಾಯಯೌ ॥ ೧೯೩
ವರಪ್ರಭಾವಭೀತಾಂಶ್ಚ ಮುಗ್ಧಾನಾರಾಜ್ಜಗಾದ ತಾನ್ ।
ಇದಮಾನೀತಮಮೃತಂ ಮುಕ್ತ್ವಾಂಬಾಂ ಮಮ ಗೃಹ್ಯತಾಮ್ ॥ ೧೯೪
ಭಯಂ ಚೇತ್ ಸ್ಥಾಪಯಾಮ್ಯೇತದಹಂ ವೋ ದರ್ಭಸಂಸ್ತರೇ ।
ಉನ್ಮೋಚ್ಯಾಂಬಾಂ ಚ ಗಚ್ಛಾಮಿ ಸ್ವೀಕುರುಧ್ವಮಿತಃ ಸುಧಾಮ್ ॥ ೧೯೫
ತಥೇತ್ಯುಕ್ತೇ ಚ ತೈರ್ನಾಗೈಃ ಸ ಪವಿತ್ರೇ ಕುಶಾಸ್ತರೇ ।
ಸುಧಾಕಲಶಮಾಧತ್ತ ತೇ ಚಾಸ್ಯ ಜನನೀಂ ಜಹುಃ ॥ ೧೯೬

೧೯೭–೧೯೮. ಹೀಗೆ ತಾಯಿಯನ್ನು ದಾಸ್ಯದಿಂದ ಬಿಡಿಸಿ ಗರುಡನು ಹೊರಟು ಹೋದನು. ನಾಗರು ಯಾವ ಭಯವೂ ಇಲ್ಲದೆ ಅಮೃತವನ್ನು ತೆಗೆದುಕೊಳ್ಳುವಷ್ಟರಲ್ಲಿ ಇಂದ್ರನು ಹಠಾತ್ತನೆ ಅಲ್ಲಿಗೆ ಬಂದು ತನ್ನ ಶಕ್ತಿಯಿಂದ ಅವರನ್ನು ಮರುಳು ಮಾಡಿ ದರ್ಭೆಯ ಹಾಸಿನಿಂದ ಅಮೃತಕಲಶವನ್ನು ಹಾರಿಸಿಕೊಂಡು ಹೋದನು.

೧೯೯. ನಿರಾಶರಾದ ನಾಗರು ಅಕಸ್ಮಾತ್ ಅಮೃತವು ಸೋರಿ ದರ್ಭೆಗೆ ಸ್ವಲ್ಪ ಅಂಟಿಕೊಂಡಿರಬಹುದು ಎಂದು ಚಿಂತಿಸಿ ದರ್ಭೆಯ ಹಾಸನ್ನು ನೆಕ್ಕಿದರು.

೨೦೦. ಅದರಿಂದ ಅವರ ನಾಲಗೆಗಳು ವೃಥಾ ಸೀಳಿಹೋದವು. ಅದರಿಂದ ಹಾವುಗಳಿಗೆ ಎರಡು ನಾಲಿಗೆ ಆಯಿತು. ಅತಿಯಾಗಿ ಆಸೆ ಪಡುವವರಿಗೆ ನಗೆಪಾಟಲಾಗುವುದನ್ನು ಬಿಟ್ಟರೆ ಬೇರೆ ಏನು ಫಲ ಸಿಕ್ಕೀತು ?

೨೦೧. ಅಮೃತದ ಸವಿಯನ್ನು ಪಡೆಯದ ನಾಗರನ್ನು ಅವರ ವೈರಿ ಗರುಡನು ಹರಿಯ ವರದ ಬಲದಿಂದ ಮತ್ತೆ ಮತ್ತೆ ಬಂದು ದಾಳಿ ಮಾಡಿ ತಿನ್ನಲಾರಂಭಿಸಿದನು.

೨೦೨. ಅವನು ದಾಳಿ ಮಾಡಲು ಎರಗಿದಾಗ ಪಾತಾಳದಲ್ಲಿದ್ದ ಹಾವುಗಳು ಹೆದರಿಕೆಯಿಂದ ಜೀವವನ್ನು ಕಳೆದುಕೊಳ್ಳುತ್ತಿದ್ದುವು. ನಾಗಸ್ತ್ರೀಯರ ಬಸಿರು ಕಳಚಿ ಹೋಗುತ್ತಿತ್ತು. ಹೀಗೆ ಪಾತಾಳದ ಸರ್ಪಗಳೆಲ್ಲ ನಾಶ ಹೊಂದುತ್ತಿದ್ದವು.

---

ದಾಸ್ಯಮುಕ್ತಾಂ ಚ ಕೃತ್ವೈವಂ ಮಾತರಂ ಗರುಡೇ ಗತೇ ।
ಯಾವದಾದದತೇ ನಾಗಾ ನಿಃಶಂಕಾಸ್ತತ್ ಕಿಲಾಮೃತಮ್ ॥ ೧೯೭
ತಾವನ್ನಿಪತ್ಯ ಸಹಸಾ ತಾನ್ ವಿಮೋಹ್ಯ ಸ್ವಶಕ್ತಿತಃ ।
ತಂ ಸುಧಾಕಲಶಂ ಶಕ್ರೋ ಜಹಾರ ಕುಶಸಂಸ್ತರಾತ್ ॥ ೧೯೮
ವಿಷಣ್ಣಾಸ್ತೇಽಥ ನಾಗಾಸ್ತಂ ಲಿಲಿಹುರ್ದರ್ಭಸಂಸ್ತರಮ್ ।
ಕದಾಚಿದಮೃತಶ್ಚೋತಲೇಪೋಽಪ್ಯಸ್ಮಿನ್ ಭವೇದಿತಿ ॥ ೧೯೯
ತೇನ ಪಾಟಿತಜಿಹ್ವಾಸ್ತೇ ವೃಥಾ ಪ್ರಾಪುರ್ದ್ವಿಜಿಹ್ವತಾಮ್ ।
ಹಾಸ್ಯಾದೃತೇ ಕಿಮನ್ಯತ್ ಸ್ಯಾದತಿಲೌಲ್ಯವತಾಂ ಫಲಮ್ ॥ ೨೦೦
ಅಥಾಲಬ್ಧಾಮೃತರಸಾನ್ ನಾಗಾನ್ ವೈರೀ ಹರೇರ್ವರಾತ್ ।
ತಾರ್ಕ್ಷ್ಯಃ ಪ್ರವವೃತೇ ಭೋಕ್ತುಂ ತಾನ್ನಿಪತ್ಯ ಪುನಃ ಪುನಃ ॥ ೨೦೧
ತದಾಪಾತೇ ಚ ಪಾತಾಲಂ ತ್ರಾಸನಿರ್ಜೀವರಾಜಿಲಮ್ ।
ಪ್ರಭ್ರಷ್ಟಗರ್ಭಿಣೀಗರ್ಭಮಭೂತ್ ಕ್ಷಪಿತಪನ್ನಗಮ್ ॥ ೨೦೨

೨೦೩. ಪ್ರತಿದಿನವೂ ಗರುಡನು ಪಾತಾಳಕ್ಕೆ ಬರುವುದನ್ನು ನೋಡಿ ಸರ್ಪಗಳ ರಾಜ ವಾಸುಕಿಯು ನಾಗಲೋಕವು ಪೂರ್ಣವಾಗಿ ನಾಶ ಹೊಂದೀತು ಎಂದು ಅಂದುಕೊಂಡನು.

೨೦೪. ಗರುಡನ ಶಕ್ತಿಯನ್ನು ತಡೆಯಲು ಸಾಧ್ಯವಿಲ್ಲ ಎಂದು ಆಲೋಚಿಸಿ ವಾಸುಕಿಯು ಪ್ರಾರ್ಥನಾಪೂರ್ವಕವಾಗಿ ಒಂದು ಒಪ್ಪಂದವನ್ನು ಮಾಡಿಕೊಂಡನು.

೨೦೫. "ಪಕ್ಷಿರಾಜ, ನಿನ್ನ ಆಹಾರಕ್ಕಾಗಿ ಪ್ರತಿದಿನವೂ ಒಬ್ಬೊಬ್ಬ ನಾಗನನ್ನು ಕಡಲಿನ ಮರಳಿನ ಗುಡ್ಡದ ಮೇಲಕ್ಕೆ ನಾನು ಕಳುಹಿಸುತ್ತೇನೆ.

೨೦೬. ನಾಗರನ್ನು ನಾಶಮಾಡಲು ನೀನು ಪಾತಾಳದೊಳಕ್ಕೆ ಬರಕೂಡದು. ನಾಗಲೋಕವು ನಾಶವನ್ನು ಹೊಂದಿದರೆ ನಿನ್ನ ಸ್ವಾರ್ಥವೂ ಹಾಳಾಗುವುದಲ್ಲವೆ?"

೨೦೭. ಹೀಗೆ ವಾಸುಕಿಯು ಹೇಳಿದಾಗ ಹಾಗೇ ಆಗಲಿ ಎಂದ ಗರುಡನು ಪ್ರತಿದಿನವೂ ಅವನು ಕಳುಹಿಸಿದ ಒಬ್ಬೊಬ್ಬ ನಾಗನನ್ನು ತಿನ್ನಲು ಪ್ರಾರಂಭಿಸಿದನು.

೨೦೮. ಆ ವಿಧಾನದಿಂದ ಇಲ್ಲಿ ಲೆಕ್ಕವಿಲ್ಲದಷ್ಟು ಸರ್ಪಗಳು ಕೊನೆಯನ್ನು ಕಂಡವು. ನಾನು ಶಂಖಚೂಡನೆಂಬ ನಾಗನು. ಇಂದು ನನ್ನ ಸರದಿ.

---

ತಂ ದೃಷ್ಟ್ವಾ ಚಾನ್ವಹಂ ತತ್ರ ವಾಸುಕಿರ್ಭುಜಗೇಶ್ವರಃ ।
ಕೃತ್ಸ್ನಮೇಕಪದೇ ನಷ್ಟಂ ನಾಗಲೋಕಮಮನ್ಯತ ॥ ೨೦೩

ತತೋ ದುರ್ವಾರವೀರ್ಯಸ್ಯ ಸದ್ಯಸ್ತಸ್ಯ ವಿಚಿಂತ್ಯ ಸಃ ।
ಸಮಯಂ ಪ್ರಾರ್ಥನಾಪೂರ್ವಂ ಚಕಾರೈವಂ ಗರುತ್ಮತಃ ॥ ೨೦೪

ಏಕಮೇಕಂ ಪ್ರತಿದಿನಂ ನಾಗಂ ತೇ ಪ್ರೇಷಯಾಮ್ಯಹಮ್ ।
ಆಹಾರಹೇತೋಃ ಪಕ್ಷೀಂದ್ರ ಪಯೋಧಿಪುಲಿನಾಚಲೇ ॥ ೨೦೫

ಪಾತಾಲೇ ತು ಪ್ರವೇಷ್ಟವ್ಯಂ ನ ತ್ವಯಾ ಮರ್ದಕಾರಿಣಾ ।
ನಾಗಲೋಕಕ್ಷಯಾತ್ ಸ್ವಾರ್ಥಸ್ತವೈವ ಹಿ ವಿನಶ್ಯತಿ ॥ ೨೦೬

ಇತಿ ವಾಸುಕಿನಾ ಪ್ರೋಕ್ತಸ್ತಥೇತಿ ಗರುಡೋಽನ್ವಹಮ್ ।
ತತ್ಪ್ರೇಷಿತಮಿಹೈಕೈಕಂ ನಾಗಂ ಭೋಕ್ತುಂ ಪ್ರಚಕ್ರಮೇ ॥ ೨೦೭

ತೇನ ಕ್ರಮೇಣ ಚಾಸಂಖ್ಯಾಃ ಫಣಿನೋಽತ್ರ ಕ್ಷಯಂ ಗತಾಃ ।
ಅಹಂ ಚ ಶಂಖಚೂಡಾಖ್ಯೋ ನಾಗೋ ವಾರೋ ಮಮಾದ್ಯ ಚ ॥
೨೦೮

೨೮೯. ಆದ್ದರಿಂದ ಸರ್ಪಗಳ ರಾಜನ ಆದೇಶಕ್ಕೆ ಅನುಸಾರವಾಗಿ ಗರುಡನಿಗೆ ಆಹಾರವಾಗಲು ಈ ವಧ್ಯಶಿಲೆಗೆ ಬಂದಿದ್ದೇನೆ. ಇದರಿಂದ ತಾಯಿಯ ಶೋಕಕ್ಕೆ ಕಾರಣನಾಗಿದ್ದೇನೆ

೨೯೦. ಆ ಶಂಖಚೂಡನ ಮಾತನ್ನು ಕೇಳಿ ಜೀಮೂತವಾಹನನು ಒಳಗೇ ಕೊರಗಿ ಅವನಿಗಿಂತೆಂದನು.

೨೯೧. ""ಅಯ್ಯೋ, ವಾಸುಕಿಯ ದೊರೆತನ ಎಷ್ಟು ಬಲಹೀನವಾಗಿದೆ ! ಅವನು ತನ್ನ ಕೈಯಿಂದಲೇ ಪ್ರಜೆಗಳನ್ನು ಶತ್ರುವಿಗೆ ಬಲಿಯಾಗಿ ಕಳುಹಿಸುತ್ತಾನಲ್ಲ !

೨೯೨. ಅವನು ಮೊದಲು ತನ್ನನ್ನೇ ಏಕೆ ಗರುಡನಿಗೆ ಕೊಟ್ಟು ಕೊಳ್ಳಲಿಲ್ಲ. ನಪುಂಸಕನಂತೆ ಅವನೇಕೆ ತನ್ನ ವಂಶದ ನಾಶಕ್ಕೆ ಸಾಕ್ಷಿಯಾಗಲು ಅಪೇಕ್ಷಿಸಿದ್ದಾನೆ?

೨೯೩. ಕಶ್ಯಪನಿಂದ ಹುಟ್ಟಿದ ಗರುಡನೂ ಎಷ್ಟೊಂದು ಪಾಪವನ್ನು ಮಾಡುತ್ತಿದ್ದಾನೆ? ಕೇವಲ ದೇಹಕ್ಕಾಗಿ ದೊಡ್ಡವರಿಗೂ ಎಂಥ ಮೋಹ ?

೨೯೪. ಆದ್ದರಿಂದ ನಾನು ನನ್ನ ಶರೀರವನ್ನು ದಾನಮಾಡಿ ಇಂದು ನಿನ್ನೊಬ್ಬನನ್ನು ಗರುಡನಿಂದ ಕಾಪಾಡುತ್ತೇನೆ. ಮಿತ್ರನೆ, ಕೊರಗಬೇಡ."

೨೯೫. ಆ ಮಾತನ್ನು ಕೇಳಿ ಶಂಖಚೂಡನೂ ಧೈರ್ಯದಿಂದ ಅವನಿಗೆ ಹೀಗೆ ಹೇಳಿದನು. ""ಮಹಾನುಭಾವ, ಶಾಂತವಾಗಲಿ ಈ ಮಾತು. ಮತ್ತೆ ಹೀಗೆ ನುಡಿಯಬೇಡ.

---

ಅತೋಽಹಂ ಗರುಡಾಹಾರಹೇತೋರ್ವಧ್ಯಶಿಲಾಮಿಮಾಮ್ ।
ಮಾತುಶ್ಚ ಶೋಚ್ಯತಾಂ ಪ್ರಾಪ್ತೋ ನಾಗರಾಜನಿದೇಶತಃ ॥ ೨೮೯
ಇತಿ ತಸ್ಯ ವಚಃ ಶ್ರುತ್ವಾ ಶಂಖಚೂಡಸ್ಯ ದುಃಖಿತಃ ।
ಸಾಂತಃಖೇದಃ ಸ ಜೀಮೂತವಾಹನಸ್ತಮಭಾಷತ ॥ ೨೯೦
ಅಹೋ ಕಿಮಪಿ ನಿಃಸತ್ತ್ವಂ ರಾಜತ್ವಂ ಬತ ವಾಸುಕೇಃ ।
ಯತ್ ಸ್ವಹಸ್ತೇನ ನೀಯಂತೇ ರಿಪೋರಾಮಿಷತಾಂ ಪ್ರಜಾಃ ॥ ೨೯೧
ಕಿಂ ನ ಪ್ರಥಮಮಾತ್ಮೈವ ತೇನ ದತ್ತೋ ಗರುತ್ಮತೇ ।
ಕ್ಲೀಬೇನಾಭ್ಯರ್ಥಿತಾ ಕೇಯಂ ಸ್ವಕುಲಕ್ಷಯಸಾಕ್ಷಿತಾ ॥ ೨೯೨
ಉತ್ಪದ್ಯ ಕಶ್ಯಪಾತ್ ಪಾಪಂ ತಾರ್ಕ್ಷ್ಯೋಽಪಿ ಕುರುತೇ ಕಿಯತ್ ।
ದೇಹಮಾತ್ರಕೃತೇ ಮೋಹಃ ಕೀದೃಶೋ ಮಹತಾಮಪಿ ॥ ೨೯೩
ತದಹಂ ತಾವದದ್ಯೈಕಂ ರಕ್ಷಾಮಿ ತ್ವಾಂ ಗರುತ್ಮತಃ ।
ಸ್ವಶರೀರಪ್ರದಾನೇನ ಮಾ ವಿಷಾದಂ ಕೃಥಾಃ ಸಖೇ ॥ ೨೯೪
ತಚ್ಛ್ರುತ್ವಾ ಶಂಖಚೂಡೋಽಪಿ ಧೈರ್ಯಾದೇತದುವಾಚ ತಮ್ ।
ಶಾಂತಮೇತನ್ಮಹಾಸತ್ತ್ವ ಮಾಸ್ಮೈವಂ ಭಾಷಥಾಃ ಪುನಃ ॥ ೨೯೫

೨೧೬. ಗಾಜಿನ ಚೂರಿಗಾಗಿ ಎಂದೂ ಮುತ್ತಿನ ಮಣಿಯನ್ನು ಹಾಳು ಮಾಡಬಾರದು. ವಂಶಕ್ಕೆ ಕಳಂಕವನ್ನು ತರುವಂಥ ಮಾತಿಗೆ ನಾನೂ ಈಡಾಗಲಾರೆನು."

೨೧೭–೨೧೮. ಹೀಗೆ ಹೇಳಿದ ಸಜ್ಜನ ಶಂಖಚೂಡನು ಜೀಮೂತವಾಹನನನ್ನು ತಡೆದನು. ಗರುಡನು ಬರುವ ವೇಳೆಗೆ ಇನ್ನೂ ಒಂದು ಕ್ಷಣ ಇದೆಯೆಂದುಕೊಂಡು ಶಂಖಚೂಡನು ಕಡಲಿನ ತಡಿಯಲ್ಲೇ ಇದ್ದ ಗೋಕರ್ಣೇಶ್ವರನಿಗೆ ಅಂತಕಾಲದಲ್ಲಿ ನಮಸ್ಕಾರವನ್ನು ಮಾಡಲು ಅಲ್ಲಿಗೆ ಹೋದನು.

೨೧೯. ಅವನು ಹೋಗಲು ಕಾರುಣ್ಯನಿಧಿ ಜೀಮೂತವಾಹನನು ತನ್ನನ್ನು ಅರ್ಪಿಸಿ ಶಂಖಚೂಡನನ್ನು ಕಾಪಾಡಲು ಅವಕಾಶವು ಸಿಕ್ಕಿತು ಎಂದುಕೊಂಡನು.

೨೨೦. ಆಮೇಲೆ ಬೇಗನೆ ತನ್ನ ಯುಕ್ತಿಗಳಿಂದ ಬೇರೆ ಕಾರ್ಯದ ನೆವದಿಂದ ಮಿತ್ರಾವಸು ಆ ವಿಷಯವನ್ನು ಮರೆಯುವಂತೆ ಮಾಡಿ ಅವನನ್ನು ತನ್ನ ಮನೆಗೆ ಕಳುಹಿಸಿಬಿಟ್ಟನು.

೨೨೧. ಆ ಕ್ಷಣದಲ್ಲೇ ಹತ್ತಿರಕ್ಕೆ ಬರುತ್ತಿದ್ದ ಗರುಡನ ರೆಕ್ಕೆಗಳ ಗಾಳಿಯ ಹೊಡೆತದಿಂದ ಭೂಮಿಯು ಗರುಡನ ಶಕ್ತಿಯ ದರ್ಶನದಿಂದುಂಟಾದ ಅಚ್ಚರಿಯಿಂದಲೋ ಎಂಬಂತೆ ನಡುಗಿತು.

---

ನ ಕಾಚಸ್ಯ ಕೃತೇ ಜಾತು ಯುಕ್ತಾ ಮುಕ್ತಾಮಣೇಃ ಕ್ಷತಿಃ ।
ನ ಚಾಪ್ಯಹಂ ಗಮಿಷ್ಯಾಮಿ ಕಥಾಂ ಕುಲಕಲಂಕಿತಾಮ್ ॥ ೨೧೬
ಇತ್ಯುಕ್ತ್ವಾ ತಂ ನಿಷಿಧ್ಯೈವ ಸಾಧುರ್ಜೀಮೂತವಾಹನಮ್ ।
ಮತ್ವಾ ಗರುಡವೇಲಾಂ ಚ ಸ ಕ್ಷಣಾಂತರಗಾಮಿನೀಮ್ ॥ ೨೧೭
ಶಂಖಚೂಡೋ ಯಯೌ ತತ್ರ ವಾರಿಧೇಸ್ತೀರವರ್ತಿನಮ್ ।
ಅಂತಕಾಲೇ ನಮಸ್ಕರ್ತುಂ ಗೋಕರ್ಣಾಖ್ಯಮುಮಾಪತಿಮ್ ॥ ೨೧೮
ಗತೇ ತಸ್ಮಿನ್ ಸ ಕಾರುಣ್ಯನಿಧಿರ್ಜೀಮೂತವಾಹನಃ ।
ತತ್ತ್ರಾಣಾಯಾತ್ಮದಾನೇನ ಬುಬುಧೇ ಲಬ್ಧಮಂತರಮ್ ॥ ೨೧೯
ತತಸ್ತದ್ವಿಸ್ಮೃತಮಿವ ಕ್ಷಿಪ್ರಂ ಕೃತ್ವಾ ಸ್ವಯುಕ್ತಿತಃ ।
ಕಾರ್ಯಾಪದೇಶಾದ್ ವ್ಯಸೃಜನ್ನಿಜಂ ಮಿತ್ರಾವಸುಂ ಗೃಹಮ್ ॥ ೨೨೦
ತತ್ಕ್ಷಣಂ ಚ ಸಮಾಸನ್ನತಾರ್ಕ್ಷ್ಯಪಕ್ಷಾನಿಲಾಹತಾ ।
ತತ್ಸತ್ತ್ವದರ್ಶನಾಶ್ಚರ್ಯಾದಿವ ಸಾ ಭೂರಘೂರ್ಣತ ॥ ೨೨೧

೨೨೨. ಅದರಿಂದ ಸರ್ಪಗಳ ಶತ್ರು ಗರುಡನು ಬರುತ್ತಿದ್ದಾನೆಂದು ತಿಳಿದುಕೊಂಡ ಜೀಮೂತವಾಹನನು ಇತರರಲ್ಲಿ ಅನುಕಂಪದಿಂದ ತಾನೇ ಆ ವಧ್ಯಶಿಲೆಯನ್ನು ಏರಿದನು.

೨೨೩. ಮರುಕ್ಷಣದಲ್ಲೇ ತನ್ನ ನೆರಳಿನಿಂದ ಬಾನನ್ನೆಲ್ಲ ಮುಚ್ಚಿದ ಗರುಡನು ರಿವ್ವನೆ ಎರಗಿ ಆ ಮಹಾನುಭಾವನನ್ನು ಕೊಕ್ಕಿನಿಂದ ಕುಕ್ಕಿ ಎತ್ತಿ ಒಯ್ದನು.

೨೨೪. (ಜೀಮೂತವಾಹನನ ಮೈಯಿಂದ) ನೆತ್ತರಿನ ಧಾರೆಗಳು ಹರಿಯುತ್ತಿದ್ದವು. ಅವನ ತಲೆಯ ಮಣಿಯು ಜಾರಿ ಕೆಳಗೆ ಉರುಳಿತ್ತು. ಅವನನ್ನು ಹೊತ್ತು ಒಯ್ದು ಬೆಟ್ಟದ ಶಿಖರದ ಮೇಲೆ ತಿನ್ನಲು ಗರುಡನು ಆರಂಭಿಸಿದನು.

೨೨೫. ಆ ಕಾಲದಲ್ಲಿ ಬಾನಿನಿಂದ ಹೂಮಳೆ ಸುರಿಯಿತು. ಅದನ್ನು ನೋಡಿ 'ಇದೇನಾಗಿರಬಹುದು' ಎಂದು ಗರುಡನು ಆಶ್ಚರ್ಯಪಟ್ಟನು.

೨೨೬. ಅಷ್ಟು ಹೊತ್ತಿಗೆ ಗೋಕರ್ಣನಾಥನನ್ನು ನಮಸ್ಕರಿಸಿ ಬಂದ ಶಂಖಚೂಡನು ಕೊಲೆಗಲ್ಲಿನ ತಳವು ನೆತ್ತರಿನ ಧಾರೆಗಳಿಂದ ನೆನೆದಿದ್ದುದನ್ನು ನೋಡಿದನು.

೨೨೭. 'ಹಾ ಧಿಕ್. ನನಗೋಸ್ಕರ ನಿಶ್ಚಿತವಾಗಿ ಆ ಮಹಾತ್ಮನು ತನ್ನನ್ನೇ ಅರ್ಪಿಸಿಕೊಂಡಿದ್ದಾನೆ ಈ ಕ್ಷಣದಲ್ಲಿ ಗರುಡನು ಅವನನ್ನು ಎಲ್ಲಿಗೆ ಹೊತ್ತು ಒಯ್ದಿರಬಹುದು ?

---

ತೇನಾಹಿರಿಪುಮಾಯಾಂತಂ ಮತ್ವಾ ಜೀಮೂತವಾಹನಃ ।
ಪರಾನುಕಂಪೀ ತಾಂ ವಧ್ಯಶಿಲಾಮಧ್ಯಾರುರೋಹ ಸಃ ॥ ೨೨೨
ಕ್ಷಣಾಚ್ಚಾತ್ರ ನಿಪತ್ಯೈವ ಮಹಾಸತ್ತ್ವಂ ಜಹಾರ ತಮ್ ।
ಆಹತ್ಯ ಚಂಚ್ವಾ ಗರುಡಃ ಸ್ವಚ್ಛಾಯಾಚ್ಛಾದಿತಾಂಬರಃ ॥ ೨೨೩
ಪರಿಸ್ರವದಸೃಗ್ಧಾರಂ ಚ್ಯುತೋತ್ಪಾತಶಿಖಾಮಣಿಮ್ ।
ನೀತ್ವಾ ಭಕ್ಷಯಿತುಂ ಚೈನಮಾರೇಭೇ ಶಿಖರೇ ಗಿರೇಃ ॥ ೨೨೪
ತತ್ಕಾಲಂ ಪುಷ್ಪವೃಷ್ಟಿಶ್ಚ ನಿಪಪಾತ ನಭಸ್ತಲಾತ್ ।
ತದ್ದರ್ಶನಾಚ್ಚ ಕಿಂ ನ್ವೇತದಿತಿ ತಾರ್ಕ್ಷ್ಯೋ ವಿಸಿಸ್ಮಿಯೇ ॥ ೨೨೫
ತಾವತ್ ಸ ಶಂಖಚೂಡೋऽತ್ರ ನತ್ವಾ ಗೋಕರ್ಣಮಾಗತಃ ।
ದದರ್ಶ ರುಧಿರಾಸಾರಸಿಕ್ತಂ ವಧ್ಯಶಿಲಾತಲಮ್ ॥ ೨೨೬
ಹಾ ಧಿಙ್ಮದರ್ಥಂ ತೇನಾತ್ಮಾ ದತ್ತೋ ನೂನಂ ಮಹಾತ್ಮನಾ ।
ತತ್ ಕುತ್ರ ನೀತಸ್ತಾರ್ಕ್ಷ್ಯೇಣ ಕ್ಷಣೇऽಸ್ಮಿನ್ ಸ ಭವಿಷ್ಯತಿ ॥ ೨೨೭

೨೨೮. ಬೇಗನೆ ಅವನನ್ನು ಹುಡುಕುತ್ತೇನೆ. ಒಂದು ವೇಳೆ ಅವನು ಸಿಕ್ಕಬಹುದು ಕೂಡ’ ಎಂದು ಯೋಚಿಸಿ ಆ ಸಾಧು ಶಂಖಚೂಡನು ರಕ್ತಧಾರೆಯನ್ನು ಅನುಸರಿಸಿ ಹೋದನು.

೨೨೯. ಈ ಮಧ್ಯದಲ್ಲಿ ಜೀಮೂತವಾಹನನು ಸಂತೋಷದಿಂದ ಇದ್ದುದನ್ನು ನೋಡಿ ಗರುಡನು ತಿನ್ನುವುದನ್ನು ಬಿಟ್ಟು ಆಶ್ಚರ್ಯದಿಂದ ಆಲೋಚಿಸಿದನು.

೨೩೦. ""ಇವನು ಯಾವನಾದರೂ ಬೇರೆಯವನಿರಬಹುದೆ ? ಇವನನ್ನು ನಾನು ತಿನ್ನುತ್ತಿದ್ದರೂ ದುಃಖಪಡುತ್ತಿಲ್ಲ. ಈ ಧೀರನು ಅದಕ್ಕೆ ಪ್ರತಿಯಾಗಿ ಆನಂದಪಡುತ್ತಿದ್ದಾನೆ”

೨೩೧. ಹೀಗೆ ತನ್ನೊಳಗೇ ತರ್ಕ ಮಾಡುತ್ತಿದ್ದ ಗರುಡನಿಗೆ ಜೀಮೂತವಾಹನನು ಅಂಥ ಸ್ಥಿತಿಯಲ್ಲಿದ್ದರೂ ತನ್ನ ಉದ್ದೇಶದ ಸಿದ್ಧಿಗಾಗಿ ಹೀಗೆ ನುಡಿದನು.

೨೩೨. ""ಪಕ್ಷಿರಾಜ, ನನ್ನ ಶರೀರದಲ್ಲಿ ಇನ್ನೂ ಮಾಂಸವೂ, ರಕ್ತವೂ ಇದೆ. ನಿನಗೆ ತೃಪ್ತಿ ಆಗಿಲ್ಲದಿದ್ದರೂ ನಿಷ್ಕಾರಣವಾಗಿ ಏಕೆ ಊಟದಿಂದ ನಿವೃತ್ತನಾಗಿರುವೆ?”

೨೩೩. ಅದನ್ನು ಕೇಳಿ ಅಚ್ಚರಿಯಲ್ಲಿ ಮುಳುಗಿದ ಪಕ್ಷಿರಾಜ ಗರುಡನು ಅವನನ್ನು ಕುರಿತು ""ಸಾಧು ವ್ಯಕ್ತಿಯೆ, ನೀನಂತೂ ನಾಗನಲ್ಲ, ನೀನು ಯಾರು ಎಂಬುದನ್ನು ಹೇಳು.” ಎಂದು ಕೇಳಿದನು.

---

ಅನ್ವಿಷ್ಯಾಮಿ ದ್ರುತಂ ತಾವತ್ ಕದಾಚಿತ್ತಮವಾಪ್ನುಯಾಮ್ ।
ಇತಿ ಸಾಧುಃ ಸ ತದ್ರಕ್ತಧಾರಾಮನುಸರನ್ ಯಯೌ ॥ ೨೨೮

ಅತ್ರಾಂತರೇ ಚ ಹೃಷ್ಟಂ ತಂ ದೃಷ್ಟ್ವಾ ಜೀಮೂತವಾಹನಮ್ ।
ಗರುಡೋ ಭಕ್ಷಣಂ ಮುಕ್ತ್ವಾ ಸವಿಸ್ಮಯಮಚಿಂತಯತ್ ॥ ೨೨೯

ಕಶ್ಚಿತ್ ಕಿಮನ್ಯ ಏವಾಯಂ ಭಕ್ಷ್ಯಮಾಣೋಽಪಿ ಯೋ ಮಯಾ ।
ವಿಪದ್ಯತೇ ನ ತು ಪರಂ ಧೀರಃ ಪ್ರತ್ಯುತ ಹೃಷ್ಯತಿ ॥ ೨೩೦

ಇತ್ಯಂತರ್ವಿಮೃಶಂತಂ ಚ ತಾರ್ಕ್ಷ್ಯಂ ತಾದೃಗ್ವಿಧೋಽಪಿ ಸಃ ।
ನಿಜಗಾದ ನಿಜಾಭೀಷ್ಟಸಿದ್ಧ್ಯೈ ಜೀಮೂತವಾಹನಃ ॥ ೨೩೧

ಪಕ್ಷಿರಾಜ ಮಮಾಸ್ತ್ಯೇವ ಶರೀರೇ ಮಾಂಸಶೋಣಿತಮ್ ।
ತದಕಸ್ಮಾದತೃಪ್ತೋಽಪಿ ಕಿಂ ನಿವೃತ್ತೋಽಸಿ ಭಕ್ಷಣಾತ್ ॥ ೨೩೨

ತಚ್ಛ್ರುತ್ವಾಶ್ಚರ್ಯವಶಗಸ್ತಂ ಸ ಪಪ್ರಚ್ಛ ಪಕ್ಷಿರಾಟ್ ।
ನಾಗಃ ಸಾಧೋ ನ ತಾವತ್ ತ್ವಂ ಬ್ರೂಹಿ ತತ್ ಕೋ ಭವಾನಿತಿ ॥ ೨೩೩

೨೩೪. "'ನಾನು ನಾಗನೇ, ನೀನು ತಿನ್ನು. ಆರಂಭಿಸಿದ ಕೆಲಸವನ್ನು ಮುಗಿಸು. ಆರಂಭಿಸಿದ ಕಾರ್ಯವನ್ನು ಮುಗಿಸದೆ ಧೀರರು ಬಿಡುವರೇನು ?"

೨೩೫. ಜೀಮೂತವಾಹನನು ಇಷ್ಟು ಉತ್ತರಿಸುವಷ್ಟರಲ್ಲಿ ಅಲ್ಲಿಗೆ ಬಂದ ಶಂಖಚೂಡನು ದೂರದಿಂದಲೇ ಕೂಗಿ ಹೇಳಿದನು.

೨೩೬ "'ಬೇಡ ಬೇಡ, ಗರುಡ, ಅವನು ನಾಗನಲ್ಲ. ನಿನ್ನ ನಾಗನು ನಾನು. ಅವನನ್ನು ಬಿಡು, ನಿನಗೇಕೆ ಅಸ್ಥಾನದಲ್ಲಿ ಭ್ರಾಂತಿ ಉಂಟಾಯಿತು ?"

೨೩೭ ಅದನ್ನು ಕೇಳಿ ಪಕ್ಷಿರಾಜನಿಗೆ ತುಂಬ ಕಸಿವಿಸಿಯಾಯಿತು. ಜೀಮೂತವಾಹನನೂ ತನಗೆ ಬೇಕಾದುದು ಸಿದ್ಧಿಸಲಿಲ್ಲ ಎಂದು ಖಿನ್ನನಾದನು.

೨೩೮. ಆಮೇಲೆ ಪರಸ್ಪರ ಸಂಭಾಷಣೆಯಿಂದ ಅವನು ವಿದ್ಯಾಧರರ ರಾಜನೆಂಬುದನ್ನು ಅರಿತುಕೊಂಡ ಗರುಡನು ಅಜ್ಞಾನದಿಂದ ಅವನನ್ನು ತಾನು ಭಕ್ಷಿಸಿದೆನೆಂದು ತುಂಬ ನೊಂದುಕೊಂಡನು.

೨೩೯. "ಅಯ್ಯೋ, ಕ್ರೂರನಾದ ನನಗೆ ಪಾಪವು ಸುತ್ತಿಕೊಂಡಿತು. ಅಥವಾ ದುರ್ಮಾರ್ಗಕ್ಕೆ ಹೋಗುವ ಪ್ರವೃತ್ತಿಗಳನ್ನುಳ್ಳವರು ಸುಲಭವಾಗಿ ಪಾಪ ಮಾಡುವರೇನು ?

---

ನಾಗ ಏವಾಸ್ಮಿ ಭುಂಕ್ಷ್ವ ತ್ವಂ ಯಥಾರಬ್ಧಂ ಸಮಾಪಯ ।
ಆರಬ್ಧಾ ಹ್ಯಸಮಾಪ್ತೈವ ಕಿಂ ಧೀರೈಸ್ತ್ಯಜ್ಯತೇ ಕ್ರಿಯಾ ॥ ೨೩೪

ಇತಿ ಯಾವಚ್ಚ ಜೀಮೂತವಾಹನಃ ಪ್ರತಿವಕ್ತಿ ತಮ್ ।
ತಾವತ್ಸ ಶಂಖಚೂಡೋ□ತ್ರ ಪ್ರಾಪ್ತೋ ದೂರಾದಭಾಷತ ॥ ೨೩೫

ಮಾ ಮಾ ಗರುತ್ಮನ್ನೈವೈಷ ನಾಗೋ ನಾಗೋ ಹ್ಯಹಂ ತವ ।
ತದೇನಂ ಮುಂಚ ಕೋ□ಯಂ ತೇ ಜಾತೋ□ಕಾಂಡೇ ತವ ಭ್ರಮಃ ॥ ೨೩೬

ತಚ್ಛ್ರುತ್ವಾತೀವ ವಿಭ್ರಾಂತೋ ಬಭೂವ ಸ ಖಗೇಶ್ವರಃ ।
ವಾಂಛಿತಾಸಿದ್ಧಿಖೇದಂ ಚ ಭೇಜೇ ಜೀಮೂತವಾಹನಃ ॥ ೨೩೭

ತತೋ□ನ್ಯೋನ್ಯಸಮಾಲಾಪಕ್ರುದದ್ವಿದ್ಯಾಧರಾಧಿಪಮ್ ।
ಬುದ್ಧ್ವಾ ತಂ ಭಕ್ಷಿತಂ ಮೋಹಾದ್ ಗರುತ್ಮಾನಭ್ಯತಪ್ಯತ ॥ ೨೩೮

ಅಹೋ ಬತ ನೃಶಂಸಸ್ಯ ಪಾಪಮಾಪತಿತಂ ಮಮ ।
ಕಿಂ ವಾ ಸುಲಭಪಾಪಾ ಹಿ ಭವಂತ್ಯುನ್ಮಾರ್ಗವೃತ್ತಯಃ ॥ ೨೩೯

೨೫೦. ಈ ಮಹಾತ್ಮನೇ ಹೊಗಳಿಕೆಗೆ ಪಾತ್ರನು. ನನ್ನದು ನನ್ನದು ಎಂಬ ಮೋಹಕ್ಕೆ ವಶವಾದ ಈ ವಿಶ್ವವನ್ನು, ಬೇರೆಯವನಿಗಾಗಿ ಪ್ರಾಣ ಬಿಡುವ ಅವನು ಕೆಳಗೆ ಮಾಡಿದ್ದಾನೆ'

೨೫೧. ಹೀಗೆ ಚಿಂತಿಸಿದ ಗರುಡನು ತನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಬೆಂಕಿಯೊಳಗೆ ಬೀಳಲು ಇಚ್ಛಿಸಿದಾಗ ಜೀಮೂತವಾಹನನು ಹೀಗೆ ನುಡಿದನು.

೨೫೨. "ಪಕ್ಷಿರಾಜನೆ, ನೀನೇಕೆ ವಿಷಣ್ಣನಾಗಿರುವೆ ? ಸತ್ಯವಾಗಿಯೂ ನೀನು ಪಾಪಕ್ಕೆ ಹೆದರುವೆಯಾದರೆ ಈಗ ಮತ್ತೆ ಎಂದೂ ನೀನು ನಾಗರನ್ನು ತಿನ್ನಕೂಡದು.

೨೫೩. ಹಿಂದೆ ನೀನು ತಿಂದ ಹಾವುಗಳಲ್ಲಿ ಸಂತಾಪವನ್ನು ತೋರಿಸಬೇಕು. ಇದೇ ನಿನ್ನ ಪಾಪಕ್ಕೆ ತಕ್ಕ ಪ್ರತೀಕಾರ. ಬೇರೆ ಯೋಚಿಸಿದರೆ ಅದು ವ್ಯರ್ಥ.'

೨೫೪. ಹೀಗೆ ಎಲ್ಲ ಪ್ರಾಣಿಗಳಲ್ಲೂ ಕರುಣೆಯಿದ್ದ ಜೀಮೂತವಾಹನನು ಹೇಳಿದಾಗ ಸಂತುಷ್ಟನಾದ ಗರುಡನು ಅವನ ಮಾತನ್ನು ಗುರುವಿನ ಆದೇಶದಂತೆ ಒಪ್ಪಿಕೊಂಡನು.

೨೫೫. ಶರೀರದಲ್ಲಿ ಗಾಯಗೊಂಡಿದ್ದ ಜೀಮೂತವಾಹನನನ್ನೂ ಮೂಳೆಗಳಾಗಿ ಉಳಿದಿದ್ದ ಬೇರೆ ಹಾವುಗಳನ್ನೂ ಮತ್ತೆ ಬದುಕಿಸುವುದಕ್ಕಾಗಿ ಅಮೃತವನ್ನು ತರಲು ಗರುಡನು ವೇಗದಿಂದ ಹೋದನು.

---

ಶ್ಲಾಘ್ಯಸ್ತ್ವೇಷ ಮಹಾತ್ಮೈಕಃ ಪರಾರ್ಥಪ್ರಾಣದಾಯಿನಾ ।
ಮಮೇತಿ ಮೋಹೈಕವಶಂ ಯೇನ ವಿಶ್ವಮಧಃ ಕೃತಮ್ ॥ ೨೫೦
ಇತಿ ತಂ ಚಿಂತಯಂತಂ ಚ ಗರುಡಂ ಪಾಪಶುದ್ಧಯೇ ।
ವಹ್ನಿಂ ವಿವಿಕ್ಷುಂ ಜೀಮೂತವಾಹನೋಽಥ ಜಗಾದ ಸಃ ॥ ೨೫೧
ಪಕ್ಷೀಂದ್ರ ಕಿಂ ವಿಷಣ್ಣೋಽಸಿ ಸತ್ಯಂ ಪಾಪಾದ್ ಬಿಭೇಷಿ ಚೇತ್ ।
ತದಿದಾನೀಂ ನ ಭೂಯಸ್ತೇ ಭಕ್ಷ್ಯಾ ಹೀಮೇ ಭುಜಂಗಮಾಃ ॥ ೨೫೨
ಕಾರ್ಯಶ್ಚಾನುಶಯಸ್ತೇಷು ಪೂರ್ವಭುಕ್ತೇಷು ಭೋಗಿಷು ।
ಏಷೋಽತ್ರ ಹಿ ಪ್ರತೀಕಾರೋ ವೃಥಾನ್ಯಚ್ಚಿಂತಿತಂ ತವ ॥ ೨೫೩
ಇತ್ಯುಕ್ತಸ್ತೇನ ಸ ಪ್ರೀತಸ್ತಾರ್ಕ್ಷ್ಯೋ ಭೂತಾನುಕಂಪಿನಾ ।
ತಥೇತಿ ಪ್ರತಿಪೇದೇ ತದ್ವಾಕ್ಯಂ ತಸ್ಯ ಗುರೋರಿವ ॥ ೨೫೪
ಯಯೌ ಚಾಮೃತಮಾನೇತುಂ ನಾಕಾಜ್ಜೀವಯಿತುಂ ಜವಾತ್ ।
ಕ್ಷತಾಂಗಂ ತಂ ತತ್ರ ಚಾನ್ಯಾನ್ ಅಸ್ಥಿಶೇಷಾನ್ ಅಹೀನಪಿ ॥ ೨೫೫

೨೪೬ ಜೀಮೂತವಾಹನನ ಮಡದಿಯ ಭಕ್ತಿಗೆ ಪ್ರಸನ್ನಳಾದ ದೇವಿ ಗೌರಿಯು ಸಾಕ್ಷಾತ್ತಾಗಿ ಅಲ್ಲಿಗೆ ಬಂದು ಅಮೃತವನ್ನು ಅವನ ಮೇಲೆ ಚಿಮುಕಿಸಿದಳು.

೨೪೭ ಅದರಿಂದ ಮೊದಲಿಗಿಂತಲೂ ಹೆಚ್ಚಾದ ಕಾಂತಿಯುಳ್ಳ ಅವಯವಗಳು ಜೀಮೂತವಾಹನನಿಗೆ ಹುಟ್ಟಿದುವು. ಅದರೊಡನೆ ದೇವತೆಗಳ ಆನಂದದ ದುಂದುಭಿಗಳ ಸದ್ದುಗಳೂ ಹುಟ್ಟಿದುವು.

೨೪೮. ಅವನು ಸ್ವಸ್ಥನಾಗಿ ಎದ್ದು ನಿಂತ ಮೇಲೆ ಗರುಡನೂ ಅಮೃತವನ್ನು ತಂದು ಕಡಲಿನ ಎಲ್ಲೆಯ ದಡದ ಮೇಲೆಲ್ಲ ಆಕಾಶದಿಂದಲೇ ಸುರಿದನು.

೨೪೯. ಅದರಿಂದ ಎಲ್ಲ ಹಾವುಗಳೂ ಬದುಕಿ ಎದ್ದುವು. ದೊಡ್ಡದಾದ ಹಾವುಗಳ ವಂಶಗಳ ಗುಂಪು ಅಲ್ಲಿ ಕಂಗೊಳಿಸಿತು.

೨೫೦. ಆಮೇಲೆ ಸಮುದ್ರತೀರದಲ್ಲಿದ್ದ ಕಾಡೆಲ್ಲ ಗರುಡನ ಹೆದರಿಕೆಯಿಂದ ಮುಕ್ತವಾಗಿ, ಜೀಮೂತವಾಹನನನ್ನು ನೋಡಲು ಬಂದ ಪಾತಾಳದಂತೆ ಕಾಣುತ್ತಿತ್ತು.

೨೫೧. ಅನಂತರ ಜೀಮೂತವಾಹನನು ಕ್ಷಯವೇ ಇಲ್ಲದ ದೇಹದಿಂದಲೂ ಕೀರ್ತಿಯಿಂದಲೂ ವಿರಾಜಿಸುತ್ತಿದ್ದುದನ್ನು ಅರಿತು ಬಂಧುಗಳು ಅವನನ್ನು ಅಭಿನಂದಿಸಿದರು.

---

ತತಶ್ಚ ಸಾಕ್ಷಾದಾಗತ್ಯ ದೇವ್ಯಾ ಸಿಕ್ತೋಽಮೃತೇನ ಸಃ ।
ಜೀಮೂತವಾಹನೋ ಗೌರ್ಯಾ ತದ್‌ಭಾರ್ಯಾಭಕ್ತಿತುಷ್ಟಯಾ ॥ ೨೪೬

ತೇನಾಧಿಕತರೋದ್ಭೂತಕಾಂತೀನ್ಯಂಗಾನಿ ಜಜ್ಞಿರೇ ।
ತಸ್ಯ ಸಾನಂದಗೀರ್ವಾಣದುಂದುಭಿಧ್ವನಿಭಿಃ ಸಹ ॥ ೨೪೭

ಸ್ವಸ್ಥೋತ್ಥಿತೇ ತತಸ್ತಸ್ಮಿನ್ ಆನೀಯ ಗರುಡೋಽಪಿ ತತ್ ।
ಕೃತ್ಸ್ನೇ ವೇಲಾತಟೇಽಪ್ಯತ್ರ ವವರ್ಷಾಮೃತಮಂಬರಾತ್ ॥ ೨೪೮

ತೇನ ಸರ್ವೇ ಸಮುತ್ತಸ್ಥುರ್ಜೀವಂತಸ್ತತ್ರ ಪನ್ನಗಾಃ ।
ಬಭೌ ತಚ್ಚ ತದಾ ಭೂರಿಭುಜಂಗಕುಲಸಂಕುಲಮ್ ॥ ೨೪೯

ವೇಲಾವನಂ ವಿನಿರ್ಮುಕ್ತ್ಯವೈನತೇಯಭಯಂ ತತಃ ।
ಪಾತಾಲಮಿವ ಜೀಮೂತವಾಹನಾಲೋಕನಾಗತಮ್ ॥ ೨೫೦

ತತೋಽಕ್ಷಯೇಣ ದೇಹೇನ ಯಶಸಾ ಚ ವಿರಾಜಿತಮ್ ।
ಬುದ್ಧ್ವಾಭ್ಯನಂದತ್ ತಂ ಬಂಧುಜನೋ ಜೀಮೂತವಾಹನಮ್ ॥ ೨೫೧

೨೫೨. ಬಂಧುಗಳಿಂದ ಕೂಡಿದ ಅವನ ಹೆಂಡತಿಯೂ, ಅವನ ತಂದೆತಾಯಿಯರೂ ಆನಂದಪಟ್ಟರು. ದುಃಖವು ಸುಖವಾಗಿ ಪರಿವರ್ತನೆ ಹೊಂದಿದರೆ ಅದರಿಂದ ಯಾರು ತಾನೆ ಸಂತೋಷಿಸುವುದಿಲ್ಲ ?

೨೫೩. ಜೀಮೂತವಾಹನನಿಂದ ಬೀಳ್ಕೊಂಡ ಶಂಖಚೂಡನು ಪಾತಾಳಕ್ಕೆ ಹೋದನು. ಅವನು ಬೀಳ್ಕೊಡದಿದ್ದರೂ ಜೀಮೂತವಾಹನನ ಕೀರ್ತಿಯು ತನಗಿಷ್ಟಬಂದಂತೆ ಮೂರು ಲೋಕಗಳಿಗೂ ಹೋಯಿತು.

೨೫೪. ವಿದ್ಯಾಧರರಿಗೆಲ್ಲ ಅಲಂಕಾರಪ್ರಾಯನಾಗಿದ್ದ ಜೀಮೂತವಾಹನನಿಗೆ ದೇವತೆಗಳ ಗಣವೆಲ್ಲ ಪ್ರೀತಿಯಿಂದ ಬಗ್ಗಿ ನಮಸ್ಕರಿಸಿತು. ಬಹಳ ಕಾಲದವರೆಗೆ ಅವನ ವಿರೋಧವನ್ನೇ ಮಾಡುತ್ತಿದ್ದ ಮತಂಗನೇ ಮುಂತಾದ ದಾಯಾದಿಗಳೆಲ್ಲರೂ ಹಿಮಾಚಲದ ಮಗಳಾದ ಗೌರಿಯ ಅನುಗ್ರಹದ ಪ್ರಭಾವದಿಂದ ಜೀಮೂತವಾಹನನ ಬಳಿಗೆ ಭಯದಿಂದ ಬಂದು ನಮಸ್ಕರಿಸಿದರು.

೨೫೫. ಅವರು ಪ್ರಾರ್ಥಿಸಿದಾಗ ಧನ್ಯಜೀವಿ ಜೀಮೂತವಾಹನನು ಮಲಯಪರ್ವತದಿಂದ ಹೊರಟು ತನ್ನ ಮನೆಯಾದ ಹಿಮದ ಬೆಟ್ಟದ ತಪ್ಪಲಿಗೆ ಹೋದನು.

೨೫೬. ಅಲ್ಲಿ ತನ್ನ ತಂದೆ, ತಾಯಿ, ಮಿತ್ರಾವಸು, ಮಲಯವತಿ ಇವರೊಡನೆ ಕೂಡಿದ ಧೀರ ಜೀಮೂತವಾಹನನು ವಿದ್ಯಾಧರಚಕ್ರವರ್ತಿಯ ಪದವಿಯನ್ನು ಅನುಭವಿಸಿದನು.

---

ನನಂದ ತಸ್ಯ ಭಾರ್ಯಾ ಚ ಸಜ್ಞಾತಿಃ ಪಿತರೌ ತಥಾ ।
ಕೋ ನ ಪ್ರಹೃಷ್ಯೇದ್ ದುಃಖೇನ ಸುಖತ್ವಪರಿವರ್ತಿನಾ ॥ ೨೫೨
ವಿಸೃಷ್ಟಸ್ತೇನ ಚ ಯಯೌ ಶಂಖಚೂಡೋ ರಸಾತಲಮ್ ।
ಸ್ವಚ್ಛಂದಮವಿಸೃಷ್ಟಂ ಚ ಲೋಕಾಂಸ್ತ್ರೀನಪಿ ತದ್ಯಶಃ ॥ ೨೫೩
ತತಃ ಪ್ರೀತಿಪ್ರಹ್ವಾಮರನಿಕರ (ಮಾಗತ್ಯ ಗರುಡಂ ?)
ಪ್ರಣೇಮುಸ್ತಂ ವಿದ್ಯಾಧರತಿಲಕಮಭ್ಯೇತ್ಯ ಸಭಯಾ ಃ ।
ಸ್ವದಾಯಾದಾಃ ಸರ್ವೇ ಹಿಮಗಿರಿ ಸುತಾನುಗ್ರಹ ವಶಾ –
ನ್ಮತಂಗಾಖ್ಯಾದ್ಯಾ ಯೇ ಸುಚಿರಮಭಜನ್ನಸ್ಯ ವಿಕೃತಿಮ್ ॥ ೨೫೪
ತೈರೇವ ಚಾರ್ಥ್ಯಮಾನಃ ಸುಕೃತೀ ಜೀಮೂತವಾಹನಃ ಸ ತತಃ ।
ಮಲಯಾಚಲಾದಗಚ್ಛನ್ನಿಜನಿಲಯಂ ತುಹಿನಶೈಲತಟಮ್ ॥ ೨೫೫
ತತ್ರ ಪಿತೃಭ್ಯಾಂ ಸಹಿತೋ ಮಿತ್ರಾವಸುನಾ ಚ ಮಲಯವತ್ಯಾ ಚ ।
ಧೀರಶ್ಚಿರಾಯ ಬುಭುಜೇ ವಿದ್ಯಾಧರಚಕ್ರವರ್ತಿಪದಮ್ ॥ ೨೫೬

೨೫೭ ಹೀಗೆ ಎಲ್ಲ ಮೂರು ಲೋಕಗಳ ಹೃದಯಕ್ಕೆ ಚಮತ್ಕಾರವನ್ನು ಉಂಟು ಮಾಡುವ ನಡವಳಿಕೆಯನ್ನು ಹೊಂದಿದವರ ದಾರಿಯನ್ನು ಶುಭಗಳ ಸಾಲುಗಳು ತಾವೇ ಹಿಡಿದು ಓಡಿಬರುತ್ತವೆ.

೨೫೮. ಯೌಗಂಧರಾಯಣನ ಬಾಯಿಂದ ಈ ಕಥೆಯನ್ನು ಕೇಳಿ ಗರ್ಭದ ಭಾರದಿಂದ ಉದಾರವಾದ ಬಯಕೆಗಳನ್ನು ಹೊಂದಿದ್ದ ದೇವಿ ವಾಸವದತ್ತೆಯು ಸಂತೋಷಪಟ್ಟಳು.

೨೫೯. ಅದಾದ ಮೇಲೆ ತನ್ನ ಗಂಡನ ಜೊತೆಯಲ್ಲೇ ಇದ್ದ ವಾಸವದತ್ತೆಯು ಪ್ರೀತಿಪಾತ್ರಳಾಗಿದ್ದ ದೇವತೆಗಳ ಸತತವಾದ ಆದೇಶದ ವಿಶ್ವಾಸದಿಂದ (ಜೀಮೂತವಾಹನನ ಕಥೆಗೆ) ಸಂಬಂಧಿಸಿದಂತೆ ದೊರಕಿದ, ಮುಂದಿನ ವಿದ್ಯಾಧರಚಕ್ರವರ್ತಿಯಾಗಲಿರುವ ತನ್ನ ಮಗನ ಕಥೆಯನ್ನು ಕೇಳುತ್ತಾ ಆ ದಿನವನ್ನು ಕಳೆದಳು.

**ಮಹಾಕವಿ ಶ್ರೀ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದ ನರವಾಹನದತ್ತಜನನಲಂಬಕದಲ್ಲಿ**

**ಎರಡನೆಯ ತರಂಗ ಮುಗಿಯಿತು.**

---

ಏವಂ ಸಕಲಜಗತ್ತ್ರಯಹೃದಯಚಮತ್ಕಾರಕಾರಿಚರಿತಾನಾಮ್ ।
ಸ್ವಯಮನುಧಾವಂತಿ ಸದಾ ಕಲ್ಯಾಣಪರಂಪರಾಃ ಪದವೀಮ್ ॥ ೨೫೭
ಇತ್ಯಾಕರ್ಣ್ಯ ಕಥಾಂ ಕಿಲ ದೇವೀ ಯೌಗಂಧರಾಯಣಸ್ಯ ಮುಖಾತ್ ।
ಮುಮುದೇ ವಾಸವದತ್ತಾ ಗರ್ಭಭರೋದಾರದೋಹದಿನೀ ॥ ೨೫೮
ತದನು ತದನುಷಂಗಪ್ರಾಪ್ತಯಾ ಪ್ರೀತಿಭಾಜಾ –
ಮನವರತನಿದೇಶಪ್ರತ್ಯಯಾದ್ ದೇವತಾನಾಮ್ ।
ನಿಜಪತಿನಿಕಟಸ್ಥಾಂ ಭಾವಿವಿದ್ಯಾಧರೇಂದ್ರ –
ಸ್ವತನಯಕಥಯಾ ತಂ ವಾಸರಂ ಸಾ ನಿನಾಯ ॥ ೨೫೯

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ ನರವಾಹನದತ್ತಜನನಲಂಬಕೇ**

**ದ್ವಿತೀಯಸ್ತರಂಗಃ ।**

# ಮೂರನೆಯ ತರಂಗ

೧. ಆ ಮೇಲೆ ಮತ್ತೊಂದು ದಿನ ಸಮೀಪದಲ್ಲಿ ವತ್ಸರಾಜನು ಏಕಾಂತದಲ್ಲಿ ತನ್ನ ಮಂತ್ರಿಗಳೊಡನೆ ಕುಳಿತಿದ್ದಾಗ ವಾಸವದತ್ತೆಯು ಅವನಿಗೆ ಹೀಗೆ ಹೇಳಿದಳು.

೨. "'ಆರ್ಯಪುತ್ರ ಎಂದಿನಿಂದ ನಾನು ಈ ಗರ್ಭವನ್ನು ಧರಿಸಿದೆನೋ ಅಂದಿನಿಂದಲೂ ಅದರ ರಕ್ಷಣೆಯು ನನ್ನ ಹೃದಯದಲ್ಲಿ ತೀವ್ರವಾದ ಚಿಂತೆಯನ್ನುಂಟು ಮಾಡುತ್ತಿದೆ.

೩. ಅದೇ ಚಿಂತೆಯಲ್ಲೇ ನಾನು ರಾತ್ರಿಯಲ್ಲಿ ಹೇಗೋ ಮಲಗಿ ನಿದ್ದೆ ಮಾಡಿದೆನು. ಆಗ ಕನಸಿನಲ್ಲಿ ಯಾವನೋ ಪುರುಷನು ಬಂದುದನ್ನು ಕಂಡೆನೆಂದು ನನ್ನ ಅರಿವಿಗೆ ಬಂದಿತು.

೪. ಅವನ ಶರೀರವು ಭಸ್ಮದ ಲೇಪನದಿಂದ ಬೆಳ್ಳಗಾಗಿತ್ತು. ಅವನ ತಲೆಯ ಮೇಲೆ ಚಂದ್ರನು ಆಭರಣದಂತೆ ಶೋಭಿಸುತ್ತಿದ್ದನು. ಜಟೆಗಳು ಹೊಂಬಣ್ಣದವಾಗಿದ್ದುವು. ಅವನ ಕೈಯಲ್ಲಿ ಶೂಲವಿತ್ತು.

೫ ಅವನು ಕರುಣಾಮಯನಾಗಿ ನನ್ನ ಬಳಿಗೆ ಬಂದು ನುಡಿದನು. 'ಮಗಳೇ, ಗರ್ಭದ ಬಗೆಗೆ ನೀನು ಯಾವ ಚಿಂತೆಯನ್ನೂ ಮಾಡಬೇಡ.

---

# ತೃತೀಯಸ್ತರಂಗಃ

ತತೋ ವಾಸವದತ್ತಾ ಸಾ ವತ್ಸರಾಜಂ ಸಮೀಪಗಮ್ ।
ವಿಜನೇ ಸಚಿವೈರ್ಯುಕ್ತಮುನ್ಯೇದ್ಯುರಿದಮಬ್ರವೀತ್ ॥ ೧
ಯತಃ ಪ್ರಭೃತಿ ಗರ್ಭೋ□ಯಮಾರ್ಯಪುತ್ರ ಧೃತೋ ಮಯಾ ।
ತತಃ ಪ್ರಭೃತಿ ತದ್ರಕ್ಷಾ ತೀವ್ರಾ ಮಾಂ ಹೃದಿ ಬಾಧತೇ ॥ ೨
ಅದ್ಯ ತಚ್ಚಿಂತಯಾ ಚಾಹಂ ಸುಪ್ತಾ ನಿಶಿ ಕಥಂಚನ ।
ಜಾನೇ ದೃಷ್ಟವತೀ ಕಂಚಿತ್ ಸ್ವಪ್ನೇ ಪುರುಷಮಾಗತಮ್ ॥ ೩
ಭಸ್ಮಾಂಗರಾಗಸಿತಯಾ ಶೇಖರೀಕೃತಚಂದ್ರಯಾ ।
ಪಿಶಂಗಜಟಯಾ ಮೂರ್ತ್ಯಾ ಶೋಭಿತಂ ಶೂಲಹಸ್ತಯಾ ॥ ೪
ಸ ಚ ಮಾಮಭ್ಯುಪೇತ್ಯೈವ ಸಾನುಕಂಪ ಇವಾವದತ್ ।
ಪುತ್ರಿ ಗರ್ಭಕೃತೇ ಚಿಂತಾ ನ ಕಾರ್ಯಾ ಕಾಚನ ತ್ವಯಾ ॥ ೫

೬ ನಿನ್ನ ಈ ಗರ್ಭವನ್ನು ನಾನು ಕಾಪಾಡುತ್ತೇನೆ. ನಿನಗೆ ಈ ಗರ್ಭವನ್ನು (ವರದಿಂದ) ಕೊಟ್ಟವನು ನಾನಲ್ಲವೆ. ನಿನಗೆ ನಂಬಿಕೆಗಾಗಿ ಇನ್ನೊಂದು ಕಾರಣವನ್ನು ಹೇಳುವೆನು, ಕೇಳು.

೭ ನಾಳೆ ಯಾವಳೋ ಒಬ್ಬ ಹೆಂಗಸು ತನ್ನ ಪತಿಯನ್ನು ಬಲಾತ್ಕಾರದಿಂದ ಬಂಧಿಸಿ ಎಳೆದುಕೊಂಡು ದೂರು ಕೊಡಲು ನಿಮ್ಮ ಬಳಿಗೆ ಬರುವಳು.

೮ ಆ ಕೆಟ್ಟ ನಡತೆಯ ಹೆಂಗಸು ತನ್ನ ನೆಂಟರ ಬಲದಿಂದ ಗಂಡನನ್ನೇ ಕೊಲ್ಲಿಸಲು ಅಪೇಕ್ಷಿಸಿ ಎಲ್ಲ ಸುಳ್ಳುಗಳನ್ನೂ ಹೇಳುತ್ತಾಳೆ.

೯. ಮಗಳೆ, ನೀನು ಈ ಬಗೆಗೆ ಮೊದಲೇ ವತ್ಸರಾಜನಿಗೆ ಬಿನ್ನವಿಸು. ಆ ಕೆಟ್ಟ ಹೆಂಗಸಿನ ದೆಸೆಯಿಂದ ಆ ಒಳ್ಳೆಯ ಮನುಷ್ಯನು ಬಿಡುಗಡೆ ಹೊಂದುವಂತೆ ಮಾಡು.'

೧೦. ಹೀಗೆ ಆದೇಶಿಸಿ ಆ ಮಹಾತ್ಮನು ಕಣ್ಮರೆಯಾಗಲು ನಾನು ತಟ್ಟನೆ ಎಚ್ಚರಗೊಂಡೆನು. ಆಗಲೇ ರಾತ್ರಿ ಕಳೆದು ಬೆಳಗಾಯಿತು."

೧೧. ಹೀಗೆ ಆ ದೇವಿಯು ಹೇಳಿದಾಗ 'ಇದು ಶಿವನ ಅನುಗ್ರಹ' ಎಂದು ಎಲ್ಲರೂ ಆಶ್ಚರ್ಯಪಡುತ್ತಾ ಅವಳ ಮಾತಿನಂತಾಗಲಿ ಎಂದು ಬಯಸಿದರು.

---

ಅಹಂ ತವೈನಂ ರಕ್ಷಾಮಿ ದತ್ತೋ ಹ್ಯೇಷ ಮಯೈವ ತೇ ।
ಕಿಂ ಚಾನ್ಯಚ್ಛೃಣು ವಚ್ಮ್ಯೇವ ತವ ಪ್ರತ್ಯಯಕಾರಣಮ್ ॥ ೬
ಶ್ವಃ ಕ್ವಾಪಿ ನಾರೀ ವಿಜ್ಞಪ್ತಿಹೇತೋರ್ಯುಷ್ಮಾನುಪೈಷ್ಯತಿ ।
ಅವಷ್ಟಭ್ಯೈವ ಸಾಕ್ಷೇಪಮಾಕರ್ಷಂತೀ ನಿಜಂ ಪತಿಮ್ ॥ ೭
ಸಾ ಚ ದುಶ್ಚಾರಿಣೀ ಯೋಷಿತ್ ಸ್ವಬಾಂಧವಬಲಾತ್ ಪತಿಮ್ ।
ತಂ ಘಾತಯಿತುಮಿಚ್ಛಂತೀ ಸರ್ವಂ ಮಿಥ್ಯಾ ಬ್ರವೀತಿ ತತ್ ॥ ೮
ತ್ವಂ ಚಾತ್ರ ಪುತ್ರಿ ವತ್ಸೇಶಂ ಪೂರ್ವಂ ವಿಜ್ಞಾಪಯೇಸ್ತಥಾ ।
ತಸ್ಯಾಃ ಸಕಾಶಾತ್ ಸ ಯಥಾ ಸಾಧುರ್ಮುಚ್ಯೇತ ಕುಸ್ತ್ರಿಯಃ ॥ ೯
ಇತ್ಯಾದಿಶ್ಯ ಗತೇ ತಸ್ಮಿನ್ನಂತರ್ಧಾನಂ ಮಹಾತ್ಮನಿ ।
ಪ್ರಬುದ್ಧಾ ಸಹಸೈವಾಹಂ ವಿಭಾತಾ ಚ ವಿಭಾವರೀ ॥ ೧೦
ಏವಮುಕ್ತೇ ತಯಾ ದೇವ್ಯಾ ಶರ್ವಾನುಗ್ರಹವಾದಿನಃ ।
ತತ್ರಾಸನ್ ವಿಸ್ಮಿತಾಃ ಸರ್ವೇ ಸಂವಾದಾಪೇಕ್ಷಿಮಾನಸಾಃ ॥ ೧೧

೧೨. ಅದೇ ಕ್ಷಣದಲ್ಲೇ ಒಳಗೆ ಪ್ರವೇಶಿಸಿದ ಮುಖ್ಯ ದ್ವಾರಪಾಲಕನು ದುಃಖಿತರಲ್ಲಿ ಮರುಕವನ್ನು ತೋರಿಸುತ್ತಿದ್ದ ವತ್ಸರಾಜನಿಗೆ ಹೀಗೆ ವಿಜ್ಞಾಪನೆ ಮಾಡಿದನು.

೧೩. "" ದೇವ, ಬಂಧುಗಳೊಡನೆ ಯಾವಳೋ ಹೆಂಗಸು ಬಿನ್ನಹವನ್ನು ಮಾಡಲು ಬಂದಿದ್ದಾಳೆ. ಐವರು ಮಕ್ಕಳನ್ನು ಕರೆದುಕೊಂಡು ಬಂದಿರುವ ಅವಳು ಕಂಗಾಲಾಗಿರುವ ತನ್ನ ಗಂಡನನ್ನು ದೂರುತ್ತಿದ್ದಾಳೆ."

೧೪. ಅದನ್ನು ಕೇಳಿ ರಾಜನು ರಾಣಿಯ ಸ್ವಪ್ನಕ್ಕೂ ಈ ಘಟನೆಗೂ ಆದ ಹೊಂದಾಣಿಕೆಯಿಂದ ಆಶ್ಚರ್ಯಪಟ್ಟು ""ಅವಳನ್ನು ಇಲ್ಲಿಗೇ ಒಳಕ್ಕೆ ಕರೆದುಕೊಂಡು ಬಾ" ಎಂದು ದ್ವಾರಪಾಲಕನಿಗೆ ಅಪ್ಪಣೆ ಮಾಡಿದನು.

೧೫. ಕನಸು ನಿಜವಾಯಿತು ಎಂದು ಅದರಿಂದ ಒಳ್ಳೆಯ ಮಗನು ಹುಟ್ಟುವ ಬಗೆಗೆ ನಿಶ್ಚಯವನ್ನು ತಳೆದ ದೇವಿ ವಾಸವದತ್ತೆಯೂ ಆನಂದಭರಿತಳಾದಳು.

೧೬. ಆಮೇಲೆ ಎಲ್ಲರೂ ಬಾಗಿಲ ಕಡೆಗೆ ತಿರುಗಿ ಕುತೂಹಲದಿಂದ ನೋಡುತ್ತಿರಲು ಗಂಡನ ಜೊತೆಯಲ್ಲೇ ಆ ಹೆಂಗಸು ದ್ವಾರಪಾಲಕನ ಆದೇಶದಂತೆ ಒಳಗೆ ಬಂದಳು.

೧೭. ಒಳಗೆ ಬಂದು ದೈನ್ಯವನ್ನು ಅವಲಂಬಿಸಿ ಕ್ರಮದಂತೆ ನಮಸ್ಕಾರ ಮಾಡಿ ಸಭೆಯಲ್ಲಿ ಅವಳು ರಾಜನಿಗೂ ರಾಣಿಗೂ ಹೀಗೆ ವಿಜ್ಞಾಪಿಸಿದಳು.

೧೮. ""ಇವನು ನನ್ನ ಗಂಡನಾಗಿದ್ದರೂ, ಯಾವ ಅಪರಾಧವನ್ನೂ ಮಾಡದಿರುವ ಅನಾಥೆಯಾದ ನನಗೆ ಊಟಬಟ್ಟೆ ಇತ್ಯಾದಿ ಏನನ್ನೂ ಕೊಡುತ್ತಿಲ್ಲ".

---

ತಸ್ಮಿನ್ನೇವ ಕ್ಷಣೇ ಚಾತ್ರ ಪ್ರವಿಶ್ಯಾರ್ತಾನುಕಂಪಿನಮ್ ।
ವತ್ಸರಾಜಂ ಪ್ರತೀಹಾರಮುಖ್ಯೋಽಕಸ್ಮಾದ್ ವ್ಯಜಿಜ್ಞಪತ್ ॥ ೧೨
ಆಗತಾ ದೇವ ವಿಜ್ಞಪ್ತ್ಯೈ ಕಾಪಿ ಸ್ತ್ರೀ ಬಾಂಧವೈರ್ವೃತಾ ।
ಪಂಚ ಪುತ್ರಾನ್ ಗೃಹೀತ್ವಾ ಸ್ವಮಾಕ್ಷಿಪ್ಯ ವಿವಶಂ ಪತಿಮ್ ॥ ೧೩
ತಚ್ಛ್ರುತ್ವಾ ನೃಪತಿರ್ದೇವೀಸ್ವಪ್ನಸಂವಾದವಿಸ್ಮಿತಃ ।
ಪ್ರವೇಶ್ಯತಾಮಿಹೈವೇತಿ ಪ್ರತೀಹಾರಂ ತಮಾದಿಶತ್ ॥ ೧೪
ಸ್ವಪ್ನಸತ್ಯತ್ವಸಂಜಾತಸತ್ಪುತ್ರಪ್ರಾಪ್ತಿನಿಶ್ಚಯಾ ।
ದೇವೀ ವಾಸವದತ್ತಾಪಿ ಸಾ ಸಂಪ್ರಾಪ ಪರಾಂ ಮುದಮ್ ॥ ೧೫
ಅಥ ದ್ವಾರೋನ್ಮುಖೈಃ ಸರ್ವೈರ್ವೀಕ್ಷ್ಯಮಾಣಾ ಸಕೌತುಕಮ್ ।
ಪ್ರತೀಹಾರಾಜ್ಞಯಾ ಯೋಷಿದ್ ಭರ್ತೃಯುಕ್ತಾ ವಿವೇಶ ಸಾ ॥ ೧೬
ಪ್ರವಿಶ್ಯಾಶ್ರಿತದೈನ್ಯಾ ಚ ಯಥಾಕ್ರಮಕೃತಾನತಿಃ ।
ಅಥ ಸಂಸದಿ ರಾಜಾನಂ ಸದೇವೀಕಂ ವ್ಯಜಿಜ್ಞಪತ್ ॥ ೧೭
ಅಯಂ ನಿರಪರಾಧಾಯಾ ಮಮ ಭರ್ತಾ ಭವನ್ನಪಿ ।
ನ ಪ್ರಯಚ್ಛತ್ಯನಾಥಾಯಾ ಭೋಜನಾಚ್ಛಾದನಾದಿಕಮ್ ॥ ೧೮

೧೯. ಇಷ್ಟನ್ನು ಅವಳು ಹೇಳಲು ಅವಳ ಗಂಡನು ಹೀಗೆ ಬಿನ್ನವಿಸಿದನು. ""ದೇವ, ಇವಳು ಸುಳ್ಳು ಹೇಳುತ್ತಿದ್ದಾಳೆ. ಬಂಧುಗಳ ಜೊತೆ ಸೇರಿ ಇವಳು ನನ್ನನ್ನು ಕೊಲ್ಲಿಸಲು ಅಪೇಕ್ಷಿಸುತ್ತಾಳೆ.

೨೦. ವರ್ಷದ ಕೊನೆಯವರೆಗೂ ನಾನು ಇವಳಿಗೆ ಎಲ್ಲವನ್ನೂ ಮೊದಲೇ ಕೊಟ್ಟಿದ್ದೇನೆ. ನಿಷ್ಪಕ್ಷಪಾತಿಗಳಾದ ಇವಳ ಬೇರೆ ಬಂಧುಗಳೇ ಈ ವಿಷಯದಲ್ಲಿ ನನಗೆ ಸಾಕ್ಷಿಗಳು."

೨೧. ಹೀಗೆ ಅವನು ಬಿನ್ನವಿಸಿದಾಗ ರಾಜನು ತಾನೇ ಹೇಳಿದನು. ""ರಾಣಿಯ ಕನಸಿನಲ್ಲಿ ಶೂಲಧಾರಿ ದೇವ ಶಿವನೇ ಸಾಕ್ಷ್ಯವನ್ನು ನುಡಿದಿದ್ದಾನೆ.

೨೨. ಆದ್ದರಿಂದ ಬೇರೆ ಸಾಕ್ಷಿಗಳಿಂದ ಏನಾಗಬೇಕಾಗಿದೆ ? ಇವಳಿಗೂ ಬಂಧುಗಳಿಗೂ ಶಿಕ್ಷೆಯಾಗಬೇಕು." ಹೀಗೆ ರಾಜನು ಹೇಳಿದಾಗ ಧೀಮಂತ ಯೌಗಂಧರಾಯಣ ನಿಂತೆಂದನು.

೨೩. "" ದೇವ, ಹಾಗಿದ್ದರೂ ಸಾಕ್ಷಿಗಳ ಮಾತನ್ನು ಕೇಳಿ ಹೇಗೆ ಉಚಿತವೋ ಹಾಗೆ ಮಾಡಬೇಕು. ಇದನ್ನು ತಿಳಿಯದ ಜನರು ಬೇರೆ ಯಾವ ರೀತಿಯಲ್ಲೂ ನಂಬುವುದಿಲ್ಲ."

೨೪. ಅದನ್ನು ಕೇಳಿ ಹಾಗೇ ಆಗಲಿ ಎಂದು ರಾಜನು ಸಾಕ್ಷಿಗಳನ್ನು ಆ ಕ್ಷಣದಲ್ಲೇ ಕರೆಸಿಕೊಂಡು ಕೇಳಿದಾಗ ಅವರು ಆ ಹೆಂಗಸೇ ಸುಳ್ಳು ಹೇಳುತ್ತಿದ್ದಾಳೆ ಎಂದರು.

---

ಇತ್ಯುಕ್ತವತ್ಯಾಂ ತಸ್ಯಾಂ ಚ ಸ ತದ್ಭರ್ತಾ ವ್ಯಜಿಜ್ಞಪತ್ ।
ದೇವ ಮಿಥ್ಯಾ ವದತ್ಯೇಷಾ ಸಬಂಧುರ್ಮದ್ವಧೈಷಿಣೀ ॥ ೧೯
ಆ ವತ್ಸರಾಂತಂ ಸರ್ವಂ ಹಿ ದತ್ತಮಸ್ಯಾ ಮಯಾಗ್ರತಃ ।
ಏತದ್ಬಂಧವ ಏವಾನ್ಯೇ ತಟಸ್ಥಾ ಮೇऽತ್ರ ಸಾಕ್ಷಿಣಃ ॥ ೨೦
ಏವಂ ವಿಜ್ಞಾಪಿತಸ್ತೇನ ರಾಜಾ ಸ್ವಯಮಭಾಷತ ।
ದೇವೀ ಸ್ವಪ್ನೇ ಕೃತಂ ಸಾಕ್ಷ್ಯಂ ದೇವೇನೈವಾತ್ರ ಶೂಲಿನಾ ॥ ೨೧
ತತ್ಕಿಂ ಸಾಕ್ಷಿಭಿರೇಷೈವ ನಿಗ್ರಾಹ್ಯಾ ಸ್ತ್ರೀ ಸಬಾಂಧವಾ ।
ಇತಿ ರಾಜ್ಞೋದಿತೇऽವಾದೀದ್ ಧೀಮಾನ್ ಯೌಗಂಧರಾಯಣಃ ॥ ೨೨
ತಥಾಪಿ ಸಾಕ್ಷಿವಚನಾತ್ ಕಾರ್ಯಂ ದೇವ ಯಥೋಚಿತಮ್ ।
ಲೋಕೋ ಹ್ಯೇತದಜಾನಾನೋ ನ ಪ್ರತೀಯಾತ್ ಕಥಂಚನ ॥ ೨೩
ತಚ್ಛ್ರುತ್ವಾ ಸಾಕ್ಷಿಣೋ ರಾಜ್ಞಾ ತಥೇತ್ಯಾನಾಯ್ಯ ತತ್ಕ್ಷಣಮ್ ।
ಪೃಷ್ಟಾಃ ಶಶಂಸುಸ್ತೇ ಚಾತ್ರ ತಾಂ ಮಿಥ್ಯಾವಾದಿನೀಂ ಸ್ತ್ರಿಯಮ್ ॥ ೨೪

೨೫. ಒಳ್ಳೆಯ ಗಂಡನಿಗೆ ದ್ರೋಹ ಮಾಡಿದುದು ಸಿದ್ಧವಾಗಲು ರಾಜನು ಅವಳನ್ನೂ ಅವಳ ಬಂಧುಗಳನ್ನೂ ಅವಳ ಮಕ್ಕಳನ್ನೂ ದೇಶದಿಂದ ಆಚೆ ಓಡಿಸಿದನು.

೨೬. ದಯೆಯಿಂದ ನೆನೆದ ಮನಸ್ಸಿನ ವತ್ಸರಾಜನು ಸಾಧು ಸ್ವಭಾವದ ಅವಳ ಗಂಡನಿಗೆ ಇನ್ನೊಂದು ಮದುವೆಯನ್ನು ಮಾಡಿಕೊಳ್ಳಲು ಸಾಕಾಗುವಷ್ಟು ಧನವನ್ನು ಹೇರಳವಾಗಿ ಕೊಟ್ಟು ಕಳುಹಿಸಿದನು.

೨೭. ದುರ್ದಶೆ ಎಂಬ ಹೊಂಡದಲ್ಲಿ ಬಿದ್ದು ಕಂಗೆಟ್ಟ ಗಂಡನನ್ನು ಕ್ರೂರ ಸ್ವಭಾವದ ಕೆಟ್ಟ ಹೆಂಡತಿಯು ಹೆಣ್ಣು ಕಾಗೆಯಂತೆ ಅವನು ಬದುಕಿರುವಾಗಲೇ ಕುಕ್ಕಿ ಹಿಂಸಿಸುತ್ತಾಳೆ.

೨೮. ಸ್ನೇಹಮಯಿಯೂ, ಒಳ್ಳೆಯ ಕುಲದಲ್ಲಿ ಹುಟ್ಟಿದವಳೂ, ದೊಡ್ಡ ಮನಸ್ಸಿನವಳೂ, ತಾಪವನ್ನು ಕಳೆಯುವವಳೂ, ಸನ್ಮಾರ್ಗದಲ್ಲಿರುವವಳೂ ಆದ ಮಡದಿಯು ದಾರಿಯಲ್ಲಿರುವ ಮರದ ನೆರಳಿನಂತೆ. ಅಂತಹ ಮಡದಿಯನ್ನು ಪುಣ್ಯಗಳಿಂದ ಯಾವನೋ (ಧನ್ಯನು) ಪಡೆದುಕೊಳ್ಳುತ್ತಾನೆ.

೨೯. ಇತ್ಯಾದಿಯಾಗಿ ಈ ಪ್ರಸಂಗದಿಂದ ಹೇಳುತ್ತಿದ್ದ ರಾಜನಿಗೆ ಪಕ್ಕದಲ್ಲೇ ಇದ್ದ ಕಥಾಕುಶಲ ವಸಂತಕನು ಹೇಳಿದನು.

೩೦. "ದೇವ, ಮನುಷ್ಯರಿಗೆ ಸ್ನೇಹ ಅಥವಾ ದ್ವೇಷವು ಹಿಂದಿನ ಜನ್ಮದ ವಾಸನೆಗಳ ಅಭ್ಯಾಸದ ಕಾರಣದಿಂದಲೇ ಹೆಚ್ಚಾಗಿ ಉಂಟಾಗುವುದು.

---

ತತಃ ಪ್ರಖ್ಯಾತಸದ್ಭರ್ತೃದ್ರೋಹಾಮೇತಾಂ ಸಬಾಂಧವಾಮ್ ।
ಸಪುತ್ರಾಂ ಚ ಸ ವತ್ಸೇಶಃ ಸ್ವದೇಶಾನ್ನಿರಕಾಸಯತ್ ॥ ೨೫
ವಿಸಸರ್ಜ ಚ ತಂ ಸಾಧುಂ ತದ್ಭರ್ತಾರಂ ದಯಾರ್ದ್ರಧೀಃ ।
ವಿವಾಹಾಂತರಪರ್ಯಾಪ್ತಂ ವಿತೀರ್ಯ ವಿಪುಲಂ ವಸು ॥ ೨೬
ಪುಮಾಂಸಮಾಕುಲಂ ಕ್ರೂರಾ ಪತಿತಂ ದುರ್ದಶಾವಟೇ ।
ಜೀವಂತಮೇವ ಕುಷ್ಣಾತಿ ಕಾಕೀವ ಕುಕುಟುಂಬಿನೀ ॥ ೨೭
ಸ್ನಿಗ್ಧಾ ಕುಲೀನಾ ಮಹತೀ ಗೃಹಿಣೀ ತಾಪಹಾರಿಣೀ ।
ತರುಚ್ಛಾಯೇವ ಮಾರ್ಗಸ್ಥಾ ಪುಣ್ಯೈಃ ಕಸ್ಯಾಪಿ ಜಾಯತೇ ॥ ೨೮
ಇತಿ ಚೈತತ್ ಪ್ರಸಂಗೇನ ವದಂತಂ ತಂ ಮಹೀಪತಿಮ್ ।
ವಸಂತಕಃ ಸ್ಥಿತಃ ಪಾರ್ಶ್ವೇ ಕಥಾಪಟುರವೋಚತ ॥ ೨೯
ಕಿಂ ಚ ದೇವ ವಿರೋಧೋ ವಾ ಸ್ನೇಹೋ ವಾಪೀಹ ದೇಹಿನಾಮ್ ।
ಪ್ರಾಗ್ಜನ್ಮವಾಸಾಭ್ಯಾಸವಶಾತ್ ಪ್ರಾಯೇಣ ಜಾಯತೇ ॥ ೩೦

## ಸಿಂಹಪರಾಕ್ರಮನ ಕಥೆ

೩೧. ಇದರ ಬಗೆಗೆ ಒಂದು ಕಥೆಯನ್ನು ಬಣ್ಣಿಸುತ್ತೇನೆ, ಕೇಳು. ವಾರಾಣಸಿಯಲ್ಲಿ ವಿಕ್ರಮಚಂಡ ಎಂಬ ರಾಜನಿದ್ದನು.

೩೨. ಅವನಿಗೆ ಸಿಂಹಪರಾಕ್ರಮ ಎಂಬ ಹೆಸರಿನ ಸೇವಕನು ಪ್ರೀತಿಪಾತ್ರನಾಗಿದ್ದನು. ಆ ಸಿಂಹಪರಾಕ್ರಮನು ಕಾಳಗದಲ್ಲಿ ಗೆಲ್ಲುವಂತೆ ಎಲ್ಲ ಜೂಜಿನಲ್ಲೂ ಅಪ್ರತಿಮನಾಗಿ ಗೆಲ್ಲುತ್ತಿದ್ದನು.

೩೩ ಅವನ ಹೆಂಡತಿ ಶರೀರದಲ್ಲೂ, ಭಾವನೆಯಲ್ಲೂ ಅತ್ಯಂತ ವಕ್ರಳಾಗಿ, ಅನ್ವರ್ಥವಾದ ಕಲಹಕಾರಿ (ಜಗಳಗಂಟಿ) ಎಂಬ ಹೆಸರಿನಿಂದ ಪ್ರಖ್ಯಾತಳಾಗಿದ್ದಳು.

೩೪. ಸಿಂಹಪರಾಕ್ರಮನು ರಾಜನಿಂದಲೂ ಜೂಜಿನಿಂದಲೂ ಬೇಕಾದಷ್ಟು ಹಣವನ್ನು ಗಳಿಸಿ ಗಳಿಸಿ ಆ ಹೆಂಡತಿಗೆ ಕೊಡುತ್ತಿದ್ದನು.

೩೫ ಆ ಮೋಸಗಾರ್ತಿಯು ಅವನಿಂದ ಹುಟ್ಟಿದ ಮೂವರು ಮಕ್ಕಳೊಡನೆ ಇದ್ದರೂ ಒಂದು ಕ್ಷಣ ಕೂಡ ಜಗಳ ಮಾಡದೆ ಸುಮ್ಮನಿರುತ್ತಿರಲಿಲ್ಲ.

೩೬ "ಹೊರಗಡೆ ನೀನು ತಿನ್ನುತ್ತೀ, ಕುಡಿಯುತ್ತೀ, ನಮಗೆ ಏನನ್ನೂ ಕೊಡುವುದಿಲ್ಲ' ಎಂದು ಕಿರಿಚುತ್ತಾ ಮಕ್ಕಳ ಜೊತೆಯಲ್ಲಿ ಅವಳು ಅವನನ್ನು ಯಾವಾಗಲೂ ನೋಯಿಸುತ್ತಿದ್ದಳು.

---

ತಥಾ ಚ ಶ್ರೂಯತಾಮತ್ರ ಕಥೇಯಂ ವರ್ಣ್ಯತೇ ಮಯಾ ।
ಆಸೀದ್ ವಿಕ್ರಮಚಂಡಾಖ್ಯೋ ವಾರಾಣಸ್ಯಾಂ ಮಹೀಪತಿಃ ॥ ೩೧
ತಸ್ಯಾಭೂದ್ ವಲ್ಲಭೋ ಭೃತ್ಯೋ ನಾಮ್ನಾ ಸಿಂಹಪರಾಕ್ರಮಃ ।
ಯೋ ರಣೇಷ್ವಿವ ಸರ್ವೇಷು ದ್ಯೂತೇಷ್ವಪ್ಯಸಮೋ ಜಯೀ ॥ ೩೨
ತಸ್ಯಾಭವಚ್ಚ ವಿಕೃತಾ ವಪುಷೀವಾಶಯೇಽಪ್ಯಲಮ್ ।
ಖ್ಯಾತಾ ಕಲಹಕಾರೀತಿ ನಾಮ್ನಾನ್ವರ್ಥೇನ ಗೇಹಿನೀ ॥ ೩೩
ಸ ತಸ್ಯಾಃ ಸತತಂ ಭೂರಿ ರಾಜತೋ ದ್ಯೂತತಸ್ತಥಾ ।
ಪ್ರಾಪ್ಯ ಪ್ರಾಪ್ಯ ಧನಂ ಧೀರಃ ಸರ್ವಮೇವ ಸಮಾರ್ಪಯತ್ ॥ ೩೪
ಸಾ ತು ತಸ್ಯ ಸಮುತ್ಪನ್ನಪುತ್ರತ್ರಯಯುತಾ ಶಠಾ ।
ತಥಾಪಿ ಕ್ಷಣಮಪ್ಯೇಕಂ ನ ತಸ್ಥೌ ಕಲಹಂ ವಿನಾ ॥ ೩೫
ಬಹಿಃ ಪಿಬಸಿ ಭುಂಕ್ಷೇ ಚ ನೈವ ಕಿಂಚಿದ್ ದದಾಸಿ ನಃ ।
ಇತ್ಯಾರಟಂತೀ ಸಸುತಾ ಸಾ ತಂ ನಿತ್ಯಮತಾಪಯತ್ ॥ ೩೬

೩೭ ಹಗಲೂ ಇರುಳೂ ಊಟ, ಪಾನ, ಬಟ್ಟೆಗಳನ್ನು ಕೊಟ್ಟು ಒಲಿಸಿಕೊಂಡರೂ ಕೊನೆಯಲ್ಲಿ ಪೀಡೆಯನ್ನು ಕೊಡುವ ಭೋಗದ ತೃಷೆಯಂತೆ ಅವಳು ಸದಾ ಉರಿದು ಬೀಳುತ್ತಿದ್ದಳು.

೩೮. ಸಿಂಹಪರಾಕ್ರಮನು ಅವಳ ಕೋಪದಿಂದ ಖಿನ್ನನಾಗಿ ಕ್ರಮೇಣ ಆ ಮನೆಯನ್ನೇ ಬಿಟ್ಟು ವಿಂಧ್ಯವಾಸಿನೀ ದೇವತೆಯನ್ನು ಕಾಣಲು ಹೊರಟು ಹೋದನು.

೩೯. ಉಪವಾಸದಲ್ಲಿದ್ದ ಅವನಿಗೆ ದೇವಿಯು ಕನಸಿನಲ್ಲಿ ಹೀಗೆ ಆಜ್ಞಾಪಿಸಿದಳು. "ಮಗನೆ, ಎದ್ದೇಳು. ವಾರಾಣಸೀ ಪಟ್ಟಣಕ್ಕೇ ಹೋಗು.

೪೦. ಅಲ್ಲಿ ಎಲ್ಲ ಮರಗಳಿಗಿಂತಲೂ ದೊಡ್ಡದಾದ ಒಂದು ಆಲದ ಮರವಿದೆ. ಅದರ ಬೇರಿನ ಬಳಿ ಅಗೆದರೆ ನಿನಗೆ ದೊಡ್ಡ ನಿಧಿಯು ದೊರಕುವುದು.

೪೧. ಅದರ ಮಧ್ಯದಲ್ಲಿ ಗರುಡಮಣಿಯಿಂದ ಮಾಡಿದ, ಖಡ್ಗದಂತೆ ನಿರ್ಮಲವಾದ, ಮೇಲಿನಿಂದ ಕಳಚಿಬಿದ್ದ ಆಕಾಶದ ತುಂಡಿನಂತೆ ಕಾಣಿಸುವ ಒಂದು ಪಾತ್ರೆಯೂ ನಿನಗೆ ಸಿಗುವುದು.

೪೨. ಅದರೊಳಗೆ ಕಣ್ಣನ್ನು ಹಾಯಿಸಿದರೆ ನೀನು ತಿಳಿದುಕೊಳ್ಳಲು ಅಪೇಕ್ಷಿಸಿದ ಯಾವುದೇ ಜೀವದ ಹಿಂದಿನ ಜನ್ಮವನ್ನು ಅಲ್ಲೇ ಪ್ರತಿಬಿಂಬಿತವಾದಂತೆ ಕಾಣುವೆ.

---

ಪ್ರಸಾದ್ಯಮಾನಾಪ್ಯಾಹಾರಪಾನವಸ್ತ್ರೈರಹರ್ನಿಶಮ್ ।
ದುರಂತಾ ಭೋಗತೃಷ್ಣೇವ ಭೃಶಂ ಜಜ್ವಾಲ ತಸ್ಯ ಸಾ ॥ ೩೭
ತತಃ ಕ್ರಮೇಣ ತನ್ಮನ್ಯುಖಿನ್ನಸ್ತ್ಯಕ್ತ್ವೈವ ತದ್ಗೃಹಮ್ ।
ಸ ವಿಂಧ್ಯವಾಸಿನೀಂ ದ್ರಷ್ಟುಮಗಾತ್ ಸಿಂಹಪರಾಕ್ರಮಃ ॥ ೩೮
ಸಾ ತಂ ಸ್ವಪ್ನೇ ನಿರಾಹಾರಸ್ಥಿತಂ ದೇವೀ ಸಮಾದಿಶತ್ ।
ಉತ್ತಿಷ್ಠ ಪುತ್ರ ತಾಮೇವ ಗಚ್ಛ ವಾರಾಣಸೀಂ ಪುರೀಮ್ ॥ ೩೯
ತತ್ರ ಸರ್ವಮಹಾನೇಕೋ ಯೋऽಸ್ತಿ ನ್ಯಗ್ರೋಧಪಾದಪಃ ।
ತನ್ಮೂಲಾತ್ ಖನ್ಯಮಾನಾತ್ ತ್ವಂ ಸ್ವೈರಂ ನಿಧಿಮವಾಪ್ಸ್ಯಸಿ ॥ ೪೦
ತನ್ಮಧ್ಯಾಲ್ಲಪ್ಸ್ಯಸೇ ಚೈಕಂ ನಭಃಖಂಡಮಿವ ಚ್ಯುತಮ್ ।
ಪಾತ್ರಂ ಗರುಡಮಾಣಿಕ್ಯಮಯಂ ನಿಸ್ತ್ರಿಂಶನಿರ್ಮಲಮ್ ॥ ೪೧
ತತ್ರಾರ್ಪಿತೇಕ್ಷಣೋ ದ್ರಕ್ಷ್ಯಸ್ಯಂತಃ ಪ್ರತಿಮಿತಾಮಿವ ।
ಸರ್ವಸ್ಯ ಜಂತೋಃ ಪ್ರಾಗ್ಜಾತಿಂ ಯಾ ಸ್ಯಾಜ್ಜಿಜ್ಞಾಸಿತಾ ತವ ॥ ೪೨

೪೩. ಅದರಿಂದ ನಿನ್ನ ಮತ್ತು ನಿನ್ನ ಹೆಂಡತಿಯ ಪೂರ್ವಜನ್ಮವನ್ನು ತಿಳಿದುಕೊಂಡು ನಿನಗೆ ಬೇಕಾದ ಐಶ್ವರ್ಯವನ್ನೂ ಪಡೆದು ದುಃಖವನ್ನೆಲ್ಲ ನೀಗಿಕೊಂಡು ಸುಖವಾಗಿ ಜೀವಿಸುವೆ."

೪೪. ಹೀಗೆ ದೇವಿಯು ಹೇಳಿದ ಮೇಲೆ ಎಚ್ಚರಗೊಂಡ ಸಿಂಹವಿಕ್ರಮನು ಬೆಳಗ್ಗೆ ಪಾರಣೆಯನ್ನು ಮಾಡಿ ವಾರಾಣಸಿಯ ಕಡೆಗೆ ಹೊರಟನು.

೪೫. ಹಾಗೆ ಹೋಗಿ ಆ ಪಟ್ಟಣಕ್ಕೆ ತಲುಪಿ ಆ ಆಲದಮರದ ಬುಡದಿಂದ ನಿಧಿಯನ್ನೂ ಅದರ ಮಧ್ಯದಲ್ಲಿ ಮಣಿಮಯವಾದ ದೊಡ್ಡ ಪಾತ್ರೆಯನ್ನೂ ತೆಗೆದು ಕೊಂಡನು.

೪೬. ಪೂರ್ವಜನ್ಮವನ್ನು ತಿಳಿದುಕೊಳ್ಳಲು ಬಯಸಿದವನಾಗಿ ಆ ಪಾತ್ರೆಯಲ್ಲಿ ನೋಡಿ ಹಿಂದಿನ ಜನ್ಮದಲ್ಲಿ ತಾನು ಸಿಂಹ ಮತ್ತು ತನ್ನ ಹೆಂಡತಿ ಘೋರವಾದ ಋಕ್ಷಿ (ಹಸು) ಆಗಿದ್ದುದನ್ನು ನೋಡಿದನು.

೪೭. ತನಗೂ ಹೆಂಡತಿಗೂ ಇದ್ದ ದ್ವೇಷವು ಹಿಂದಿನ ಜನ್ಮದ ಮಹಾವೈರದ ವಾಸನೆಯಿಂದ ಸ್ಥಿರವಾಗಿದೆ ಎಂಬುದನ್ನು ಅರಿತುಕೊಂಡು ಅವನು ದುಃಖವನ್ನೂ ಮೋಹವನ್ನೂ ಬಿಟ್ಟನು.

---

ತೇನೈವ ಬುದ್ಧ್ವಾ ಭಾರ್ಯಾಯಾಃ ಪೂರ್ವಜಾತಿಂ ತಥಾತ್ಮನಃ ।
ಅವಾಪ್ತಾರ್ಥಃ ಸುಖೀ ತತ್ರ ಗತಖೇದೋ ಭವಿಷ್ಯಸಿ ॥ ೪೩
ಏವಮುಕ್ತಶ್ಚ ದೇವ್ಯಾ ಸಃ ಪ್ರಬುದ್ಧಃ ಕೃತಪಾರಣಃ ।
ವಾರಾಣಸೀಂ ಪ್ರತಿ ಪ್ರಾಯಾತ್ ಪ್ರಾತಃ ಸಿಂಹಪರಾಕ್ರಮಃ ॥ ೪೪
ಗತ್ವಾ ಚ ತಾಂ ಪುರೀಂ ಪ್ರಾಪ್ಯ ತಸ್ಮಾನ್ನ್ಯಗ್ರೋಧಮೂಲತಃ ।
ಲೇಭೇ ನಿಧಾನಂ ತನ್ಮಧ್ಯಾತ್ ಪಾತ್ರಂ ಮಣಿಮಯಂ ಮಹತ್ ॥
೪೫

ಅಪಶ್ಯಚ್ಚಾತ್ರ ಜಿಜ್ಞಾಸುಃ ಪಾತ್ರೇ ಪೂರ್ವತ್ರ ಜನ್ಮನಿ ।
ಘೋರಾಮೃಕ್ಷೀಂ ಸ್ವಭಾರ್ಯಾಂ ತಾಮಾತ್ಮಾನಂ ಚ ಮೃಗಾಧಿಪಮ್ ॥ ೪೬
ಪೂರ್ವಜಾತಿಮಹಾವೈರವಾಸನಾನಿಶ್ಚಲಂ ತತಃ ।
ಬುದ್ಧ್ವಾ ಭಾರ್ಯಾತ್ಮನೋರ್ದ್ವೇಷಂ ಶೋಕಮೋಹೌ ಮುಮೋಚ ಸಃ ॥
೪೭

೪೮–೪೯. ಅಲ್ಲಿ ಪಾತ್ರೆಯ ಪ್ರಭಾವದಿಂದ ಪೂರ್ವಜನ್ಮಗಳಲ್ಲಿ ಬೇರೆ ಬೇರೆ ಜಾತಿಯವರಾಗಿದ್ದ ಕನ್ಯೆಯರೆಲ್ಲರನ್ನೂ ಗುರುತಿಸಿ ಅವರನ್ನು ಬಿಟ್ಟು ಜನ್ಮಾಂತರದಲ್ಲಿ ಹೆಣ್ಣು ಸಿಂಹವಾಗಿದ್ದ ಸಿಂಹಶ್ರೀ ಎಂಬ ಕನ್ಯೆಯನ್ನು ಚೆನ್ನಾಗಿ ಆಲೋಚಿಸಿ ತಿಳಿದು ಎರಡನೆಯ ಹೆಂಡತಿಯನ್ನಾಗಿ ಸಿಂಹಪರಾಕ್ರಮನು ಮದುವೆ ಮಾಡಿಕೊಂಡನು.

೫೦. ಆ ಕಲಹಕಾರಿಯನ್ನೂ ಒಂದು ಗ್ರಾಸಭಾಗಕ್ಕೆ ಹಕ್ಕುದಾರಳನ್ನಾಗಿ ಮಾಡಿ ನಿಧಿಯ ಲಾಭದಿಂದ ಸುಖವಾಗಿ ಹೊಸ ಹೆಂಡತಿಯ ಜೊತೆಯಲ್ಲಿ ಇದ್ದನು.

೫೧. ರಾಜನೇ, ಹೀಗೆ ಜನರಿಗೆ ಹೆಂಡತಿ ಮುಂತಾದವರೂ ಈ ಪ್ರಪಂಚದಲ್ಲಿ ಹಿಂದಿನ ಸಂಸ್ಕಾರದ ಪ್ರಭಾವದಿಂದ ವೈರವನ್ನೂ ಸ್ನೇಹವನ್ನೂ ಹೊಂದಿರುತ್ತಾರೆ."

೫೨. ದೇವಿ ವಾಸವದತ್ತೆಯೊಡನೆ ಇದ್ದ ವತ್ಸರಾಜನು ವಸಂತಕನಿಂದ ಈ ವಿಚಿತ್ರವಾದ ಕಥೆಯನ್ನು ಕೇಳಿ ತುಂಬ ಸಂತೋಷಪಟ್ಟನು.

೫೩–೫೪. ಗರ್ಭದಿಂದ ಕಂಗೊಳಿಸುತ್ತಿದ್ದ ದೇವಿಯ ಮುಖಚಂದ್ರನ ದರ್ಶನವನ್ನು ಹಗಲೂ ರಾತ್ರಿಯೂ ಮಾಡುತ್ತಿದ್ದರೂ ರಾಜನಿಗೆ ತೃಪ್ತಿಯೇ ಇರಲಿಲ್ಲ. ಹೀಗೆ ದಿನಗಳು ಕಳೆಯುತ್ತಿದ್ದಾಗ ಕ್ರಮವಾಗಿ ಎಲ್ಲ ಮಂತ್ರಿಗಳಿಗೂ ಮುಂದೆ ಆಗುವ ಶುಭದ ಸೂಚಕರಾಗಿ ಒಳ್ಳೆಯ ಲಕ್ಷಣಗಳುಳ್ಳ ಮಕ್ಕಳು ಹುಟ್ಟಿದರು.

---

ಅಥ ಬಹ್ವೀಃ ಪರಿಜ್ಞಾತಾಸ್ತತ್ರ ಪಾತ್ರಪ್ರಭಾವತಃ ।
ಪ್ರಾಗ್ಜನ್ಮಭಿನ್ನಜಾತೀಯಾಃ ಪರಿಹೃತ್ಯೈವ ಕನ್ಯಕಾಃ ॥ ೪೮
ತುಲ್ಯಾಂ ಜನ್ಮಾಂತರೇ ಸಿಂಹೀಂ ಪರಿಣಿನ್ಯೇ ವಿಚಿಂತ್ಯ ಸಃ ।
ಭಾರ್ಯಾಂ ದ್ವಿತೀಯಾಂ ಸಿಂಹಶ್ರೀನಾಮ್ನೀಂ ಸಿಂಹಪರಾಕ್ರಮಃ ॥ ೪೯
ಕೃತ್ವಾ ಕಲಹಕಾರೀಂ ಚ ತಾಂ ಸ ಗ್ರಾಸೈಕಭಾಗಿನೀಮ್ ।
ನಿಧಾನಪ್ರಾಪ್ತಿಸುಖಿತಸ್ತಸ್ಥೌ ನವವಧೂಸಖಃ ॥ ೫೦
ಇತ್ಥಂ ದಾರಾದಯೋ಼ಪೀಹ ಭವಂತಿ ಭುವನೇ ನೃಣಾಮ್ ।
ಪ್ರಾಕ್ಸಂಸ್ಕಾರವಶಾಯಾತವೈರಸ್ನೇಹಾ ಮಹೀಪತೇ ॥ ೫೧
ಇತ್ಯಾಕರ್ಣ್ಯ ಕಥಾಂ ಚಿತ್ರಾಂ ವತ್ಸರಾಜೋ ವಸಂತಕಾತ್ ।
ಭೃಶಂ ತುತೋಷ ಸಹಿತೋ ದೇವ್ಯಾ ವಾಸವದತ್ತಯಾ ॥ ೫೨
ಏವಂ ದಿನೇಷು ಗಚ್ಛತ್ಸು ರಾಜ್ಞಸ್ತಸ್ಯ ದಿವಾನಿಶಮ್ ।
ಅತೃಪ್ತಸ್ಯ ಲಸದ್ಗರ್ಭದೇವೀವಕ್ತ್ರೇಂದುದರ್ಶನೇ ॥ ೫೩
ಮಂತ್ರಿಣಾಮುದಪದ್ಯಂತ ಸರ್ವೇಷಾಂ ಶುಭಲಕ್ಷಣಾಃ ।
ಕ್ರಮೇಣ ತನಯಾಸ್ತತ್ರ ಭಾವಿಕಲ್ಯಾಣಸೂಚಕಾಃ ॥ ೫೪

೫೫. ಮೊದಲು ಮುಖ್ಯಮಂತ್ರಿ ಯೌಗಂಧರಾಯಣನಿಗೆ ಮರುಭೂತಿ ಎಂಬ ಮಗನು ಹುಟ್ಟಿದನು.

೫೬. ಆಮೇಲೆ ರುಮಣ್ವಂತನಿಗೆ ಹರಿಶಿಖ ಎಂಬ ಹೆಸರಿನ ಮಗನು ಹುಟ್ಟಿದನು. ಅನಂತರ ವಸಂತಕನಿಗೆ ತಪಂತಕ ಎಂಬ ಮಗನು ಜನಿಸಿದನು.

೫೭. ಆಮೇಲೆ ಇತ್ಯಕ ಎಂಬ ಮತ್ತೊಂದು ಹೆಸರಿದ್ದ ನಿತ್ಯೋದಿತನೆಂಬ ದ್ವಾರಪಾಲಕಾಧಿಕಾರಿಗೆ ಗೋಮುಖ ಎಂಬ ಮಗನು ಹುಟ್ಟಿದನು.

೫೮–೫೯. ಅವರು ಹುಟ್ಟಿದಾಗ ದೊಡ್ಡ ಉತ್ಸವ ನಡೆಯುತ್ತಿರಲು ಆಕಾಶದಿಂದ "ಮುಂದಿನ ಚಕ್ರವರ್ತಿಯಾಗುವ ವತ್ಸರಾಜನ ಮಗನಿಗೆ ಇವರು ವೈರಿವಂಶಗಳನ್ನು ಧ್ವಂಸ ಮಾಡುವ ಮಂತ್ರಿಗಳಾಗುವರು" ಎಂಬ ಅಶರೀರವಾಣಿಯು ಮೊಳಗಿತು.

೬೦. ದಿವಸಗಳು ಕಳೆದ ಮೇಲೆ ವತ್ಸರಾಜನ ರಾಣಿ ವಾಸವದತ್ತೆಗೆ ಹೆರಿಗೆಯಾಗುವ ಕಾಲವು ಸಮೀಪಿಸಿತು.

೬೧. ಪುತ್ರವತಿಯರಾದ ಹೆಂಗಸರು ಅಲಂಕರಿಸಿದ, ಎಕ್ಕ ಮತ್ತು ಬನ್ನಿ ಎಲೆಗಳಿಂದ ಗವಾಕ್ಷಿಗಳನ್ನು ಮುಚ್ಚಲಾಗಿದ್ದ, ಅಚ್ಚರಿಗೊಳಿಸುವ ಪ್ರಸವಗೃಹದಲ್ಲಿ ಅವಳು ತಂಗಿದಳು.

---

ಪ್ರಥಮಂ ಮಂತ್ರಿಮುಖ್ಯಸ್ಯ ಜಾಯತೇ ಸ್ಮ ಕಿಲಾತ್ಮಜಃ ।
ಯೌಗಂಧರಾಯಣಸ್ಯೈವ ಮರುಭೂತಿರಿತಿ ಶ್ರುತಃ ॥ ೫೫
ತತೋ ರುಮಣ್ವತೋ ಜಜ್ಞೇ ಸುತೋ ಹರಿಶಿಖಾಭಿಧಃ ।
ವಸಂತಕಸ್ಯಾಪ್ಯುತ್ಪೇದೇ ತನಯೋಽಥ ತಪಂತಕಃ ॥ ೫೬
ತತೋ ನಿತ್ಯೋದಿತಾಖ್ಯಸ್ಯ ಪ್ರತೀಹಾರಾಧಿಕಾರಿಣಃ ।
ಇತ್ಯಕಾಪರಸಂಜ್ಞಸ್ಯ ಪುತ್ರೋಽಜಾಯತ ಗೋಮುಖಃ ॥ ೫೭
ವತ್ಸರಾಜಸುತಸ್ಯೇಹ ಭಾವಿನಶ್ಚಕ್ರವರ್ತಿನಃ ।
ಮಂತ್ರಿಣೋಽಮೀ ಭವಿಷ್ಯಂತಿ ವೈರಿವಂಶಾವಮರ್ದಿನಃ ॥ ೫೮
ಇತಿ ತೇಷು ಚ ಜಾತೇಷು ವರ್ತಮಾನೇ ಮಹೋತ್ಸವೇ ।
ತತ್ರಾಶರೀರಾ ನಭಸೋ ನಿಃಸಸಾರ ಸರಸ್ವತೀ ॥ ೫೯
ದಿವಸೇಷ್ವಥ ಯಾತೇಷು ವತ್ಸರಾಜಸ್ಯ ತಸ್ಯ ಸಾ ।
ದೇವೀ ವಾಸವದತ್ತಾಭೂದಾಸನ್ನ ಪ್ರಸವೋದಯಾ ॥ ೬೦
ಅಧ್ಯಾಸ್ತ ಸಾ ಚ ತಚ್ಚಿತ್ರಂ ಪುತ್ರಿಣೀಭಿಃ ಪರಿಷ್ಕೃತಮ್ ।
ಜಾತವಾಸಗೃಹಂ ಸಾರ್ಕಶಮೀಗುಪ್ತಗವಾಕ್ಷಕಮ್ ॥ ೬೧

೬೨. ಗರ್ಭವನ್ನು ರಕ್ಷಿಸಲು ಸಮರ್ಥವಾದ ತೇಜಸ್ಸನ್ನು ಹೊರ ಹೊಮ್ಮಿಸುತ್ತಿವೆಯೋ ಎಂಬಂತಹ ರತ್ನದೀಪಗಳ ಬೆಳಕಿನ ಸಂಪರ್ಕದಿಂದ ಮಂಗಳಕರವಾಗಿದ್ದ ಅನೇಕ ಪ್ರಕಾರದ ಆಯುಧಗಳಿಂದ ಆ ವಾಸಗೃಹವು ಆವೃತವಾಗಿತ್ತು.

೬೩. ಮಂತ್ರಿಗಳು ಪ್ರಯೋಗಿಸಿದ ಅನೇಕ ಮಂತ್ರಗಳಿಂದಲೂ ತಂತ್ರಗಳಿಂದಲೂ ಆ ಮನೆಯು ರಕ್ಷಿತವಾಗಿದ್ದು, ಯಾವ ಪಾಪವೂ ಜಯಿಸಲಾಗದ ಮಾತೃಗಣದ ದುರ್ಗದಂತೆ ಆಗಿತ್ತು.

೬೪. ನಿರ್ಮಲವಾದ ಅಮೃತಕಾಂತಿಯನ್ನು ಸೂಸುತ್ತಿದ್ದ ಚಂದ್ರನನ್ನು ಆಕಾಶವು ಹೊಮ್ಮಿಸುವಂತೆ ಅಲ್ಲಿ ವಾಸವದತ್ತೆಯು ನೋಡಲು ಆಕರ್ಷಕನಾದ ಕುವರನನ್ನು ಹೆತ್ತಳು.

೬೫. ಆ ಮಗು ಹುಟ್ಟಿದುದರಿಂದ ಬೆಳಗಿದುದು ಆ ವಾಸಗೃಹ ಮಾತ್ರವಲ್ಲ, ಅದರ ತಾಯಿಯ ಹೃದಯವೂ ಬೆಳಗಿ ದುಃಖದ ಕತ್ತಲೆಯಿಂದ ದೂರವಾಯಿತು.

೬೬. ಅಂತಃಪುರದ ನಿವಾಸಿಗಳ ಸಂತೋಷವು ಎಲ್ಲೆಲ್ಲೂ ಹರಡುತ್ತಿರಲು ವತ್ಸರಾಜನು ಮಗನ ಜನನವನ್ನು ಆಪ್ತಜನರಿಂದ ಕೇಳಿದನು.

೬೭. ಪ್ರಿಯವಾರ್ತೆಯನ್ನು ತಿಳಿಸಿದವನಿಗೆ ವತ್ಸರಾಜನು ತನ್ನ ರಾಜ್ಯವನ್ನೇ ಕೊಡದಿದ್ದುದು ಅನುಚಿತವಾದೀತು ಎಂಬ ಭಯದಿಂದ ಮಾತ್ರವೇ ವಿನಾ (ರಾಜ್ಯದಲ್ಲಿ ಅವನಿಗಿದ್ದ) ಆಸೆಯಿಂದಲ್ಲ.

---

ರತ್ನದೀಪಪ್ರಭಾಸಂಗಮಂಗಲ್ಯೈರ್ವಿವಿಧಾಯುಧೈಃ ।
ಗರ್ಭರಕ್ಷಾಕ್ಷಮಂ ತೇಜೋ ಜ್ವಲಯದ್ಭಿರಿವಾವೃತಮ್ ॥ ೬೨
ಮಂತ್ರಿಭಿಸ್ತಂತ್ರಿತಾನೇಕಮಂತ್ರತಂತ್ರಾದಿರಕ್ಷಿತಮ್ ।
ಜಾತಂ ಮಾತೃಗಣಸ್ಯೇವ ದುರ್ಗಂ ದುರಿತದುರ್ಜಯಮ್ ॥ ೬೩
ತತ್ರಾಸೂತ ಚ ಸಾ ಕಾಲೇ ಕುಮಾರಂ ಕಾಂತದರ್ಶನಮ್ ।
ದ್ಯೌರಿಂದುಮಿವ ನಿರ್ಗಚ್ಛದಚ್ಛಾಮೃತಮಯದ್ಯುತಿಮ್ ॥ ೬೪
ಯೇನ ಜಾತೇನ ನ ಪರಂ ಮಂದಿರಂ ತತ್ ಪ್ರಕಾಶಿತಮ್ ।
ಯಾವದ್‌ಧೃದಯಮಪ್ಯಸ್ಯಾ ಮಾತುರ್ನಿಃಶೋಕತಾಮಸಮ್ ॥ ೬೫
ತತಃ ಪ್ರಮೋದೇ ಪ್ರಸರತ್ಯತ್ರಾಂತಃಪುರವಾಸಿನಾಮ್ ।
ವತ್ಸೇಶಃ ಸುತಜನ್ಮೈತಚ್ಛುಶ್ರಾವಾಭ್ಯಂತರಾಜ್ಜನಾತ್ ॥ ೬೬
ತಸ್ಮೈ ಸ ರಾಜ್ಯಮಪಿ ಯತ್ ಪ್ರೀತಃ ಪ್ರಿಯನಿವೇದಿನೇ ।
ನ ದದೌ ತದನೌಚಿತ್ಯಭಯೇನ ನ ತು ತೃಷ್ಣಯಾ ॥ ೬೭

೬೮. ಬೇಗನೆ ಅಂತಃಪುರಕ್ಕೆ ಬಂದು ಮನಸ್ಸಿನ ಕುತೂಹಲವನ್ನು ಹತೋಟಿಗೆ ತಂದುಕೊಂಡು ಮಗನ್ನು ಕಂಡನು. ಎಷ್ಟೋ ಕಾಲದ ಅನಂತರ ಶಿವನ ಸಂಕಲ್ಪವು ಫಲಿಸಿತು.

೬೯. ಆ ಮಗುವಿನ ದಳದಂತಹ ತುಟಿಗಳು ಕೆಂಪಗೆ ನೀಳವಾಗಿದ್ದು, ಚಂಚಲವಾಗಿದ್ದ ಅದರ ನಸು ಕೂದಲು ಸುಂದರವಾದ ಕೇಸರಗಳಂತೆ ಇದ್ದುದರಿಂದ ಆ ಮಗುವಿನ ಮುಖ ಸಾಮ್ರಾಜ್ಯಲಕ್ಷ್ಮಿಯ ಲೀಲಾಕಮಲದಂತಿತ್ತು.

೭೦. ಅದರ ಮೃದುವಾದ ಪಾದಗಳಲ್ಲಿ ರಾಜಚಿಹ್ನೆಗಳಾದ ಛತ್ರ, ಚಾಮರ ಮುಂತಾದ ಲಾಂಛನಗಳು ಇದ್ದುವು. ಬೇರೆ ರಾಜರುಗಳ ಸಿರಿಯು ಆ ಲಾಂಛನಗಳೊಡನೆ ಇವನ ಭೀತಿಯಿಂದ ಮೊದಲೇ ಅವರನ್ನು ಬಿಟ್ಟು ಇವನ ಪಾದಗಳನ್ನು ಆಶ್ರಯಿಸಿದಳೋ ಎಂಬಂತೆ ಅವು ಕಾಣುತ್ತಿದ್ದುವು.

೭೧. (ರಾಜನು ಮಗುವನ್ನು ನೋಡಿದಾಗ) ಆನಂದದ ಮಹಾಪೂರದ ಒತ್ತಡದಿಂದ ಅರಳಿದ, ಸಂತಸದ ಕಂಬನಿಗಳಿಂದ ತುಂಬಿದ ಕಣ್ಣುಗಳಿಂದ ರಾಜನು ತನ್ನ ಒಲವನ್ನು ಮಗುವಿನ ಮೇಲೆ ಸುರಿಸುತ್ತಿರುವಂತೆ ತೋರುತ್ತಿತ್ತು.

೭೨. ಯೌಗಂಧರಾಯಣನೇ ಮುಂತಾದ ಮಂತ್ರಿಗಳೆಲ್ಲ ಆನಂದ ಪಡುತ್ತಿರಲು ಆ ಸಮಯದಲ್ಲಿ ಆಕಾಶದಿಂದ ವಾಣಿಯು ಹೀಗೆ ಮೊಳಗಿತು.

೭೩. "ದೊರೆಯೆ, ಕಾಮದೇವನ ಅವತಾರವಾಗಿ ಈ ನಿನ್ನ ಮಗನು ಹುಟ್ಟಿದ್ದಾನೆ. ಇವನ ಹೆಸರು 'ನರವಾಹನದತ್ತ' ಎಂಬುದನ್ನು ತಿಳಿದುಕೋ.

---

ಏತ್ಯ ಚಾಂತಃಪುರಂ ಸದ್ಯೋ ಬದ್ಧೌತ್ಸುಕ್ಯೇನ ಚೇತಸಾ ।
ಚಿರಾತ್ ಫಲಿತಸಂಕಲ್ಪಃ ಸ ದದರ್ಶ ಸುತಂ ನೃಪಃ ॥ ೬೮
ರಕ್ತಾಯತಾಧರದಲಂ ಚಲೋರ್ಣಾಚಾರುಕೇಸರಮ್ ।
ಮುಖಂ ದಧಾನಂ ಸಾಮ್ರಾಜ್ಯಲಕ್ಷ್ಮೀಲೀಲಾಂಬುಜೋಪಮಮ್ ॥ ೬೯
ಪ್ರಾಗೇವಾನ್ಯನೃಪಶ್ರೀಭಿರ್ಭೀತ್ಯೇವ ನೃಪಲಾಂಛನೈಃ ।
ಉಜ್ಝಿತೈರಂಕಿತಂ ಮೃದ್ವೋಃ ಪದಯೋಶ್ಛತ್ರಚಾಮರೈಃ ॥ ೭೦
ತತೋ ಹರ್ಷಭರಾಪೂರಪೀಡನೋತ್ಫುಲ್ಲಯಾ ದೃಶಾ ।
ಸಾಸ್ರಯಾ ಸ್ರವತೀವಾಸ್ಮಿನ್ ಸುತಸ್ನೇಹಂ ಮಹೀಪತೌ ॥ ೭೧
ನಂದತ್ಸ್ವಪಿ ಚ ಯೌಗಂಧರಾಯಣಾದಿಷು ಮಂತ್ರಿಷು ।
ಗಗನಾದುಚ್ಚಚಾರೈವಂ ಕಾಲೇ ತಸ್ಮಿನ್ ಸರಸ್ವತೀ ॥ ೭೨
ಕಾಮದೇವಾವತಾರೋಽಯಂ ರಾಜನ್ ಜಾತಸ್ತವಾತ್ಮಜಃ ।
ನರವಾಹನದತ್ತಂ ಚ ಜಾನೀಹ್ಯೇನಮಿಹಾಖ್ಯಯಾ ॥ ೭೩

೭೪. ಕಾರ್ಯಶೀಲನಾದ ಇವನು ಬಹುಬೇಗನೆ ಎಲ್ಲ ವಿದ್ಯಾಧರರಿಗೂ ಚಕ್ರವರ್ತಿಯಾಗಿ ದಿವ್ಯಕಲ್ಪದವರೆಗೂ ಇರುವನು."

೭೫. ಇಷ್ಟನ್ನು ಹೇಳಿ ವಾಣಿಯು ವಿರಮಿಸಿತು. ಆ ಕ್ಷಣದಲ್ಲೇ ಆಕಾಶದಿಂದ ಹೂಮಳೆ ಸುರಿಯಿತು. ದುಂದುಭಿಗಳ ಸದ್ದು ಎಲ್ಲೆಡೆ ಹರಡಿತು.

೭೬. ದೇವತೆಗಳು ಮಾಡಿದ ಈ ಉತ್ಸವದ ಆರಂಭದಿಂದ ಉತ್ಸಾಹವು ಹೆಚ್ಚಾಗಿ ರಾಜನೂ ತುಂಬ ಸಂತುಷ್ಟನಾಗಿ ದೊಡ್ಡ ಉತ್ಸವವನ್ನಾಚರಿಸಿದನು.

೭೭. ಅರಮನೆಯಿಂದ ಹೊಮ್ಮಿದ ವಾದ್ಯಶಬ್ದಗಳು ಎಲ್ಲ ವಿದ್ಯಾಧರರಿಗೂ ಅವರ ರಾಜನ ಜನನವನ್ನು ಹೇಳಲೋ ಎಂಬಂತೆ ಆಕಾಶದವರೆಗೂ ಹಬ್ಬಿದವು.

೭೮. ಅರಮನೆಗಳ ಮೇಲುಭಾಗಗಳಲ್ಲಿ ಗಾಳಿಯಿಂದ ಪ್ರೇರಿತವಾದ ಕೆಂಪು ಬಣ್ಣದ ಪತಾಕೆಗಳು ಪರಸ್ಪರ ಸಿಂದೂರವನ್ನು ಎರಚಾಡುತ್ತಿರುವಂತಿತ್ತು.

೭೯. ಶರೀರಸಹಿತವಾಗಿ ಮನ್ಮಥನು ಭೂಲೋಕದಲ್ಲಿ ಹುಟ್ಟಿದನು ಎಂಬ ಸಂತೋಷದಿಂದ ಧರೆಗಿಳಿದು ಬಂದ ದೇವಸ್ತ್ರೀಯರೋ ಎಂಬಂತಿದ್ದ ವಾರಾಂಗನೆಯರು ಹೆಜ್ಜೆ ಹೆಜ್ಜೆಗೂ ಕುಣಿಯುತ್ತಿದ್ದರು.

೮೦. ಉತ್ಸವವನ್ನು ಹಮ್ಮಿಕೊಂಡ ರಾಜನಿಂದ ಹೊಸಬಟ್ಟೆಗಳನ್ನೂ ಒಡವೆಗಳನ್ನೂ ಪಡೆದುಕೊಂಡ ಆ ನಗರವೆಲ್ಲ ಸಮಾನವಾದ ವೈಭವವನ್ನು ಹೊಂದಿದ್ದಂತೆ ಕಾಣಿಸುತ್ತಿತ್ತು.

---

ಅನೇನ ಭವಿತವ್ಯಂ ಚ ದಿವ್ಯಂ ಕಲ್ಪಮತಂದ್ರಿಣಾ ।
ಸರ್ವವಿದ್ಯಾಧರೇಂದ್ರಾಣಾಮಚಿರಾಚ್ಚಕ್ರವರ್ತಿನಾ ॥ ೭೪

ಇತ್ಯುಕ್ತ್ವಾ ವಿರತಂ ವಾಚಾ ತತ್ಕ್ಷಣಂ ನಭಸಃ ಕ್ರಮಾತ್ ।
ಪುಷ್ಪವರ್ಷೈರ್ನಿಪತಿತಂ ಪ್ರಸೃತಂ ದುಂದುಭಿಸ್ವನೈಃ ॥ ೭೫

ತತಃ ಸುರಕೃತಾರಂಭಜನಿತಾಭ್ಯಧಿಕಾದರಮ್ ।
ಸ ರಾಜಾ ಸುತರಾಂ ಹೃಷ್ಟಶ್ಚಕಾರ ಪರಮುತ್ಸವಮ್ ॥ ೭೬

ಬಭ್ರಮುಸ್ತೂರ್ಯನಿನದಾ ನಭಸ್ತೋ ಮಂದಿರೋದ್ಗತಾಃ ।
ವಿದ್ಯಾಧರೇಭ್ಯಃ ಸರ್ವೇಭ್ಯೋ ರಾಜಜನ್ಮೇವ ಶಂಸಿತುಮ್ ॥ ೭೭

ಸೌಧಾಗ್ರೇಷ್ವನಿಲೋದ್ಧೂತಾಃ ಶೋಣರಾಗಾಃ ಸ್ವಕಾಂತಿಭಿಃ ।
ಪತಾಕಾ ಅಪಿ ಸಿಂದೂರಮನ್ಯೋನ್ಯಮಕಿರನ್ನಿವ ॥ ೭೮

ಭುವಿ ಸಾಂಗಸ್ಮರೋತ್ಪತ್ತಿತೋಷಾದಿವ ಸುರಾಂಗನಾಃ ।
ಸಮಾಗತಾಃ ಪ್ರತಿಪದಂ ನನೃತುರ್ವಾರಯೋಷಿತಃ ॥ ೭೯

ಅದೃಶ್ಯತ ಚ ಸರ್ವಾ ಸಾ ಸಮಾನವಿಭವಾ ಪುರೀ ।
ರಾಜ್ಞೋ ಬದ್ಧೋತ್ಸವಾತ್ ಪ್ರಾಪ್ತೈರ್ನವವಸ್ತ್ರವಿಭೂಷಣೈಃ ॥ ೮೦

೮೧. ಯಾಚಕರಿಗೂ ತನ್ನನ್ನವಲಂಬಿಸಿದವರಿಗೂ ದೊರೆಯು ಸಂಪತ್ತನ್ನು ಸುರಿಸುತ್ತಿರಲು, ಬೊಕ್ಕಸವೊಂದನ್ನು ಬಿಟ್ಟರೆ ಅಲ್ಲಿದ್ದ ಬೇರೆ ಯಾರೂ ಬರಿಗೈಯವರಾಗಿರಲಿಲ್ಲ.

೮೨–೮೩. ಸಾಮಂತರ ಅಂತಃಪುರಗಳ ಹೆಂಗಳೆಯರೂ ಮಂಗಳದ್ರವ್ಯಗಳನ್ನು ಮುಂದಿಟ್ಟುಕೊಂಡು ಎಲ್ಲ ಕಡೆಗಳಿಂದಲೂ ಬಂದರು. ಅವರು ತಮ್ಮ ತಮ್ಮ ಆಚಾರಗಳಲ್ಲಿ ದಕ್ಷರಾಗಿದ್ದು, ನರ್ತನ ಮಾಡುವವರೊಡನೆ ಒಳ್ಳೆಯ ಕಾಣಿಕೆಗಳೊಡನೆ, ಆಯಾ ರಕ್ಷಕಭಟರಿಂದ ಕೂಡಿದವರಾಗಿ, ವಾದ್ಯಗಳ ನಾದವನ್ನು ಹಬ್ಬಿಸುತ್ತಾ, ಸಾಕ್ಷಾತ್ತಾಗಿ ಬಂದ ಎಲ್ಲ ದಿಕ್ಕುಗಳಂತೆ ಬಂದು ಸೇರಿದರು.

೮೪. ಅಲ್ಲಿ ಚಲನೆಯೆಲ್ಲವೂ ನರ್ತನಮಯ, ಮಾತೆಲ್ಲ ಬಹುಮಾನಮಯ, ವ್ಯವಹಾರವೆಲ್ಲ ತ್ಯಾಗಮಯ ಮತ್ತು ಧ್ವನಿಯೆಲ್ಲ ವಾದ್ಯಮಯ ಆಗಿತ್ತು.

೮೫. ಪೂರ್ಣವಾಗಿ ಆನಂದಮಯವಾಗಿದ್ದ ಆ ನಗರದಲ್ಲಿ ಜನಸಮೂಹವೆಲ್ಲ ರಂಗಿನ ಹುಡಿಯಿಂದ ತುಂಬಿತ್ತು, ನೆಲವೆಲ್ಲ ಹಾಡಿ ಕುಣಿಯುವ ಚಾರಣರಿಂದ ತುಂಬಿತ್ತು.

೮೬. ಹೀಗೆ ಅಲ್ಲಿ ಮಹೋತ್ಸವವು ಅನೇಕ ದಿನಗಳ ವರೆಗೆ ಬೆಳೆಯಿತು. ಪೂರ್ಣವಾದ ಪೌರರ ಮನೋರಥಗಳೊಡನೆ ಆ ಉತ್ಸವವು ಮುಕ್ತಾಯವನ್ನು ಕಂಡಿತು.

---

ತದಾ ಹ್ಯರ್ಥಾನ್ ನೃಪೇ ತಸ್ಮಿನ್ ವರ್ಷತ್ಯರ್ಥ್ಯನುಜೀವಿಷು ।
ಕೋಷಾದೃತೇ ನ ತತ್ರಕ್ಶ್ಯೋ ದಧೌ ಕಶ್ಚನ ರಿಕ್ತತಾಮ್ ॥ ೮೧

ಮಂಗಲ್ಯಪೂರ್ವಾಃ ಸ್ವಾಚಾರದಕ್ಷಿಣಾಃ ನರ್ತಿತಾಪರಾಃ ।
ಸತ್ಪ್ರಾಭೃತೋತ್ತರಾಸ್ತ್ವೈಸ್ತೈಃ ಸುರಕ್ಷಿಭಿರಧಿಷ್ಠಿತಾಃ ॥ ೮೨

ಪ್ರಸೃತಾತೋದ್ಯನಿರ್ಹ್ರಾದಾಃ ಸಾಕ್ಷಾದ್ದಿಶ ಇವಾಖಿಲಾಃ ।
ಸಮಂತಾದಾಯಯುಶ್ಚಾತ್ರ ಸಾಮಂತಾಂತಃಪುರಾಂಗನಾಃ ॥ ೮೩

ಚೇಷ್ಟಾ ನೃತ್ತಮಯೀ ತತ್ರ ಪೂರ್ಣಪಾತ್ರಮಯಂ ವಚಃ ।
ವ್ಯವಹಾರೋ ಮಹಾತ್ಯಾಗಮಯಸ್ತೂರ್ಯಮಯೋ ಧ್ವನಿಃ ॥ ೮೪

ಚೀನಪಿಷ್ಟಮಯೋ ಲೋಕಶ್ಚಾರಣೈಕಮಯೀ ಚ ಭೂಃ ।
ಆನಂದಮಯ್ಯಾಂ ಸರ್ವಸ್ಯಾಮಪಿ ತಸ್ಯಾಮಭೂತ್ ಪುರಿ ॥ ೮೫

ಏವಂ ಮಹೋತ್ಸವಸ್ತತ್ರ ಭೂರಿ ವಾಸರವರ್ಧಿತಃ ।
ನಿವರ್ತತೇ ಸ್ಮ ಸ ಸಮಂ ಪೂರ್ಣೈಃ ಪೌರಮನೋರಥೈಃ ॥ ೮೬

೭೭. ದಿವಸಗಳು ಕಳೆಯುತ್ತಿರಲು ಆ ಮಗು ರಾಜಪುತ್ರನು (ಶುಕ್ಲಪಕ್ಷದ) ಪಾಡ್ಯಮಿಯ ಚಂದ್ರನಂತೆ ಬೆಳವಣಿಗೆಯನ್ನು ಹೊಂದಿದನು. ದಿವ್ಯವಾಣಿಯು ಮೊದಲೇ ನಿರ್ದೇಶಿಸಿದ್ದ 'ನರವಾಹನದತ್ತ' ಎಂಬ ಹೆಸರನ್ನು ಅವನ ತಂದೆಯು ವಿಧಿಪೂರ್ವಕವಾಗಿ ಮಗುವಿಗೆ ಇಟ್ಟನು.

೭೮. ಹೊಳೆಯುವ ನುಣುಪಾದ ಮುದ್ದಾದ ಉಗುರಿನ ಕಾಂತಿಯುಳ್ಳ ಮಗುವು ಜಾರಿಬೀಳುವ ಹೆಜ್ಜೆಗಳನ್ನು ತಪ್ಪಾಗಿ ಎರಡು ಮೂರು ಬಾರಿ ಇಡುವುದನ್ನು ನೋಡುತ್ತಲೂ, ಹಲ್ಲುಮೊಳಕೆಗಳಲ್ಲಿ ಸಿಕ್ಕಿಹಾಕಿಕೊಂಡಂಥ, ಮಗುವು ಹೇಳುತ್ತಿದ್ದ ತೊದಲು ಮಾತುಗಳನ್ನು ಕೇಳುತ್ತಲೂ ತಂದೆ ಸಂತೋಷ ಪಡುತ್ತಿದ್ದನು.

೭೯. ಆಮೇಲೆ ಮಂತ್ರಿಶ್ರೇಷ್ಠರು ತಮ್ಮ ಮಕ್ಕಳನ್ನು ಕರೆದುಕೊಂಡು ಬಂದು ಶಿಶುರಾಜಪುತ್ರನಿಗೆ ಸಮರ್ಪಿಸಿದರು. ಆ ಮಕ್ಕಳೆಲ್ಲ ದೊರೆಯ ಮನಸ್ಸಿಗೆ ಆನಂದವನ್ನು ತಂದರು.

---

ಸೋಽಪಿ ವ್ರಜತ್ಸು ದಿವಸೇಷ್ವಥ ರಾಜಪುತ್ರೋ
ವೃದ್ಧಿಂ ಶಿಶುಃ ಪ್ರತಿಪದಿಂದುರಿವಾಜಗಾಮ ।
ಪಿತ್ರಾ ಯಥಾವಿಧಿನಿವೇದಿತ ದಿವ್ಯವಾಣೀ –
ನಿರ್ದಿಷ್ಟಪೂರ್ವನರವಾಹನದತ್ತನಾಮ್ನಾ ॥ ೭೭

ಯಾನಿ ಸ್ಫುರನ್ಮಸೃಣಮುಗ್ಧನಖಪ್ರಭಾಣಿ
ದ್ವಿತ್ರಾಣಿ ಯಾನಿ ಚ ಖಚದ್ದಶನಾಂಕುರಾಣಿ ।
ತಾನಿ ಸ್ಖಲಂತಿ ದದತೋ ವದತಶ್ಚ ತಸ್ಯ
ದೃಷ್ಟ್ವಾ ನಿಶಮ್ಯ ಚ ಪದಾನಿ ಪಿತಾ ತುತೋಷ ॥ ೭೮

ಅಥ ತಸ್ಮೈ ಮಂತ್ರಿವರಾಃ ಸ್ವಸುತಾನಾನೀಯ ರಾಜಪುತ್ರಾಯ ।
ಶಿಶವೇ ಶಿಶೂನ್ ಮಹೀಪತಿಹೃದಯಾನಂದಾನ್
ಸಮರ್ಪಯಾಮಾಸುಃ ॥ ೭೯

೯೦–೯೧. ಮೊದಲು ಯೌಗಂಧರಾಯಣನು ಮರುಭೂತಿಯನ್ನೂ, (ಆಮೇಲೆ) ರುಮಣ್ವಂತನು ಹರಿಶಿಖನನ್ನೂ, ಇತ್ಯಕ ಎಂಬ ಹೆಸರಿನವನು ಗೋಮುಖನನ್ನೂ, ವಸಂತಕನು ತಪಂತಕನೆಂಬ ಹೆಸರಿನ ತನ್ನ ಮಗನನ್ನೂ, ಪುರೋಹಿತ ಶಾಂತಿಕರನು ತನ್ನ ಅಣ್ಣನ ಮಕ್ಕಳಾದ ಎಂದರೆ ಪಿಂಗಳಿಕೆಯ ಅವಳಿ ಮಕ್ಕಳಾದ ಶಾಂತಿಸೋಮ ಮತ್ತು ವೈಶ್ವಾನರ ಎಂಬುವವರನ್ನೂ ಸಮರ್ಪಿಸಿದರು.

೯೨. ಆ ಕ್ಷಣದಲ್ಲಿ ಆಕಾಶದಿಂದ ನಾಂದಿಯ ಶಬ್ದದಿಂದ ಸುಭಗವಾಗಿದ್ದ ಹೂಮಳೆಯನ್ನು ದೇವತೆಗಳು ಸುರಿಸಿದರು. ಪಟ್ಟದ ರಾಣಿಯರೊಡನೆ ಇದ್ದ ರಾಜನು ಆ ಮಂತ್ರಿಗಳ ಮಕ್ಕಳ ಗುಂಪನ್ನು ಸತ್ಕರಿಸಿ ಆನಂದಿಸಿದನು.

೯೩. ರಾಜಪುತ್ರ ನರವಾಹನದತ್ತನು ಬಾಲ್ಯದಲ್ಲೂ ಅವನಲ್ಲೇ ಶ್ರದ್ಧೆಯನ್ನಿಟ್ಟಿದ್ದ ಆ ಆರು ಜನ ಮಂತ್ರಿಗಳ ಮಕ್ಕಳೊಡನೆ ಅತ್ಯುನ್ನತಿಗೆ ಕಾರಣವಾಗುವ ಗುಣಗಳೊಡನೆ ಇರುವಂತೆ, ಯಾವಾಗಲೂ ಒಟ್ಟಿಗೆ ಇರುತ್ತಿದ್ದನು.

---

ಯೌಗಂಧರಾಯಣಃ ಪ್ರಾಙ್ಮರುಭೂತಿಂ ಹರಿಶಿಖಂ ರುಮಣ್ವಾಂಶ್ಚ।
ಗೋಮುಖಮಿತ್ಯಕನಾಮಾ ತಪಂತಕಾಖ್ಯಂ ವಸಂತಕಶ್ಚ ಸುತಮ್ ॥ ೯೦
ಶಾಂತಿಕರೋಽಪಿ ಪುರೋಧಾ ಭ್ರಾತೃಸುತಂ
ಶಾಂತಿಸೋಮಮಪರಂ ಚ।
ವೈಶ್ವಾನರಮರ್ಪಿತವಾನ್ ಪಿಂಗಲಿಕಾಪುತ್ರಕೌ ಯಮಳೌ ॥ ೯೧
ತಸ್ಮಿನ್ ಕ್ಷಣೇ ಚ ನಭಸೋ ನಿಪಪಾತ ದಿವ್ಯಾ
ನಾಂದೀನಿನಾದಸುಭಗಾ ಸುರಪುಷ್ಪವೃಷ್ಟಿಃ।
ರಾಜಾ ನನಂದ ಚ ತದಾ ಮಹಿಷೀಸಮೇತಃ
ಸತ್ಕೃತ್ಯ ತತ್ರ ಸಚಿವಾತ್ಮಜಮಂಡಲಂ ತತ್ ॥ ೯೨
ಬಾಲ್ಯೇಽಪಿ ತೈರಭಿಮತೈರಥ ಮಂತ್ರಿಪುತ್ರೈಃ
ಷಡ್ಭಿಸ್ತದೇಕನಿರತೈಶ್ಚ ಸ ರಾಜಪುತ್ರಃ।
ಯುಕ್ತಃ ಸದೈವ ನರವಾಹನದತ್ತ ಆಸೀದ್
ಯುಕ್ತೋ ಗುಣೈರಿವ ಮಹೋದಯಹೇತುಭೂತೈಃ ॥ ೯೩

೯೪. ಆ ಮಗು ಆಟದಲ್ಲಿ ಮುದ್ದಾದ ಅಸ್ಪಷ್ಟವಾದ ತೊದಲು ಮಾತುಗಳನ್ನು ಕಲಿತುಕೊಂಡಿತು, ಪ್ರೀತಿ ತುಂಬಿದ ಮನಸ್ಸಿನ ದೊರೆಗಳ ಮಡಿಲಿನಿಂದ ಮಡಿಲಿಗೆ ಹಾರುತ್ತಿತ್ತು. ಅರಳಿದ ತಾವರೆಯ ಮೊಗದ ಆ ಮಗುವನ್ನು ಅಕ್ಕರೆಯಿಂದ ನೋಡುತ್ತಾ ಆನಂದಪಡುತ್ತಿದ್ದ ವತ್ಸರಾಜನಿಗೆ ದಿನಗಳು ಹೇಗೋ ಕಳೆದುಹೋದವು.

ಮಹಾಕವಿ ಸೋಮದೇವಭಟ್ಟನು ರಚಿಸಿದ ಕಥಾಸರಿತ್ಸಾಗರದ

ನರವಾಹನದತ್ತಜನನಲಂಬಕದಲ್ಲಿ

ಮೂರನೆಯ ತರಂಗವು ಮುಗಿಯಿತು.

ನಾಲ್ಕನೆಯದಾದ ನರವಾಹನದತ್ತಜನನಲಂಬಕವೂ ಇಲ್ಲಿಗೆ ಮುಗಿಯಿತು.

---

ತಂ ಚ ಕ್ರೀಡಾಕಲಿತಲಲಿತಾವ್ಯಕ್ತಸೂರ್ಮಾಭಿಲಾಪಂ
ಯಾಂತಂ ಪ್ರೀತಿ ಪ್ರವಣಮನಸಾಮಂಕತೋऽಂಕಂ ನೃಪಾಣಾಮ್ ।
ಪುತ್ರಂ ಸ್ಮೇರಾನನಸರಸಿಜಂ ಸಾದರಂ ಪಶ್ಯತಸ್ತೇ
ಬದ್ಧಾನಂದಾಃ ಕಿಮಪಿ ದಿವಸಾ ವತ್ಸರಾಜಸ್ಯ ಜಗ್ಮುಃ ॥ ೯೪

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ ಕಥಾಸರಿತ್ಸಾಗರೇ

ನರವಾಹನದತ್ತಜನನಲಂಬಕೇ ತೃತೀಯಸ್ತರಂಗಃ

ಸಮಾಪ್ತಶ್ಚಾಯಂ ನರವಾಹನದತ್ತಜನನಲಂಬಕಃ ಚತುರ್ಥಃ ।

❖❖❖

# ಐದನೆಯ ಚತುರ್ದಾರಿಕಾಲಂಬಕ

## ಮೊದಲನೆಯ ತರಂಗ

೧ ಮದದಿಂದ ಅಲುಗಾಡುತ್ತಿರುವ ಮುಖದಿಂದ ಉದುರುವ ಸಿಂದೂರಗಳಿಂದ ಭೂಮಿಯನ್ನು ಬಣ್ಣಗಳಿಂದ ತುಂಬಿಸುತ್ತಾ ತನ್ನ ತೇಜಸ್ಸುಗಳಿಂದ ವಿಘ್ನಗಳನ್ನು ಸುಡುತ್ತಿರುವನೋ ಎಂಬಂತಿರುವ ಗಣಪತಿಯು ನಿಮ್ಮನ್ನು ಕಾಪಾಡಲಿ.

೨. ವತ್ಸರಾಜನು ರಾಣಿಯರೊಡನೆ ಹೀಗೆ ನರವಾಹನದತ್ತನೆಂಬ ತನ್ನ ಒಬ್ಬನೇ ಮಗನನ್ನು ಬೆಳೆಸುತ್ತಾ ಇದ್ದನು.

೩. ಆ ಮಗುವಿನ ರಕ್ಷಣೆಯ ಬಗೆಗೆ ಆತಂಕಗೊಳ್ಳುತ್ತಿದ್ದ ರಾಜನನ್ನು ನೋಡಿ ಮಂತ್ರಿ ಯೌಗಂಧರಾಯಣನು ಏಕಾಂತದಲ್ಲಿದ್ದಾಗ ಹೀಗೆ ಹೇಳಿದನು.

೪. "ದೊರೆಯೆ, ರಾಜಪುತ್ರ ನರವಾಹನದತ್ತನ ಬಗೆಗೆ ನೀನೆಂದೂ ಚಿಂತೆ ಮಾಡುವುದು ಬೇಡ.

---

## ಪ್ರಥಮಸ್ತರಂಗಃ ॥

ಮದಘೂರ್ಣಿತವಕ್ತ್ರೋತ್ಥೈಃ ಸಿಂದೂರೈಶ್ಛುರಯನ್ ಮಹೀಮ್ ।
ಹೇರಂಬಃ ಪಾತು ವೋ ವಿಘ್ನಾನ್ ಸ್ವತೇಜೋಭಿರ್ದಹನ್ನಿವ ॥ ೧
ಏವಂ ಸ ದೇವೀಸಹಿತಸ್ತಸ್ಥೌ ವತ್ಸೇಶ್ವರಸ್ತದಾ ।
ನರವಾಹನದತ್ತಂ ತಮೇಕಪುತ್ರಂ ವಿವರ್ಧಯನ್ ॥ ೨
ತದ್ರಕ್ಷಾಕಾತರಂ ತಂ ಚ ದೃಷ್ಟ್ವಾ ರಾಜಾನಮೇಕದಾ ।
ಯೌಗಂಧರಾಯಣೋ ಮಂತ್ರೀ ವಿಜನಸ್ಥಿತಮಬ್ರವೀತ್ ॥ ೩
ರಾಜನ್ನ ರಾಜಪುತ್ರಸ್ಯ ಕೃತೇ ಚಿಂತಾಧುನಾ ತ್ವಯಾ ।
ನರವಾಹನದತ್ತಸ್ಯ ವಿಧಾತವ್ಯಾ ಕದಾಚನ ॥ ೪

೫. ಭಗವಾನ್ ಶಂಕರನೇ ಭವಿಷ್ಯದ ಸಮಸ್ತ ವಿದ್ಯಾಧರಚಕ್ರವರ್ತಿಯನ್ನು ನಿನ್ನ ಮನೆಯಲ್ಲಿ ಸೃಷ್ಟಿಸಿದ್ದಾನೆ

೬. ವಿದ್ಯಾಧರರ ಕೆಲವರು ಒಡೆಯರು ತಮ್ಮ ವಿದ್ಯಾಪ್ರಭಾವದಿಂದ ಈ ವಿಷಯವನ್ನರಿತುಕೊಂಡು ಪಾಪಬುದ್ಧಿಯುಳ್ಳವರಾಗಿ ಮನಸ್ಸಿನಲ್ಲಿ ಅಸಹಿಷ್ಣುಗಳಾಗಿದ್ದಾರೆ. ಅವರಿಗೆ ಕಳವಳ ಉಂಟಾಗಿದೆ.

೭. ಅದನ್ನು ತಿಳಿದುಕೊಂಡು ಚಂದ್ರಮೌಳಿಯಾದ ಶಿವನು ಈ ಮಗುವಿನ ರಕ್ಷಣೆಗಾಗಿ ಸ್ತಂಭಕನೆಂಬ ತನ್ನ ಗಣೇಶ್ವರನನ್ನು ಇಲ್ಲಿ ನಿಲ್ಲಿಸಿದ್ದಾನೆ.

೮. ಯಾರಿಗೂ ಕಾಣಿಸದಂತೆ ಇಲ್ಲಿದ್ದುಕೊಂಡು ಅವನು ನಿನ್ನ ಮಗನನ್ನು ಕಾಪಾಡುತ್ತಿದ್ದಾನೆ ನಾರದನು ಇಲ್ಲಿಗೆ ಕ್ಷಿಪ್ರವಾಗಿ ಬಂದು ಈ ವಿಷಯವನ್ನು ನನಗೆ ತಿಳಿಸಿದನು.

೯. ಹೀಗೆ ಆ ಮಂತ್ರಿಯು ಹೇಳುತ್ತಿರುವಾಗಲೇ ಆಕಾಶದ ಮಧ್ಯದಿಂದ ಕಿರೀಟ, ಕುಂಡಲ ಮತ್ತು ಖಡ್ಗಗಳನ್ನು ಧರಿಸಿದ್ದ ಪುರುಷನೊಬ್ಬನು ಇಳಿದು ಬಂದನು.

೧೦. ನಮಸ್ಕರಿಸಿದ ಅವನಿಗೆ ಅತಿಥಿಸತ್ಕಾರವನ್ನು ಮಾಡಿ ವತ್ಸರಾಜನು ""ನೀನು ಯಾರು ? ಇಲ್ಲಿ ನಿನ್ನ ಕೆಲಸವೇನಿದೆ?" ಎಂದು ಕುತೂಹಲದಿಂದ ಕೇಳಿದನು.

---

ಅಸೌ ಭಗವತಾ ಭಾವೀ ಭರ್ಗೇಣ ಹಿ ಭವದ್ಗೃಹೇ ।
ಸರ್ವವಿದ್ಯಾಧರಾಧೀಶಶ್ಚಕ್ರವರ್ತೀ ವಿನಿರ್ಮಿತಃ ॥ ೫
ವಿದ್ಯಾಪ್ರಭಾವಾದೇತಚ್ಚ ಬುದ್ಧ್ವಾ ವಿದ್ಯಾಧರಾಧಿಪಾಃ ।
ಗತಾಃ ಪಾಪೇಚ್ಛವಃ ಕ್ಷೋಭಂ ಹೃದಯೈರಸಹಿಷ್ಣವಃ ॥ ೬
ತದ್ವಿದಿತ್ವಾ ಚ ದೇವೇನ ರಕ್ಷಾರ್ಥಂ ಶಶಿಮೌಲಿನಾ ।
ಏತಸ್ಯ ಸ್ತಂಭಕೋ ನಾಮ ಗಣೇಶಃ ಸ್ಥಾಪಿತೋ ನಿಜಃ ॥ ೭
ಸ ಚ ತಿಷ್ಠತ್ಯಲಕ್ಷ್ಯಃ ಸನ್ ರಕ್ಷನ್ನೇತಂ ಸುತಂ ತವ ।
ಏತಚ್ಚ ಕ್ಷಿಪ್ರಮಭ್ಯೇತ್ಯ ನಾರದೋ ಮೇ ನ್ಯವೇದಯತ್ ॥ ೮
ಇತಿ ತಸ್ಮಿನ್ ವದತ್ಯೇವ ಮಂತ್ರಿಣಿ ವ್ಯೋಮಮಧ್ಯತಃ ।
ಕಿರೀಟೀ ಕುಂಡಲೀ ದಿವ್ಯಃ ಖಡ್ಗೀ ಚಾವಾತರತ್ ಪುಮಾನ್ ॥ ೯
ಪ್ರಣತಂ ಕಲ್ಪಿತಾತಿಥ್ಯಂ ಕ್ಷಣಾದ್ ವತ್ಸೇಶ್ವರೋಽಥ ತಮ್ ।
ಕಸ್ತ್ವಂ ಕಿಮಿಹ ತೇ ಕಾರ್ಯಮಿತ್ಯಪೃಚ್ಛತ್ ಸಕೌತುಕಮ್ ॥ ೧೦

೧೧–೧೨. ಆಗ ಅವನು ""ದೊರೆಯೆ, ನಾನು ಮನುಷ್ಯನಾಗಿದ್ದು ಆಮೇಲೆ ವಿದ್ಯಾಧರರಿಗೆ ಒಡೆಯನಾದೆನು. ನನ್ನ ಹೆಸರು ಶಕ್ತಿವೇಗ. ನನಗೆ ಅನೇಕ ಶತ್ರುಗಳಿದ್ದಾರೆ. ನಿನ್ನ ಮಗನು ಮುಂದಿನ ವಿದ್ಯಾಧರಚಕ್ರವರ್ತಿ ಎಂಬುದನ್ನು ಪ್ರಭಾವದಿಂದ ಅರಿತುಕೊಂಡು ಅವನನ್ನು ನೋಡಲು ಬಂದಿದ್ದೇನೆ" ಎಂದು ಹೇಳಿದನು.

೧೩. ಅವನು ಹೀಗೆ ಹೇಳಿ ಭವಿಷ್ಯದ ವಿದ್ಯಾಧರಚಕ್ರವರ್ತಿಯನ್ನು ನೋಡಿ ಸಂತೋಷಪಟ್ಟನು. ವತ್ಸರಾಜನು ಹರ್ಷದಿಂದ ವಿಸ್ಮಿತನಾಗಿ ಅವನನ್ನು ಮತ್ತೆ ಪ್ರಶ್ನಿಸಿದನು.

೧೪. ""ವಿದ್ಯಾಧರನಾಗುವುದು ಹೇಗೆ ? ವಿದ್ಯಾಧರತ್ವ ಎಂದರೆ ಯಾವ ಪ್ರಕಾರದ್ದಾಗಿರುತ್ತದೆ? ನೀನು ಅದನ್ನು ಹೇಗೆ ಪಡೆದೆ? ಮಿತ್ರನೆ, ನಮಗೆ ಇದನ್ನು ಹೇಳು."

೧೫. ರಾಜನ ಆ ಮಾತನ್ನು ಕೇಳಿ ವಿದ್ಯಾಧರ ಶಕ್ತಿವೇಗನು ಅವನಿಗೆ ವಿನಯದಿಂದ ಬಗ್ಗಿ ಹೀಗೆ ಉತ್ತರವನ್ನಿತ್ತನು.

೧೬. ""ರಾಜನ್, ಈ ಜನ್ಮದಲ್ಲಿ ಅಥವಾ ಪೂರ್ವಜನ್ಮದಲ್ಲಿ ಶಂಕರನನ್ನು ಪೂಜಿಸಿ ಧೀರರು ವಿದ್ಯಾಧರಪದವಿಯನ್ನು ಅವನ ಅನುಗ್ರಹದಿಂದ ಪಡೆದುಕೊಳ್ಳುತ್ತಾರೆ.

---

ಸೋಽಪ್ಯವಾದೀದಹಂ ಮರ್ತ್ಯೋ ಭೂತ್ವಾ ವಿದ್ಯಾಧರಾಧಿಪಃ ।
ಸಂಪನ್ನಃ ಶಕ್ತಿವೇಗಾಖ್ಯಃ ಪ್ರಭೂತಾಶ್ಚ ಮಮಾರಯಃ ॥ ೧೧
ಸೋಽಹಂ ಪ್ರಭಾವಾದ್ ವಿಜ್ಞಾಯ ಭಾವ್ಯಸ್ಮಚ್ಚಕ್ರವರ್ತಿನಮ್ ।
ಭವತಸ್ತನಯಂ ದ್ರಷ್ಟುಮಾಗತೋಽಸ್ಮ್ಯವನೀಪತೇ ॥ ೧೨
ಇತ್ಯುಕ್ತವಂತಂ ತಂ ದೃಷ್ಟ್ವಾ ಭವಿಷ್ಯಚ್ಚಕ್ರವರ್ತಿನಮ್ ।
ಪ್ರೀತಂ ವತ್ಸೇಶ್ವರೋ ಹೃಷ್ಟಃ ಪುನಃ ಪಪ್ರಚ್ಛ ವಿಸ್ಮಯಾತ್ ॥ ೧೩
ವಿದ್ಯಾಧರತ್ವಂ ಪ್ರಾಪ್ಯೇತ ಕಥಂ ಕೀದೃಗ್ವಿಧಂ ಚ ತತ್ ।
ತ್ವಯಾ ಚ ತತ್ ಕಥಂ ಪ್ರಾಪ್ತಮೇತತ್ ಕಥಯ ನಃ ಸಖೇ ॥ ೧೪
ತಚ್ಛ್ರುತ್ವಾ ವಚನಂ ರಾಜ್ಞಃ ಸ ತದಾ ವಿನಯಾನತಃ ।
ವಿದ್ಯಾಧರಃ ಶಕ್ತಿವೇಗಸ್ತಮೇವಂ ಪ್ರತ್ಯವೋಚತ ॥ ೧೫
ರಾಜನ್ನಿಹೈವ ಪೂರ್ವೇ ವಾ ಜನ್ಮನ್ಯಾರಾಧ್ಯ ಶಂಕರಮ್ ।
ವಿದ್ಯಾಧರಪದಂ ಧೀರಾ ಲಭಂತೇ ತದನುಗ್ರಹಾತ್ ॥ ೧೬

೧೭. ವಿದ್ಯಾ ಖಡ್ಗ ಮಾಲಾ ಮುಂತಾದ ಸಾಧನಗಳಿಂದ ದೊರಕುವ ವಿದ್ಯಾಧರ ಪದವಿಯು ನಾನಾ ವಿಧವಾಗಿದೆ. ನಾನು ವಿದ್ಯಾಧರತ್ವವನ್ನು ಹೇಗೆ ಪಡೆದುಕೊಂಡೆನೆಂಬುದನ್ನು ಹೇಳುವೆನು ಕೇಳು."

೧೮. ಹೀಗೆ ಹೇಳಿ ಶಕ್ತಿವೇಗನು ತನಗೆ ಸಂಬಂಧಿಸಿದ ಈ ಕಥೆಯನ್ನು ದೇವಿ ವಾಸವದತ್ತೆಯ ಸನ್ನಿಧಿಯಲ್ಲಿ ಹೇಳತೊಡಗಿದನು.

## ಶಕ್ತಿವೇಗನ ಕಥೆ

೧೯. ಭೂಲೋಕದ ಒಡವೆಯಂತಿದ್ದ ವರ್ಧಮಾನ ಎಂಬ ಹೆಸರಿನ ನಗರದಲ್ಲಿ ಹಿಂದೆ ಶತ್ರುಗಳನ್ನು ಮರ್ದಿಸುತ್ತಿದ್ದ 'ಪರೋಪಕಾರಿ' ಎಂಬ ಹೆಸರಿನ ರಾಜನಿದ್ದನು.

೨೦. ಅಭಿವೃದ್ಧಿಯನ್ನು ಹೊಂದಿದ್ದ ಅವನಿಗೆ ಮೋಡಕ್ಕೆ ಮಿಂಚಿನಂತೆ ಕನಕಪ್ರಭಾ ಎಂಬ ಪಟ್ಟದ ರಾಣಿ ಇದ್ದಳು. ಆದರೆ ಅವಳಲ್ಲಿ ಚಂಚಲತ್ವ ಇರಲಿಲ್ಲ.

೨೧. ಕಾಲವು ಕಳೆಯುತ್ತಿರಲು ಪರೋಪಕಾರಿ ರಾಜನಿಗೆ ರಾಣಿ ಕನಕಪ್ರಭೆಯಲ್ಲಿ ಹೆಣ್ಣುಮಗು ಹುಟ್ಟಿತು. ಲಕ್ಷ್ಮಿಯ ಸೌಂದರ್ಯದ ಗರ್ವವನ್ನು ಅಡಗಿಸಲು ಬ್ರಹ್ಮನು ಅವಳನ್ನು ಸೃಷ್ಟಿಸಿದಂತಿತ್ತು.

೨೨. ಜನರ ಕಣ್ಣಿಗೆ ಬೆಳದಿಂಗಳಾಗಿ ಅವಳು ಮೆಲ್ಲಮೆಲ್ಲನೆ ಬೆಳೆದಳು. ತಾಯಿಯ ಹೆಸರನ್ನು ಅನುಸರಿಸಿ ತಂದೆಯು ಅವಳಿಗೆ 'ಕನಕರೇಖಾ' ಎಂಬ ಹೆಸರನ್ನಿಟ್ಟನು.

---

ತಚ್ಚಾನೇಕವಿಧಂ ವಿದ್ಯಾಖಡ್ಗಮಾಲಾದಿಸಾಧನಮ್ ।
ಮಯಾ ಚ ತದ್ ಯಥಾ ಪ್ರಾಪ್ತಂ ಕಥಯಾಮಿ ತಥಾ ಶೃಣು ॥ ೧೭
ಏವಮುಕ್ತ್ವಾ ಸ್ವಸಂಬದ್ಧಾಂ ಶಕ್ತಿವೇಗಃ ಸ ಸಂನಿಧೌ ।
ದೇವ್ಯಾ ವಾಸವದತ್ತಾಯಾಃ ಕಥಾಮಾಖ್ಯಾತವಾನಿಮಾಮ್ ॥ ೧೮
ಅಭವದ್ ವರ್ಧಮಾನಾಖ್ಯೇ ಪುರೇ ಭೂತಲಭೂಷಣೇ ।
ನಾಮ್ನಾ ಪರೋಪಕಾರೀತಿ ಪುರಾ ರಾಜಾ ಪರಂತಪಃ ॥ ೧೯
ತಸ್ಯೋನ್ನತಿಮತಶ್ಚಾಭೂನ್ಮಹಿಷೀ ಕನಕಪ್ರಭಾ ।
ವಿದ್ಯುದ್ ಧಾರಾಧರಸ್ಯೇವ ಸಾ ತು ನಿರ್ಮುಕ್ತಚಾಪಲಾ ॥ ೨೦
ತಸ್ಯಾಂ ತಸ್ಯ ಚ ಕಾಲೇನ ದೇವ್ಯಾಮಜನಿ ಕನ್ಯಕಾ ।
ರೂಪದರ್ಪೋಪಶಾಂತ್ಯೈ ಯಾ ಲಕ್ಷ್ಮ್ಯಾ ಧಾತ್ರೇವ ನಿರ್ಮಿತಾ ॥ ೨೧
ಅವರ್ಧತ ಶನೈಃ ಸಾ ಚ ಲೋಕಲೋಚನಚಂದ್ರಿಕಾ ।
ಪಿತ್ರಾ ಕನಕರೇಖೇತಿ ಮಾತೃನಾಮ್ನಾ ಕೃತಾತ್ಮಜಾ ॥ ೨೨

೨೩. ಅವಳು ಹರೆಯಕ್ಕೆ ಬಂದಾಗ ಒಮ್ಮೆ ಅವಳ ತಂದೆ ರಾಜ ಪರೋಪಕಾರಿಯು ಏಕಾಂತದಲ್ಲಿ ತನ್ನ ಬಳಿಗೆ ಬಂದ ರಾಣಿ ಕನಕಪ್ರಭೆಗೆ ಇಂತೆಂದನು.

೨೪. '"ದೇವಿ, ಅವಳ ಮದುವೆಯ ಚಿಂತೆಯೊಡನೆ ಬೆಳೆಯುತ್ತಿರುವ ಈ ಕನಕರೇಖೆಯು ನನಗೆ ಬಾಧೆಯನ್ನುಂಟು ಮಾಡುತ್ತಿದ್ದಾಳೆ.

೨೫. ಮಗಳು ಸರಿಯಾದ ಸ್ಥಾನಕ್ಕೆ ತಲುಪದಿದ್ದರೆ ಹಾಡಿನ ಹಾಗೆ ಬೇರೆಯವರ ಕಿವಿಗೆ ಕೇಳಿಸಿದೊಡನೆಯೇ ಉದ್ವೇಗವನ್ನೇ ಉಂಟುಮಾಡುತ್ತಾಳೆ.

೨೬. ವಿದ್ಯೆಯಂತೆ ಅಜ್ಞಾನದಿಂದ ಅಪಾತ್ರಕ್ಕೆ ಕೊಟ್ಟ ಮಗಳೂ ಕೂಡ ಕೀರ್ತಿಗೂ ಇಲ್ಲ, ಧರ್ಮಕ್ಕೂ ಇಲ್ಲ, ಕೇವಲ ದುಃಖಕ್ಕೇ ಕಾರಣವಾಗುತ್ತಾಳೆ.

೨೭. ರಾಣಿ, ಆದ್ದರಿಂದ ನಾನು ಇವಳನ್ನು ಯಾವ ರಾಜನಿಗೆ ಕೊಡುವುದು? ಇವಳಿಗೆ ಯಾವನು ಸಮಾನ ? ಎಂಬ ಚಿಂತೆ ನನ್ನನ್ನು ಕಾಡುತ್ತಿದೆ."

೨೮. ಅದನ್ನು ಕೇಳಿ ನಕ್ಕು ಕನಕಪ್ರಭೆ ಹೀಗೆಂದಳು. '"ನೀನೇನೋ ಹೀಗೆ ಹೇಳುತ್ತಿದ್ದೀಯೆ. ಆದರೆ ಮಗಳಾದರೋ ಮದುವೆಯನ್ನೇ ಇಷ್ಟಪಡುತ್ತಿಲ್ಲ.

೨೯. ಇವತ್ತೇ ಕೃತಕವಾಗಿ ಮಗುವಿನ ಬೊಂಬೆಯನ್ನು ಮಾಡಿ ಆಡುತ್ತಿದ್ದ ಅವಳಿಗೆ ನಾನು ಹಾಸ್ಯಕ್ಕಾಗಿ 'ಮಗಳೇ, ನಿನ್ನ ಮದುವೆಯನ್ನು ನಾನು ಯಾವಾಗ ನೋಡುವೆನು?' ಎಂದು ಕೇಳಿದೆನು.

---

ಏಕದಾ ಯೌವನಸ್ಥಾಯಾಂ ತಸ್ಯಾಂ ರಾಜಾ ಸ ತತ್ಪಿತಾ ।  
ವಿಜನೋಪಸ್ಥಿತಾಂ ದೇವೀಂ ಜಗಾದ ಕನಕಪ್ರಭಾಮ್ ॥ ೨೩

ವರ್ಧಮಾನಾ ಸಹೈವೈತತ್‌ಸಮಾನೋದ್ವಾಹಚಿಂತಯಾ ।  
ಏಷಾ ಕನಕರೇಖಾ ಮೇ ಹೃದಯಂ ದೇವಿ ಬಾಧತೇ ॥ ೨೪

ಸ್ಥಾನಪ್ರಾಪ್ತಿವಿಹೀನಾ ಹಿ ಗೀತಿವತ್ ಕುಲಕನ್ಯಕಾ ।  
ಉದ್ವೇಜಿನೀ ಪರಸ್ಯಾಪಿ ಶ್ರೂಯಮಾಣೈವ ಕರ್ಣಯೋಃ ॥ ೨೫

ವಿದ್ಯೇವ ಕನ್ಯಕಾ ಮೋಹಾದಪಾತ್ರೇ ಪ್ರತಿಪಾದಿತಾ ।  
ಯಶಸೇ ನ ನ ಧರ್ಮಾಯ ಜಾಯೇತಾನುಶಯಾಯ ತು ॥ ೨೬

ತತ್ ಕಸ್ಮೈ ದೀಯತೇ ಹ್ಯೇಷಾ ಮಯಾ ನೃಪತಯೇ ಸುತಾ ।  
ಕೋ□ಸ್ಯಾಃ ಸಮಃ ಸ್ಯಾದಿತಿ ಮೇ ದೇವಿ ಚಿಂತಾ ಗರೀಯಸೀ ॥ ೨೭

ತಚ್ಛ್ರುತ್ವಾ ಸಾ ವಿಹಸ್ಯೈವಂ ಬಭಾಷೇ ಕನಕಪ್ರಭಾ ।  
ತ್ವಮೇವಮಾತ್ಥ ಕನ್ಯಾ ತು ನೇಚ್ಛತ್ಯುದ್ವಾಹಮೇವ ಸಾ ॥ ೨೮

ಅದ್ಯೈವ ನರ್ಮಣಾ ಸಾ ಹಿ ಕೃತಕೃತ್ರಿಮಪುತ್ರಕಾ ।  
ವತ್ಸೇ ಕದಾ ವಿವಾಹಂ ತೇ ದ್ರಕ್ಷ್ಯಾಮೀತ್ಯುದಿತಾ ಮಯಾ ॥ ೨೯

೩೦. ಅದನ್ನು ಕೇಳಿದ ಕೂಡಲೇ ಅವಳು ನನ್ನನ್ನೇ ಆಕ್ಷೇಪಿಸಿ ಹೇಳಿದಳು "ಅಮ್ಮ, ಬೇಡ, ಬೇಡ, ನನ್ನನ್ನು ಯಾರಿಗೂ ನೀನು ಕೊಡಲೇ ಕೂಡದು.

೩೧. ನನ್ನ ವಿಯೋಗ ನಿಮಗೆ ಆಗಬಾರದು. ಕನ್ಯೆಯಾಗಿಯೇ ನಾನು ಚೆನ್ನಾಗಿರುತ್ತೇನೆ. ಹಾಗಿಲ್ಲದಿದ್ದರೆ ನಾನು ಸತ್ತೆನೆಂದೇ ನೀನು ತಿಳಿದುಕೋ. ಹೀಗೆ ಹೇಳುವುದಕ್ಕೆ ಒಂದು ಕಾರಣವಿದೆ'

೩೨. ದೊರೆ, ಹೀಗೆ ಅವಳು ಹೇಳಿದಾಗ ನಾನು ಹೆದರಿ ನಿನ್ನ ಬಳಿಗೆ ಬಂದೆನು. ಅವಳೇ ತನಗೆ ಮದುವೆ ಬೇಡವೆನ್ನುತ್ತಿರುವಾಗ, ವರನ ವಿಚಾರ ಎಂಥದು ?'

೩೩. ರಾಣಿಯ ಬಾಯಿಂದ ಇದನ್ನು ಕೇಳಿ ದಿಕ್ಕು ತೋಚದೆ ರಾಜನು ಮಗಳ ಅಂತಃಪುರಕ್ಕೆ ಹೋಗಿ ಅವಳಿಗೆ ಹೀಗೆ ಹೇಳಿದನು.

೩೪. "ದೇವತೆಗಳ ಮತ್ತು ರಾಕ್ಷಸರ ಮಕ್ಕಳೂ ತಪಸ್ಸನ್ನು ಮಾಡಿ ವರನು ಸಿಗಲಿ ಎಂದು ಬೇಡಿಕೊಳ್ಳುತ್ತಾರೆ. ಮಗಳೆ, ಅಂಥ ವರಪ್ರಾಪ್ತಿಯನ್ನು ನೀನೇಕೆ ಬೇಡ ಎನ್ನುತ್ತೀಯೆ ?'

೩೫ ತಂದೆಯ ಮಾತನ್ನು ಕೇಳಿ ನೆಲದಲ್ಲಿ ಕಣ್ಣ ನೋಟವನ್ನು ನೆಟ್ಟು ರಾಜಕುಮಾರಿ ಕನಕರೇಖೆಯು ಹೀಗೆ ನುಡಿದಳು.

---

ಸಾ ತಚ್ಛ್ರುತ್ವೈವ ಸಾಕ್ಷೇಪಮೇವಂ ಮಾಂ ಪ್ರತ್ಯವೋಚತ ।
ಮಾ ಮೈವಮಂಬ ದಾತವ್ಯಾ ನೈವ ಕಸ್ಮೈಚಿದಪ್ಯಹಮ್ ॥ ೩೦
ಮದ್ವಿಯೋಗೋ ನ ಚಾದಿಷ್ಟಃ ಕನ್ಯೈವಾಸ್ಮಿ ಸುಶೋಭನಾ ।
ಅನ್ಯಥಾ ಮಾಂ ಮೃತಾಂ ವಿದ್ಧಿ ಕಿಂಚಿದಸ್ತ್ಯತ್ರ ಕಾರಣಮ್ ॥ ೩೧
ಏವಂ ತಯೋಕ್ತಾ ತ್ವತ್ಪಾರ್ಶ್ವಂ ರಾಜನ್ ವಿಗ್ನಾಹಮಾಗತಾ ।
ತನ್ನಿಷಿದ್ಧವಿವಾಹಾಯಾಃ ಕಾ ವರಸ್ಯ ವಿಚಾರಣಾ ॥ ೩೨
ಇತಿ ರಾಜ್ಞೀಮುಖಾಚ್ಛ್ರುತ್ವಾ ಸಮುದ್‌ಭ್ರಾಂತಃ ಸ ಭೂಪತಿಃ ।
ಕನ್ಯಕಾಂತಃ ಪುರಂ ಗತ್ವಾ ತಾಮವಾದೀತ್ತದಾ ಸುತಾಮ್ ॥ ೩೩
ಪ್ರಾರ್ಥಯಂತೇ□ಪಿ ತಪಸಾ ಯಂ ಸುರಾಸುರಕನ್ಯಕಾಃ ।
ಭರ್ತೃಲಾಭಃ ಕಥಂ ವತ್ಸೇ ಸ ನಿಷಿದ್ಧಃ ಕಿಲ ತ್ವಯಾ ॥ ೩೪
ಏತತ್‌ಪಿತುರ್ವಚಃ ಶ್ರುತ್ವಾ ಭೂತಲನ್ಯಸ್ತಲೋಚನಾ ।
ತದಾ ಕನಕರೇಖಾ ಸಾ ನಿಜಗಾದ ನೃಪಾತ್ಮಜಾ ॥ ೩೫

೩೬. "'ತಂದೆ, ನನಗೆ ಈಗ ಮದುವೆ ಇಷ್ಟವಿಲ್ಲ. ಆದ್ದರಿಂದ ಅಪ್ಪನಿಗೆ ಇದರಲ್ಲೇನು ಕೆಲಸ ? ನಿಮಗೆ ಈ ವಿಷಯದಲ್ಲಿ ಹಠವೇಕೆ ?"

೩೭. ಹೀಗೆ ಅವಳು ಹೇಳಿದಾಗ ಧೀಮಂತರಲ್ಲಿ ಶ್ರೇಷ್ಠನಾಗಿದ್ದ ಆ ರಾಜ ಪರೋಪಕಾರಿಯು ಮತ್ತೆ ಅವಳಿಗಿಂತೆಂದನು.

೩೮. "ಮಗಳೆ, ದೋಷಗಳ ಶಾಂತಿಗೆ ಕನ್ಯಾದಾನವನ್ನು ಬಿಟ್ಟು ಬೇರೆ ಯಾವುದಿದೆ? ಬಂಧುಗಳಿಗೆ ಪರಾಧೀನಳಾದ ಕನ್ಯೆಗೆ ಸ್ವಾತಂತ್ರ್ಯವೂ ಇಲ್ಲ.

೩೯. ಹೆಣ್ಣು ಹುಟ್ಟಿದ ಕೂಡಲೇ ಬೇರೆಯವನಿಗಾಗಿ ಅವಳನ್ನು ರಕ್ಷಿಸಿ ಇಡುತ್ತಾರೆ. ಚಿಕ್ಕಂದಿನಲ್ಲಿರುವುದನ್ನು ಬಿಟ್ಟರೆ, ಹೆಣ್ಣಿಗೆ ಗಂಡನಿಲ್ಲದೆ ತಂದೆಯ ಮನೆ ಎಂಥದು?

೪೦. ಹೆಣ್ಣು (ಮದುವೆಯಾಗದೆ) ಋತುಮತಿಯಾದಾಗಲೇ ಅವಳ ಬಂಧುಗಳು ಅಧೋಗತಿಗೆ ಹೋಗುತ್ತಾರೆ. ಅವಳು ವೃಷಲಿ ಎನಿಸಿಕೊಳ್ಳುತ್ತಾಳೆ. ಅವಳನ್ನು ಮದುವೆಯಾದ ಗಂಡನನ್ನೂ ವೃಷಲೀಪತಿ ಎಂದು ಕರೆಯುತ್ತಾರೆ.'

೪೧. ಹೀಗೆ ಅವನು ಹೇಳಿದಾಗ ರಾಜಪುತ್ರಿ ಕನಕರೇಖೆಯು ತನ್ನ ಮನಸ್ಸಿನೊಳಗಿದ್ದ ಮಾತನ್ನು ತತ್‌ಕ್ಷಣವೇ ಹೊರಗೆಡಹಿದಳು.

---

ತಾತ ನೈವೇಪ್ಸಿತಸ್ತಾವದ್ ವಿವಾಹೋ ಮಮ ಸಾಂಪ್ರತಮ್ ।
ತತ್ತಾತಸ್ಯಾಪಿ ಕಿಂ ತೇನ ಕಾರ್ಯಂ ಕಶ್ಚಾತ್ರ ವೋ ಗ್ರಹಃ ॥ ೩೬
ಇತ್ಯುಕ್ತಃ ಸ ತಯಾ ರಾಜಾ ದುಹಿತ್ರಾ ಧೀಮತಾಂ ವರಃ ।
ಪರೋಪಕಾರೀ ಸ ಪುನರೇವಮೇತಾಮಭಾಷತ ॥ ೩೭
ಕನ್ಯಾದಾನಾದೃತೇ ಪುತ್ರಿ ಕಿಂ ಸ್ಯಾದ್ ಕಿಲ್ಬಿಷಶಾಂತಯೇ ।
ನ ಚ ಬಂಧುಪರಾಧೀನಾ ಕನ್ಯಾ ಸ್ವಾತಂತ್ರ್ಯಮರ್ಹತಿ ॥ ೩೮
ಜಾತೈವ ಹಿ ಪರಸ್ಯಾರ್ಥೇ ಕನ್ಯಕಾ ನಾಮ ರಕ್ಷ್ಯತೇ ।
ಬಾಲ್ಯಾದೃತೇ ವಿನಾ ಭರ್ತುಃ ಕೀದೃಕ್ ತಸ್ಯಾಃ ಪಿತುರ್ಗೃಹಮ್ ॥ ೩೯
ಋತುಮತ್ಯಾಂ ಹಿ ಕನ್ಯಾಯಾಂ ಬಾಂಧವಾ ಯಾಂತ್ಯಧೋಗತಿಮ್ ।
ವೃಷಲೀ ಸಾ ವರಶ್ಚಾಸ್ಯಾ ವೃಷಲೀಪತಿರುಚ್ಯತೇ ॥ ೪೦
ಇತಿ ತೇನೋದಿತಾ ಪಿತ್ರಾ ರಾಜಪುತ್ರೀ ಮನೋಗತಾಮ್ ।
ವಾಚಂ ಕನಕರೇಖಾ ಸಾ ತತ್‌ಕ್ಷಣಂ ಸಮುದೈರಯತ್ ॥ ೪೧

೪೨-೪೩. "ಅಪ್ಪ, ಹಾಗಾದರೆ ಯಾವ ಧೀಮಂತನಾದ ವಿಪ್ರನೋ, ಕ್ಷತ್ರಿಯನೋ ಕನಕಪುರೀ ಎಂಬ ಪಟ್ಟಣವನ್ನು ನೋಡಿರುವನೋ, ಅವನಿಗೆ ನನ್ನನ್ನು ಕೊಡಬೇಕು. ಅವನೇ ನನ್ನ ಗಂಡನಾಗುವನು. ಹಾಗಾಗದಿದ್ದರೆ ಸುಮ್ಮ ಸುಮ್ಮನೆ ನನ್ನನ್ನು ತೆಗಳುವುದು ಬೇಡ.'

೪೪. ಅವಳು ಹೀಗೆಂದಾಗ ರಾಜನು ಆಲೋಚಿಸಿದನು. ""ಸುದೈವದಿಂದ ಇವಳು ಮದುವೆಯ ಪ್ರಸ್ತಾವವನ್ನು ಒಪ್ಪಿಕೊಂಡಿದ್ದಾಳೆ.

೪೫. ನಿಶ್ಚಿತವಾಗಿ ಇವಳು ಯಾವುದೋ ಕಾರಣದಿಂದ ನನ್ನ ಮನೆಯಲ್ಲಿ ಹುಟ್ಟಿರುವ ದೇವತೆಯೇ. ಹಾಗಿಲ್ಲದಿದ್ದರೆ, ಹುಡುಗಿಯಾಗಿರುವಾಗಲೇ ಇಷ್ಟೊಂದನ್ನು ತಿಳಿದುಕೊಂಡಿರುವುದು ಹೇಗೆ?"

೪೬. ಹೀಗೆ ಆಲೋಚಿಸಿ 'ಹಾಗೆಯೇ ಆಗಲಿ' ಎಂದು ಮಗಳಿಗೆ ಹೇಳಿ ಎದ್ದು ರಾಜನು ತನ್ನ ಆ ದಿನದ ಕರ್ತವ್ಯಗಳನ್ನು ಮಾಡಿದನು.

೪೭. ಮಾರನೆಯ ದಿನ ಆಸ್ಥಾನಕ್ಕೆ ಹೋದ ಅವನು ಅಕ್ಕಪಕ್ಕದಲ್ಲಿ ಇದ್ದವರನ್ನು ಕುರಿತು ""ನಿಮ್ಮಲ್ಲಿ ಯಾರಾದರೂ ಕನಕಪುರೀ ಎಂಬ ನಗರವನ್ನು ನೋಡಿದ್ದೀರಾ?" ಎಂದು ಕೇಳಿದನು.

---

ಯದ್ಯೇವಂ ತಾತ ತದ್ಯೇನ ವಿಪ್ರೇಣ ಕ್ಷತ್ರಿಯೇಣ ವಾ ।
ದೃಷ್ಟಾ ಕನಕಪುರ್ಯಾಖ್ಯಾ ನಗರೀ ಕೃತಿನಾ ಕಿಲ ॥ ೪೨
ತಸ್ಮೈ ತ್ವಯಾಹಂ ದಾತವ್ಯಾ ಸ ಮೇ ಭರ್ತಾ ಭವಿಷ್ಯತಿ ।
ನಾನ್ಯಥಾ ತಾತ ಮಿಥ್ಯೈವ ಕರ್ತವ್ಯಾ ಮೇ ಕದರ್ಥನಾ ॥ ೪೩
ಏವಂ ತಯೋಕ್ತೇ ಸುತಯಾ ಸ ರಾಜಾ ಸಮಚಿಂತಯತ್ ।
ದಿಷ್ಟ್ಯೋದ್ವಾಹಸ್ಯ ತತ್ತಾವತ್ ಪ್ರಸಂಗೋಽಂಗೀಕೃತೋಽನಯಾ ॥ ೪೪
ನೂನಂ ಚ ಕಾರಣೋತ್ಪನ್ನಾ ದೇವೀಯಂ ಕಾಪಿ ಮದ್ಗೃಹೇ ।
ಇಯತ್ ಕಥಂ ವಿಜಾನಾತಿ ಬಾಲಾ ಭೂತ್ವಾನ್ಯಥಾ ಹ್ಯಸೌ ॥ ೪೫
ಇತಿ ಸಂಚಿಂತ್ಯ ತತ್ಕಾಲಂ ತಥೇತ್ಯುಕ್ತ್ವಾ ಚ ತಾಂ ಸುತಾಮ್ ।
ಉತ್ಥಾಯ ದಿನಕರ್ತವ್ಯಂ ಸ ಚಕಾರ ಮಹೀಪತಿಃ ॥ ೪೬
ಅನ್ಯೇದ್ಯುರಾಸ್ಥಾನಗತೋ ಜಗಾದ ಸ ಚ ಪಾರ್ಶ್ವಗಾನ್ ।
ದೃಷ್ಟಾ ಕನಕಪುರ್ಯಾಖ್ಯಾ ಪುರೀ ಯುಷ್ಮಾಸು ಕೇನಚಿತ್ ॥ ೪೭

೪೮. ""ವಿಪ್ರನಾಗಲಿ, ಕ್ಷತ್ರಿಯನಾಗಲಿ, ಯಾವನಾದರೂ ಕನಕಪುರಿಯನ್ನು ನೋಡಿದ್ದರೆ ಅವನಿಗೆ ನಾನು ಕನಕರೇಖೆಯನ್ನೂ ಯುವರಾಜ ಪದವಿಯನ್ನೂ ನೀಡುತ್ತೇನೆ" ಎಂದು ಅವನು ಹೇಳಿದನು.

೪೯. ಅವರೆಲ್ಲರೂ ಪರಸ್ಪರ ಮುಖಗಳನ್ನು ನೋಡಿಕೊಳ್ಳುತ್ತಾ "ದೇವ, ನಾವು ಕನಕಪುರಿಯ ಹೆಸರನ್ನೂ ಕೇಳಿಲ್ಲ. ಇನ್ನು ಅದನ್ನು ನೋಡಿರುವುದರ ಕಥೆ ಏನು ಬಂತು?" ಎಂದು ಹೇಳಿದರು.

೫೦–೫೧. ಆಗ ರಾಜನು ದ್ವಾರಪಾಲಕನನ್ನು ಕರೆಸಿ ಅವನಿಗೆ ಅಪ್ಪಣೆ ಮಾಡಿದನು. "ಹೋಗು, ಈ ಊರಿನಲ್ಲೆಲ್ಲ ತಮಟೆ ಬಾರಿಸಿ ಘೋಷಣೆ ಮಾಡಿಸು. ಯಾರಾದರೂ ಆ ಕನಕಪುರಿಯನ್ನು ನೋಡಿದ್ದಾರೋ ಇಲ್ಲವೋ ತಿಳಿದುಕೊಂಡು ಬಾ." ಹೀಗೆ ಆಜ್ಞಾಪಿಸಲ್ಪಟ್ಟ ದ್ವಾರಪಾಲಕನು 'ಹಾಗೇ ಆಗಲಿ' ಎಂದು ಹೊರಟನು.

೫೨. ಅಲ್ಲಿಂದ ಹೊರಟ ಪ್ರತೀಹಾರನು ಆ ಕ್ಷಣದಲ್ಲೇ ರಾಜಪುರುಷರಿಗೆ ಆದೇಶವನ್ನಿತ್ತು ಕೇಳಿದವರ ಕಿವಿಗೆ ಕುತೂಹಲವನ್ನುಂಟು ಮಾಡುವಂತೆ ತಮಟೆ ಹೊಡೆಸಿದನು.

೫೩. ""ವಿಪ್ರನಾಗಲಿ, ಕ್ಷತ್ರಿಯ ತರುಣನಾಗಲಿ, ಯಾವನು ಕನಕಪುರೀ ಎಂಬ ನಗರವನ್ನು ನೋಡಿರುವನೋ ಅವನಿಗೆ ರಾಜನು ತನ್ನ ಮಗಳನ್ನೂ ಯುವರಾಜ ಪದವಿಯನ್ನೂ ನೀಡುವನು"

---

ಯೇನ ದೃಷ್ಟಾ ಚ ಸಾ ತಸ್ಮೈ ವಿಪ್ರಾಯ ಕ್ಷತ್ರಿಯಾಯ ವಾ ।
ಮಯಾ ಕನಕರೇಖಾ ಚ ಯೌವರಾಜ್ಯಂ ಚ ದೀಯತೇ ॥ ೪೮
ಶ್ರುತಾಪಿ ನೈವ ಸಾಸ್ಮಾಭಿರ್ದರ್ಶನೇ ದೇವ ಕಾ ಕಥಾ? ।
ಇತಿ ತೇ ಚಾವದನ್ ಸರ್ವೇ ಅನ್ಯೋನ್ಯಾನನದರ್ಶಿನಃ ॥ ೪೯
ತತೋ ರಾಜಾ ಪ್ರತೀಹಾರಮಾನೀಯಾದಿಶತಿ ಸ್ಮ ಸಃ ।
ಗಚ್ಛ ಭ್ರಮಯ ಕೃತ್ಸ್ನೇ□ತ್ರ ಪುರೇ ಪಟಹಘೋಷಣಾಮ್ ॥ ೫೦
ಜಾನೀಹಿ ಯದಿ ಕೇನಾಪಿ ದೃಷ್ಟಾ ಸಾ ನಗರೀ ನ ವಾ ।
ಇತ್ಯಾದಿಷ್ಟಃ ಪ್ರತೀಹಾರಃ ಸ ತಥೇತಿ ವಿನಿರ್ಯಯೌ ॥ ೫೧
ನಿರ್ಗತ್ಯ ಚ ಸಮಾದಿಶ್ಯ ತತ್ಕ್ಷಣಂ ರಾಜಪೂರುಷಾನ್ ।
ಭ್ರಾಮಯಾಮಾಸ ಪಟಹಂ ಕೃತಶ್ರವಣಕೌತುಕಮ್ ॥ ೫೨
ವಿಪ್ರಃ ಕ್ಷತ್ರಯುವಾ ವಾ ಕನಕಪುರೀಂ ಯೋ□ತ್ರ ದೃಷ್ಟವಾನ್ನಗರೀಮ್ ।
ವದತು ಸ ತಸ್ಮೈ ರಾಜಾ ದದಾತಿ ತನಯಾಂ ಚ ಯೌವರಾಜ್ಯಂ ಚ ॥ ೫೩

೫೪. ಎಂದು ನಗರದಲ್ಲಿ ಎಲ್ಲ ಸ್ಥಳಗಳಲ್ಲೂ ತಮಟೆ ಶಬ್ದದೊಡನೆ ಈ ಆಶ್ಚರ್ಯಕರವಾದ ಘೋಷಣೆಯನ್ನು ಮಾಡಲಾಯಿತು.

೫೫. ""ಈ ಊರಿನಲ್ಲಿ ಏನಿದು ಕನಕಪುರಿಯ ಬಗೆಗೆ ಘೋಷಣೆ? ಅದನ್ನು ನಾವು ಮುದುಕರು ಕೂಡ ನೋಡಿಲ್ಲ. ಅದರ ಬಗೆಗೆ ಎಂದೂ ಕೇಳೂ ಇಲ್ಲ."

೫೬. ಹೀಗೆ ಆ ಘೋಷಣೆಯನ್ನು ಕೇಳಿದ ಪೌರರು ಮಾತನಾಡಿಕೊಂಡರು. ನಾನು ನೋಡಿದ್ದೇನೆ ಎಂದು ಒಬ್ಬನಾದರೂ ಹೇಳಲಿಲ್ಲ.

೫೭. ಅಷ್ಟರಲ್ಲಿ ಆ ಊರಿನ ಒಬ್ಬ ನಿವಾಸಿ, ಬಲದೇವನ ಮಗ ಶಕ್ತಿದೇವ ಎಂಬ ಬ್ರಾಹ್ಮಣನು ಆ ಘೋಷಣೆಯನ್ನು ಕೇಳಿಸಿಕೊಂಡನು.

೫೮. ಆ ಯುವಕನು ಚಟಗಳಿಗೆ ವಶನಾಗಿದ್ದು ಆಗ ತಾನೆ ಜೂಜಿನಿಂದ ಹಣವನ್ನೆಲ್ಲ ಕಳೆದುಕೊಂಡಿದ್ದನು. ರಾಜಪುತ್ರಿಯನ್ನು ಕೊಡುವನು ಎಂಬುದನ್ನು ಕೇಳಿ ಮನಸ್ಸನ್ನು ಉಬ್ಬಿಸಿಕೊಂಡು ಹೀಗೆ ಚಿಂತಿಸಿದನು.

೫೯. "ಜೂಜಿನಲ್ಲಿ ಎಲ್ಲ ಹಣವನ್ನು ಕಳೆದುಕೊಂಡಿರುವ ನನಗೆ ತಂದೆಯ ಮನೆಯಲ್ಲಾಗಲಿ, ಸೂಳೆಯ ಮನೆಯಲ್ಲಾಗಲಿ ಪ್ರವೇಶವೇ ಇಲ್ಲ.

೬೦. ಆದ್ದರಿಂದ ಬೇರೆ ಗತಿಯಿಲ್ಲದ ನಾನು 'ನಾನು ಆ ನಗರವನ್ನು ನೋಡಿದ್ದೇನೆ' ಎಂಬ ಸುಳ್ಳನ್ನು ತಮಟೆ ಬಾರಿಸಿ ಘೋಷಣೆ ಮಾಡುವವರಿಗೆ ಹೇಳುತ್ತೇನೆ. ಇದೇ ಲೇಸು.

---

ಇತಿ ಚೇತಸ್ತತಸ್ತತ್ರ ನಗರೇ ದತ್ತವಿಸ್ಮಯಮ್ ।
ತದಘೋಷ್ಯತ ಸರ್ವತ್ರ ಪಟಹಾನಂತರಂ ವಚಃ ॥ ೫೪
ಕೇಯಂ ಪುರೇಽಸ್ಮಿನ್ ಕನಕಪುರೀ ನಾಮಾದ್ಯ ಘೋಷ್ಯತೇ ।
ಯಾ ವೃದ್ಧೈರಪಿ ನಾಸ್ಮಾಭಿರ್ದೃಷ್ಟಾ ಜಾತು ಚ ನ ಶ್ರುತಾ ॥ ೫೫
ಇತ್ಯೇವಂ ಚಾವದನ್ ಪೌರಾಃ ಶ್ರುತ್ವಾ ತಾಂ ತತ್ರ ಘೋಷಣಾಮ್ ।
ನ ಪುನಃ ಕಶ್ಚಿದೇಕೋಽಪಿ ಮಯಾ ದೃಷ್ಟೇತ್ಯಭಾಷತ ॥ ೫೬
ತಾವಚ್ಚ ತನ್ನಿವಾಸ್ಯೇಕಃ ಶಕ್ತಿದೇವ ಇತಿ ದ್ವಿಜಃ ।
ಬಲದೇವತನೂಜಸ್ತಾಮಶೃಣೋತ್ತತ್ರ ಘೋಷಣಾಮ್ ॥ ೫೭
ಸ ಯುವಾ ವ್ಯಸನೀ ಸದ್ಯೋ ದ್ಯೂತೇನ ವಿಧನೀಕೃತಃ ।
ಅಚಿಂತಯದ್ ರಾಜಸುತಾಪ್ರದಾನಾಕರ್ಣನೋನ್ಮನಾಃ ॥ ೫೮
ದ್ಯೂತಹಾರಿತನಿಃಶೇಷವಿತ್ತಸ್ಯ ಮಮ ನಾಧುನಾ ।
ಪ್ರವೇಶೋಽಸ್ತಿ ಪಿತುರ್ಗೇಹೇ ನಾಪಿ ಪಣ್ಯಾಂಗನಾಗೃಹೇ ॥ ೫೯
ತಸ್ಮಾದಗತಿಕಸ್ತಾವದ್ವರಂ ಮಿಥ್ಯಾ ಬ್ರವೀಮ್ಯಹಮ್ ।
ಮಯಾ ಸಾ ನಗರೀ ದೃಷ್ಟೇತ್ಯೇವಂ ಪಟಹಘೋಷಕಾನ್ ॥ ೬೦

೬೧. ನನಗೆ ಆ ಊರಿನ ಬಗೆಗೆ ತಿಳಿದಿಲ್ಲವೆಂಬುದು ಯಾರಿಗೆ ಗೊತ್ತಾಗುತ್ತದೆ ? ಆ ಊರನ್ನು ಯಾರು ತಾನೆ ನೋಡಿದ್ದಾರೆ? ಅಕಸ್ಮಾತ್ ಈ ರೀತಿ ನನಗೆ ರಾಜಪುತ್ರಿಯೊಡನೆ ಸಮಾಗಮ ಆದರೂ ಆಗಬಹುದು".

೬೨. ಹೀಗೆ ಆಲೋಚಿಸಿ ರಾಜಭಟರ ಬಳಿಗೆ ಹೋಗಿ ಶಕ್ತಿದೇವನು "ನಾನು ಆ ನಗರವನ್ನು ನೋಡಿದ್ದೇನೆ" ಎಂದು ಸುಳ್ಳನ್ನು ಹೇಳಿದನು.

೬೩. "ಸುದೈವದಿಂದ (ನೀನು ಸಿಕ್ಕಿರುವೆ), ಹಾಗಾದರೆ ಪ್ರತೀಹಾರನ ಬಳಿಗೆ ಬಾ, ಈಗಲೇ ಬಾ" ಎಂದು ಹೇಳಿದ ಭಟರೊಡನೆ ಅವನು ಪ್ರತೀಹಾರನ ಬಳಿಗೆ ಹೋದನು.

೬೪. ಅವನಿಗೂ ಶಕ್ತಿದೇವನು ಅದೇ ರೀತಿಯಲ್ಲಿ ಆ ನಗರದ ದರ್ಶನದ ಬಗೆಗೆ ಸುಳ್ಳು ಹೇಳಿದನು. ಪ್ರತೀಹಾರನು ಅವನನ್ನು ಸತ್ಕರಿಸಿ ರಾಜನ ಬಳಿಗೆ ಒಯ್ದನು.

೬೫. ರಾಜನ ಎದುರಿನಲ್ಲೂ ಯಾವ ಹಿಂಜರಿಕೆಯೂ ಇಲ್ಲದೆ ಅವನು ಹಾಗೆಯೇ ಸುಳ್ಳನ್ನು ಹೇಳಿದನು. ಜೂಜಿನಲ್ಲಿ ಪಳಗಿದ ಜೂಜುಕೋರನಿಗೆ ಕಷ್ಟವಾದುದು ಏನಿದೆ?

೬೬. ರಾಜನು ನಿಶ್ಚಯವನ್ನು ತಿಳಿದುಕೊಳ್ಳುವುದಕೋಸ್ಕರ ಆ ಬ್ರಾಹ್ಮಣನನ್ನು ತನ್ನ ಮಗಳಾದ ಕನಕರೇಖೆಯ ಬಳಿಗೆ ಕಳುಹಿಸಿದನು.

೬೭. ಪ್ರತೀಹಾರನ ಬಾಯಿಂದ (ಹೇಗೆ ಹೋಗಬೇಕೆಂಬುದನ್ನು) ತಿಳಿದುಕೊಂಡು (ರಾಜಪುತ್ರಿಯ) ಬಳಿಗೆ ಬಂದ ಅವನನ್ನು ಅವಳು ""ನೀನು ಆ ನಗರವನ್ನು ನೋಡಿದ್ದೀಯಾ?" ಎಂದು ಕೇಳಿದಳು.

---

ಕೋ ಮಾಂ ಪ್ರತ್ಯೇತ್ಯವಿಜ್ಞಾನಂ ಕೇನ ದೃಷ್ಟಾ ಕದಾ ಹಿ ಸಾ ।
ಸ್ಯಾದೇವಂ ಚ ಕದಾಚಿನ್ಮೇ ರಾಜಪುತ್ರ್ಯಾ ಸಮಾಗಮಃ ॥ ೬೧
ಇತಿ ಸಂಚಿಂತ್ಯ ಗತ್ವಾ ತಾನ್ ಸ ರಾಜಪುರುಷಾಂಸ್ತದಾ ।
ಶಕ್ತಿದೇವೋ ಮಯಾ ದೃಷ್ಟಾ ಸಾ ಪುರೀತ್ಯವದನ್ಮೃಷಾ ॥ ೬೨
ದಿಷ್ಟ್ಯಾ ತರ್ಹಿ ಪ್ರತೀಹಾರಪಾರ್ಶ್ವಮೇಹೀತಿ ತತ್ ಕ್ಷಣಮ್ ।
ಉಕ್ತವದ್ಭಿಶ್ಚ ತೈಃ ಸಾಕಂ ಸ ಪ್ರತೀಹಾರಮಭ್ಯಗಾತ್ । ೬೩
ತಸ್ಮೈ ತಥೈವ ಚಾಶಂಚತ್ ತತ್ಪುರೀದರ್ಶನಂ ಮೃಷಾ ।
ತೇನಾಪಿ ಸತ್ಕೃತ್ಯ ತತೋ ರಾಜಾಂತಿಕಮನೀಯತ ॥ ೬೪
ರಾಜಾಗ್ರೇ□ಪ್ಯವಿಕಲ್ಪಃ ಸಂಸ್ತಥೈವ ಚ ತದಬ್ರವೀತ್ ।
ದ್ಯೂತತಾಂತಸ್ಯ ಕಿಂ ನಾಮ ಕಿತವಸ್ಯ ಹಿ ದುಷ್ಕರಮ್ ॥ ೬೫
ರಾಜಾಪಿ ನಿಶ್ಚಯಂ ಜ್ಞಾತುಂ ಬ್ರಾಹ್ಮಣಂ ತಂ ವಿಸೃಷ್ಟವಾನ್ ।
ತಸ್ಯಾಃ ಕನಕರೇಖಾಯಾ ದುಹಿತುರ್ನಿಕಟಂ ತದಾ ॥ ೬೬
ತಥಾ ಚ ಸ ಪ್ರತೀಹಾರಮುಖಾಜ್ಜ್ಞಾತ್ವಾಂತಿಕಾಗತಃ ।
ಕಚ್ಚಿತ್ತ್ವಯಾ ಸಾ ಕನಕಪುರೀ ದೃಷ್ಟೇತ್ಯಪೃಚ್ಛ್ಯತ ॥ ೬೭

೬೮. "ನಾನು ವಿದ್ಯಾರ್ಥಿಯಾಗಿದ್ದಾಗ ಭೂಮಿಯನ್ನೆಲ್ಲ ಸುತ್ತುತ್ತಿದ್ದೆನು. ಆಗ ನಾನು ಆ ನಗರವನ್ನು ಚೆನ್ನಾಗಿ ನೋಡಿದ್ದೇನೆ' ಎಂದು ಅವನು ಅವಳಿಗೆ ಉತ್ತರಿಸಿದನು.

೬೯. "ನೀನು ಯಾವ ಮಾರ್ಗದಿಂದ ಅಲ್ಲಿಗೆ ಹೋಗಿದ್ದೆ ? ಆ ನಗರ ಹೇಗಿದೆ?' ಎಂದು ಮತ್ತೆ ಅವಳು ಪ್ರಶ್ನಿಸಲು ಆ ಬ್ರಾಹ್ಮಣನು ಹೀಗೆ ಹೇಳಿದನು.

೭೦. "ಇಲ್ಲಿಂದ ನಾನು ಹರಪುರ ಎಂಬ ನಗರಕ್ಕೆ ಹೋಗಿದ್ದೆನು. ಅಲ್ಲಿಂದ ಕ್ರಮವಾಗಿ ವಾರಾಣಸಿಗೆ ತಲುಪಿದೆನು.

೭೧. ವಾರಾಣಸಿಯಿಂದ ಕೆಲವು ದಿವಸಗಳಲ್ಲಿ ಪೌಂಡ್ರವರ್ಧನನಗರಕ್ಕೆ ಹೋಗಿ ಅಲ್ಲಿಂದ ಕನಕಪುರೀ ಎಂಬ ಹೆಸರಿನ ಆ ನಗರಕ್ಕೆ ಹೋದೆನು.

೭೨. ಆ ಕನಕಪುರಿಯು ಪುಣ್ಯಕರ್ಮಗಳನ್ನು ಮಾಡಿದವರಿಗೆ ಭೋಗಭೂಮಿ, ಆ ಕನಕಪುರಿಯನ್ನು ಕಂಡೆನು. ರೆಪ್ಪೆ ಮಿಟುಕಿಸದ ಕಣ್ಣುಗಳಿಂದ ಅದರ ಸೊಬಗನ್ನು ಸವಿಯ ಬೇಕಾಗಿರುವುದರಿಂದ ಅದು ಇಂದ್ರನ ನಗರದಂತಿದೆ.

೭೩. ಅಲ್ಲಿ ವಿದ್ಯೆಯನ್ನು ಗಳಿಸಿ ಸ್ವಲ್ಪಕಾಲಾನಂತರ ನಾನಿಲ್ಲಿಗೆ ಬಂದೆನು. ಹೀಗೆ ಆ ಮಾರ್ಗದಿಂದ ನಾನು ಹೋಗಿದ್ದೆನು ಮತ್ತು ಆ ನಗರವು ಹೀಗಿರುವುದು.'

೭೪. ಈ ರೀತಿ ಆ ವಂಚಕ ಬ್ರಾಹ್ಮಣ ಶಕ್ತಿದೇವನು ಮಾತುಗಳನ್ನು ಕಟ್ಟಿ ಹೇಳಲು ಆ ರಾಜಪುತ್ರಿಯು ನಗುತ್ತಾ ಇಂತೆಂದಳು.

---

ಬಾಢಂ ಮಯಾ ಸಾ ನಗರೀ ದೃಷ್ಟಾ ವಿದ್ಯಾರ್ಥಿನಾ ಸತಾ ।
ಭ್ರಮತಾ ಭುವಮಿತ್ಯೇವಂ ಸೋಽಪಿ ತಾಂ ಪ್ರತ್ಯಭಾಷತ ॥ ೬೮
ಕೇನ ಮಾರ್ಗೇಣ ತತ್ರ ತ್ವಂ ಗತವಾನ್ ಕೀದೃಶೀ ಚ ಸಾ ।
ಇತಿ ಭೂಯಸ್ತಯಾ ಪೃಷ್ಟಃ ಸ ವಿಪ್ರೋಽಪ್ಯೇವಮಬ್ರವೀತ್ ॥ ೬೯
ಇತೋ ಹರಪುರಂ ನಾಮ ನಗರಂ ಗತವಾನಹಮ್ ।
ತತೋಽಪಿ ಪ್ರಾಪ್ತವಾನಸ್ಮಿ ಪುರೀಂ ವಾರಾಣಸೀಂ ಕ್ರಮಾತ್ ॥ ೭೦
ವಾರಾಣಸ್ಯಾಶ್ಚ ದಿವಸೈರ್ನಗರಂ ಪೌಂಡ್ರವರ್ಧನಮ್ ।
ತಸ್ಮಾತ್ ಕನಕಪುರ್ಯಾಖ್ಯಾಂ ನಗರೀಂ ತಾಂ ಗತೋಽಭವಮ್ ॥ ೭೧
ದೃಷ್ಟಾ ಮಯಾ ಚ ಸಾ ಭೋಗಭೂಮಿಃ ಸುಕೃತಕರ್ಮಣಾಮ್ ।
ಅನಿಮೇಷೇಕ್ಷಣಾಸ್ವಾದ್ಯಶೋಭಾ ಶಕ್ರಪುರೀ ಯಥಾ ॥ ೭೨
ತತ್ರಾಧಿಗತವಿದ್ಯಶ್ಚ ಕಾಲೇನಾಹಮಿಹಾಗಮಮ್ ।
ಇತಿ ತೇನಾಸ್ಮಿ ಗತವಾನ್ ಪಥಾ ಸಾಪಿ ಪುರೀದೃಶೀ ॥ ೭೩
ಏವಂ ವಿರಚಿತೋಕ್ತೌ ಚ ಧೂರ್ತೇ ತಸ್ಮಿನ್ ದ್ವಿಜನ್ಮನಿ ।
ಶಕ್ತಿದೇವೇ ಸಹಾಸಂ ಸಾ ವ್ಯಾಜಹಾರ ನೃಪಾತ್ಮಜಾ ॥ ೭೪

೭೫ ""ಆಹಾ, ಸತ್ಯ! ಮಹಾಬ್ರಾಹ್ಮಣ, ಆ ನಗರವನ್ನು ನೀನು ನೋಡಿದ್ದೀಯಲ್ಲ, ಹೇಳು, ಇನ್ನೊಂದು ಸಲ ಹೇಳು, ಯಾವ ಮಾರ್ಗದಿಂದ ನೀನು ಅಲ್ಲಿಗೆ ಹೋಗಿದ್ದೆ?"

೭೬. ಅದನ್ನು ಕೇಳಿ ಶಕ್ತಿದೇವನು ಪೊಳ್ಳು ಧೈರ್ಯದಿಂದ ಯಾವಾಗ ಮತ್ತೆ ಅದನ್ನೇ ಹೇಳಿದನೋ ಆಗ ರಾಜಪುತ್ರಿಯು ದಾಸಿಯರಿಂದ ಅವನನ್ನು ಆಚೆಗೆ ತಳ್ಳಿಸಿದಳು.

೭೭. ಅವನನ್ನು ಹೊರಗೆ ತಳ್ಳಿಸಿ ಆಗಲೇ ಅವಳು ತಂದೆಯ ಬಳಿಗೆ ಹೋದಳು. "ಆ ಬ್ರಾಹ್ಮಣನು ಸತ್ಯವನ್ನು ಹೇಳಿದನೇ' ಎಂದು ತಂದೆ ಅವಳನ್ನು ಕೇಳಿದನು.

೭೮. ಆಗ ಆ ರಾಜಪುತ್ರಿಯು ತಂದೆಗಿಂತೆಂದಳು. 'ಅಪ್ಪ ರಾಜನಾಗಿದ್ದರೂ ನೀನು ವಿಚಾರ ಮಾಡದೆ ಏನೇನನ್ನೋ ಮಾಡುವೆ.

೭೯. ಮೋಸಗಾರರು ನೇರವಾಗಿ ವ್ಯವಹರಿಸುವ ಮುಗ್ಧರಿಗೆ ವಂಚನೆ ಮಾಡುತ್ತಾರೆ ಎಂಬುದನ್ನರಿಯೆಯಾ ? ಆ ಬ್ರಾಹ್ಮಣನು ಸುಳ್ಳು ಹೇಳಿ ನನಗೆ ಮೋಸ ಮಾಡಲು ಬಯಸುತ್ತಾನೆ.

೮೦. ಸುಳ್ಳು ಹೇಳುತ್ತಿರುವ ಅವನು ಆ ನಗರವನ್ನು ನೋಡೇ ಇಲ್ಲ. ಧೂರ್ತರು ಭೂಲೋಕದಲ್ಲಿ ಅನೇಕ ಪ್ರಕಾರದ ಮೋಸಗಳನ್ನು ಮಾಡುತ್ತಾರೆ.

೮೧. ಇದರ ಬಗೆಗೆ ಶಿವಮಾಧವವೃತ್ತಾಂತವನ್ನು ಹೇಳುತ್ತೇನೆ, ಕೇಳು.' ಹೀಗೆಂದು ಆ ರಾಜಪುತ್ರಿಯು ಈ ಕಥೆಯನ್ನು ಹೇಳಿದಳು.

---

ಅಹೋ ಸತ್ಯಂ ಮಹಾಬ್ರಹ್ಮನ್ ದೃಷ್ಟಾ ಸಾ ನಗರೀ ತ್ವಯಾ ।
ಬ್ರೂಹಿ ಬ್ರೂಹಿ ಪುನಸ್ತಾವತ್ ಕೇನಾಪಿ ಗತವಾನ್ ಪಥಾ ? ॥ ೭೫
ತಚ್ಛ್ರುತ್ವಾ ಸ ಯದಾ ಧಾರ್ಷ್ಟ್ಯಂ ಶಕ್ತಿದೇವೋಽಕರೋತ್ ಪುನಃ ।
ತದಾ ತಂ ರಾಜಪುತ್ರೀ ಸಾ ಚೇಟೀಭಿರ್ನಿರಕಾಸಯತ್ ॥ ೭೬
ನಿರ್ವಾಸಿತೇ ಯಯೌ ಚಾಸ್ಮಿನ್ ಪಿತುಃ ಪಾರ್ಶ್ವಂ ತದೈವ ಸಾ ।
ಕಿಂ ಸತ್ಯಮಾಹ ವಿಪ್ರೋಽಸಾವಿತಿ ಪಿತ್ರಾಪ್ಯಪೃಚ್ಛ್ಯತ ॥ ೭೭
ತತಶ್ಚ ಸಾ ರಾಜಸುತಾ ಜನಕಂ ನಿಜಗಾದ ತಮ್ ।
ತಾತ ರಾಜಾಪಿ ಭೂತ್ವಾ ತ್ವಮವಿಚಾರ್ಯೈವ ಚೇಷ್ಟಸೇ ॥ ೭೮
ಕಿಂ ನ ಜಾನಾಸಿ ಧೂರ್ತಾ ಯದ್ ವಂಚಯಂತೇ ಜನಾನ್ ಋಜೂನ್ ।
ಸ ಹಿ ಮಿಥ್ಯೈವ ವಿಪ್ರೋ ಮಾಂ ಪ್ರತಾರಯಿತುಮೀಹತೇ ॥ ೭೯
ನ ಪುನರ್ನಗರೀ ತೇನ ದೃಷ್ಟಾ ಸಾಲೀಕವಾದಿನಾ ।
ಧೂರ್ತೈರನೇಕಾಕಾರಾಶ್ಚ ಕ್ರಿಯಂತೇ ಭುವಿ ವಂಚನಾಃ ॥ ೮೦
ಶಿವಮಾಧವವೃತ್ತಾಂತಂ ತಥಾ ಹಿ ಶೃಣು ವಚ್ಮಿ ತೇ ।
ಇತ್ಯುಕ್ತ್ವಾ ರಾಜಕನ್ಯಾ ಸಾ ವ್ಯಾಜಹಾರ ಕಥಾಮಿಮಾಮ್ ॥ ೮೧

## ಶಿವ-ಮಾಧವರೆಂಬ ವಂಚಕರ ಕಥೆ

೮೧. ರತ್ನಪುರವೆಂಬ ಯಥಾರ್ಥವಾದ ಹೆಸರಿನ ಒಂದು ಶ್ರೇಷ್ಠ ನಗರವಿದೆ. ಅದರಲ್ಲಿ ಶಿವ, ಮಾಧವ ಎಂಬ ಹೆಸರಿನ ಇಬ್ಬರು ವಂಚಕರಿದ್ದರು.

೮೨. ಬೇರೆ ಅನೇಕ ಮೋಸಗಾರರನ್ನೂ ತಮ್ಮ ಪರಿವಾರದಲ್ಲಿ ಸೇರಿಸಿಕೊಂಡು ಅವರಿಬ್ಬರೂ ಬಹುಕಾಲದ ವರೆಗೆ ತಮ್ಮ ಮಾಯಾಪ್ರಯೋಗಗಳಿಂದ ಆ ಊರಿನ ಸಿರಿವಂತರೆಲ್ಲರನ್ನೂ ಬರಿಗೈಯವರನ್ನಾಗಿ ಮಾಡಿದರು.

೮೩. ಒಮ್ಮೆ ಅವರಿಬ್ಬರೂ ಪರಸ್ಪರ ಹೀಗೆ ಗುಟ್ಟಾಗಿ ಮಾತನಾಡಿಕೊಂಡರು. "'ಈ ನಗರವನ್ನು ಪೂರ್ಣವಾಗಿ ನಾವು ಲೂಟಿ ಹೊಡೆದಿದ್ದಾಯಿತು.

೮೪. ಇಲ್ಲಿಂದ ನಾವು ಉಜ್ಜಯಿನೀನಗರಕ್ಕೆ ವಾಸಮಾಡಲು ಹೋಗೋಣ. ಅಲ್ಲಿ ರಾಜನ ಪುರೋಹಿತನು ತುಂಬ ಹೆಚ್ಚು ಹಣವಂತನೆಂದು ಕೇಳಿದ್ದೇವೆ.

೮೫. ಶಂಕರಸ್ವಾಮಿ ಎಂಬ ಹೆಸರಿನ ಅವನಿಂದ ಹಣವನ್ನು ಯುಕ್ತಿಯಿಂದ ಕಿತ್ತುಕೊಂಡು ಮಾಲವದೇಶದ ಹೆಣ್ಣುಗಳ ವಿಲಾಸದ ರಸವನ್ನು ಹೀರಿ ಅನುಭವಿಸೋಣ.

೮೬. ದಕ್ಷಿಣೆಯ ಹಣವನ್ನು ಗಿಟ್ಟಿಸಿಕೊಳ್ಳುವ ಅವನು ಯಾವಾಗಲೂ ಮುಖದಲ್ಲಿ ಹುಬ್ಬು ಗಂಟಿಕ್ಕಿಕೊಂಡಿರುತ್ತಾನೆ. ಏಳು ಮಡಕೆ ಹಣದ ಯಮ ಎಂದು ಬ್ರಾಹ್ಮಣರು ಅವನನ್ನು ಕರೆಯುತ್ತಾರೆ.

---

ಅಸ್ತಿ ರತ್ನಪುರಂ ನಾಮ ಯಥಾರ್ಥಂ ನಗರೋತ್ತಮಮ್ ।
ಶಿವಮಾಧವಸಂಜ್ಞೌ ಚ ಧೂರ್ತೌ ತತ್ರ ಬಭೂವತುಃ ॥ ೮೧
ಪರಿವಾರೀಕೃತಾನೇಕಧೂರ್ತೌ ತೌ ಚಕ್ರತುಶ್ಚಿರಮ್ ।
ಮಾಯಾಪ್ರಯೋಗನಿಃಶೇಷಮುಷಿತಾಢ್ಯಜನಂ ಪುರಮ್ ॥ ೮೨
ಏಕದಾ ದ್ವೌ ಚ ತಾವೇವಂ ಮಂತ್ರಂ ವಿದಧತುರ್ಮಿಥಃ ।
ಇದಂ ನಗರಮಾವಾಭ್ಯಾಂ ಕೃತ್ಸ್ನಂ ತಾವದ್ ವಿಲುಂಠಿತಮ್ ॥ ೮೩
ಅತಃ ಸಂಪ್ರತಿ ಗಚ್ಛಾವೋ ವಸ್ತುಮುಜ್ಜಯಿನೀಂ ಪುರೀಮ್ ।
ತತ್ರ ತು ಶ್ರೂಯತೇ ರಾಜ್ಞಃ ಪುರೋಧಾಃ ಸುಮಹಾಧನಃ ॥ ೮೪
ಶಂಕರಸ್ವಾಮಿನಾಮಾ ಚ ತಸ್ಮಾದ್ಯುಕ್ತ್ಯಾ ಹೃತೈರ್ಧನೈಃ ।
ಮಾಲವಸ್ತ್ರೀವಿಲಾಸಾನಾಂ ಯಾಸ್ಯಾಮೋಽತ್ರ ರಸಜ್ಞತಾಮ್ ॥ ೮೫
ಆಸ್ಕಂದೀ ದಕ್ಷಿಣಾರ್ಥಸ್ಯ ಸ ತತ್ರ ಭ್ರುಕುಟೀಮುಖಃ ।
ಸಪ್ತಕುಂಭೀನಿಧಾನೋ ಹಿ ಕೀನಾಶೋ ಗೀಯತೇ ದ್ವಿಜೈಃ ॥ ೮೬

೮೮. ಆ ಬ್ರಾಹ್ಮಣನಿಗೆ ರತ್ನದಂಥ ಒಬ್ಬ ಮಗಳಿದ್ದಾಳೆ ಎಂದೂ ಕೇಳಿದ್ದೇವೆ. ಈ ಪ್ರಸಂಗದಲ್ಲಿ ನಿಶ್ಚಿತವಾಗಿ ಅವಳೂ ನಮಗೆ ಸಿಕ್ಕುತ್ತಾಳೆ."

೮೯. ಹೀಗೆ ನಿಶ್ಚಯಿಸಿಕೊಂಡು ಪರಸ್ಪರ ಕಾರ್ಯದ ಒಪ್ಪಂದವನ್ನು ಮಾಡಿಕೊಂಡು ಶಿವ–ಮಾಧವರೆಂಬ ಆ ವಂಚಕರಿಬ್ಬರೂ ರತ್ನಪುರದಿಂದ ಪ್ರಯಾಣವನ್ನು ಬೆಳೆಸಿದರು.

೯೦. ಮೆಲ್ಲ ಮೆಲ್ಲನೆ ಉಜ್ಜಯಿನಿಗೆ ತಲುಪಿ ಮಾಧವನು ಪರಿವಾರಸಮೇತನಾಗಿ ರಾಜಪುತ್ರನ ವೇಷದಿಂದ ಉಜ್ಜಯಿನಿಯ ಆಚೆ ಯಾವುದೋ ಒಂದು ಗ್ರಾಮದಲ್ಲಿ ನಿಂತನು.

೯೧. ಅನೇಕ ಮಾಯಾತಂತ್ರಗಳಲ್ಲಿ ನಿಪುಣನಾಗಿದ್ದ ಶಿವನು ಬ್ರಹ್ಮಚಾರಿಯ ವೇಷವನ್ನು ಹಾಕಿಕೊಂಡು ಒಬ್ಬನೇ ನಗರದೊಳಗೆ ಪ್ರವೇಶಿಸಿದನು.

೯೨. ಅಲ್ಲಿ ಸಿಪ್ರಾನದಿಯ ದಡದ ಪ್ರದೇಶದಲ್ಲಿದ್ದ ಒಂದು ಸಣ್ಣ ಮಠದಲ್ಲಿ ಮಣ್ಣು, ದರ್ಭೆ, ಭಿಕ್ಷಾಪಾತ್ರೆ ಮತ್ತು ಕೃಷ್ಣಾಜಿನಗಳನ್ನು ಎಲ್ಲರಿಗೂ ಕಾಣಿಸುವಂತೆ ಜೋಡಿಸಿಟ್ಟು ವಾಸ ಮಾಡಿದನು.

೯೩. ಬೆಳಗಿನ ಕಾಲದಲ್ಲಿ ಅವನು ಅವೀಚಿಯೆಂಬ ನರಕದ ಕೆಸರನ್ನು ಬಳಿದುಕೊಳ್ಳುವುದಕ್ಕೆ ಅಭ್ಯಾಸ ಮಾಡುತ್ತಿರುವನೋ ಎಂಬಂತೆ ತನ್ನ ಮೈಗೆ ಒತ್ತಾಗಿ ಮಣ್ಣನ್ನು ಮೆತ್ತಿಕೊಳ್ಳುತ್ತಿದ್ದನು.

---

ಕನ್ಯಾರತ್ನಂ ಚ ತಸ್ಯಾಸ್ತಿ ವಿಪ್ರಸ್ಯೈಕಮಿತಿ ಶ್ರುತಮ್ ।
ತದಪ್ಯೇತತ್ ಪ್ರಸಂಗೇನ ಧ್ರುವಂ ತಸ್ಮಾದವಾಪ್ಸ್ಯತೇ ॥ ೮೮
ಇತಿ ನಿಶ್ಚಿತ್ಯ ಕೃತ್ವಾ ಚ ಮಿಥಃ ಕರ್ತವ್ಯಸಂವಿದಮ್ ।
ಶಿವಮಾಧವಧೂರ್ತೌ ತು ಪುರಾತ್ ಪ್ರಯಯತುಸ್ತತಃ ॥ ೮೯
ಶನೈಶ್ಚೋಜ್ಜಯಿನೀಂ ಪ್ರಾಪ್ಯ ಮಾಧವಃ ಸಪರಿಚ್ಛದಃ ।
ರಾಜಪುತ್ರಸ್ಯ ವೇಷೇಣ ತಸ್ಥೌ ಗ್ರಾಮೇ ಕ್ವಚಿದ್ ಬಹಿಃ ॥ ೯೦
ಶಿವಸ್ತ್ವೇಕಲಂ ಕೃತ್ವಾ ವರ್ಣಿವೇಷಂ ವಿವೇಶ ತಾಮ್ ।
ನಗರೀಮೇಕ ಏವಾಗ್ರೇ ಬಹುಮಾಯಾವಿಚಕ್ಷಣಃ ॥ ೯೧
ತತ್ರಾಧ್ಯುವಾಸ ಸಿಪ್ರಾಯಾ ಮಠಿಕಾಂ ತೀರಸೀಮನಿ ।
ದೃಶ್ಯಸ್ಥಾಪಿತಮೃದ್ದರ್ಭಭಿಕ್ಷಾಭಾಂಡಮೃಗಾಜಿನಾಮ್ ॥ ೯೨
ಸ ಚ ಪ್ರಭಾತಕಾಲೇಷು ಘನಯಾಂಗಂ ಮೃದಾಲಿಪತ್ ।
ಅವೀಚಿಕರ್ದಮಾಲೇಪಸೂತ್ರಪಾತಮಿವಾಚರನ್ ॥ ೯೩

೯೪. ಮತ್ತು ಅವನು ನದಿಯ ನೀರಿನಲ್ಲಿ ಮುಳುಗಿ ಮುಖವನ್ನು ತಗ್ಗಿಸಿ, ಮುಂದೆ ತನಗೆ ಕೆಟ್ಟ ಕೆಲಸಗಳ ಫಲವಾಗಿ ಉಂಟಾಗಲಿರುವ ಅಧೋಗತಿಯನ್ನು ಅಭ್ಯಾಸ ಮಾಡಿಕೊಳ್ಳುತ್ತಿರುವವನಂತೆ, ದೀರ್ಘಕಾಲದವರೆಗೆ ನಿಂತಿರುತ್ತಿದ್ದನು.

೯೫. ಸ್ನಾನದಿಂದ ಎದ್ದ ಮೇಲೆ ಸೂರ್ಯನ ಕಡೆಗೆ ಮುಖವನ್ನು ತಿರುಗಿಸಿಕೊಂಡು ತುಂಬ ಹೊತ್ತು, ತಾನು ಶೂಲಕ್ಕೆ ಹಾಕಿಸಿಕೊಳ್ಳಲು ಯೋಗ್ಯತೆಯನ್ನು ಹೊಂದಿದ್ದೇನೆ ಎಂದು ತೋರಿಸುವವನಂತೆ ನಿಂತುಬಿಡುತ್ತಿದ್ದನು.

೯೬. ಆ ಮೇಲೆ ದೇವರ ಎದುರಿನಲ್ಲಿ ಕೈಗೆ ದರ್ಭೆಯ ಕೂರ್ಚೆಯನ್ನು ಧರಿಸಿ, ಪದ್ಮಾಸನದಲ್ಲಿ ಕುಳಿತು, ಕಪಟದ ಬ್ರಹ್ಮನಂತೆ ಜಪ ಮಾಡುತ್ತಿದ್ದನು.

೯೭. ಮಧ್ಯದಲ್ಲಿ ಅವನು ಸಾಧುಗಳ ಹೃದಯಗಳಂತೆ ಸ್ವಚ್ಛವಾಗಿದ್ದ ಹೂವುಗಳನ್ನು ಮೋಸದಿಂದ ಕದ್ದು ತಂದು ಶಿವನನ್ನು ಪೂಜಿಸುತ್ತಿದ್ದನು.

೯೮. ಪೂಜೆಯನ್ನು ಮಾಡಿದ ಮೇಲೆ ಮತ್ತೆ ಕಪಟಜಪದಲ್ಲಿ ನಿರತನಾಗುತ್ತಿದ್ದನು. ಕೆಟ್ಟ ಯೋಚನೆಗಳಲ್ಲಿ ಗಮನವನ್ನು ಹರಿಸುತ್ತಾ ಇರುವವನಂತೆ ಧ್ಯಾನವನ್ನು ಮಾಡುತ್ತಿದ್ದನು.

೯೯. ಅಪರಾಹ್ಣದಲ್ಲಿ ಕೃಷ್ಣಾಜಿನ (ಜಿಂಕೆಯ ಚರ್ಮ)ವನ್ನು ಬಟ್ಟೆಯಂತೆ ಹೊದ್ದುಕೊಂಡು ನಗರದಲ್ಲಿ ಭಿಕ್ಷೆಯನ್ನು ಬೇಡುವುದಕ್ಕಾಗಿ ಮೋಸದ ಮಾಯೆಯ ಕಡೆಗಣ್ಣ ನೋಟದಂತೆ ಅವನು ಅಲೆದಾಡುತ್ತಿದ್ದನು.

---

ಸರಿತ್ತೋಯೇ ಚ ಸ ಚಿರಂ ನಿಮಜ್ಜ್ಯಾಸೀದವಾಙ್ಮುಖಃ ।
ಕುಕರ್ಮಜಾಮಿವಾಭ್ಯಸ್ಯನ್ ಭವಿಷ್ಯಂತೀಮಧೋಗತಿಮ್ ॥ ೯೪
ಸ್ನಾನೋತ್ಥಿತೋ□ರ್ಕಾಭಿಮುಖಸ್ತಸ್ಥಾವೂರ್ಧ್ವಂ ಚಿರಂ ಚ ಸಃ ।
ಶೂಲಾಧಿರೋಪಣೌಚಿತ್ಯಮಾತ್ಮನೋ ದರ್ಶಯನ್ನಿವ ॥ ೯೫
ತತೋ ದೇವಾಗ್ರತೋ ಗತ್ವಾ ಕುಶಕೂರ್ಚಕರೋ ಜಪನ್ ।
ಆಸ್ತ ಪದ್ಮಾಸನಾಸೀನಃ ಸದಂಭಚತುರಾನನಃ ॥ ೯೬
ಅಂತರಾ ಹೃದಯಾನೀವ ಸಾಧೂನಾಂ ಕೈತವೇನ ಸಃ ।
ಸ್ವಚ್ಛಾನ್ಯಾಹೃತ್ಯ ಪುಷ್ಪಾಣಿ ಪುರಾರಿಂ ಪರ್ಯಪೂಜಯತ್ ॥ ೯೭
ಕೃತಪೂಜಶ್ಚ ಭೂಯೋ□ಪಿ ಮಿಥ್ಯಾಜಪಪರೋ□ಭವತ್ ।
ದತ್ತಾವಧಾನಃ ಕುಸ್ಮೃತಿಷ್ವಿವ ಧ್ಯಾನಂ ತತಾನ ಸಃ ॥ ೯೮
ಅಪರಾಹ್ಣೇ ಚ ಭಿಕ್ಷಾರ್ಥೀ ಕೃಷ್ಣಾರಾಜಿನಾಂಬರಃ ।
ಪುರಿ ತದ್ವಂಚನಾಮಾಯಾಕಟಾಕ್ಷ ಇವ ಸೋ□ಭ್ರಮತ್ ॥ ೯೯

೧೧೦. ಬ್ರಾಹ್ಮಣರ ಮನೆಗಳಿಂದ ಮೌನವಾಗಿ ಮೂರು ಭಿಕ್ಷೆಗಳನ್ನು ತೆಗೆದುಕೊಂಡು ಬಂದು ಆ ಮೋಸಗಾರ ಬ್ರಹ್ಮಚಾರಿಯು ಸತ್ಯವನ್ನೋ ಎಂಬಂತೆ ಆ ಭಿಕ್ಷೆಯನ್ನು ಮೂರು ಚೂರಾಗಿ ಮಾಡುತ್ತಿದ್ದನು.

೧೧೧. ಒಂದು ಭಾಗವನ್ನು ಕಾಗೆಗಳಿಗೂ, (ಎರಡನೆಯ) ಭಾಗವನ್ನು ಅಭ್ಯಾಗತನಿಗೂ ಅವನು ಕೊಡುತ್ತಿದ್ದನು. ಡಂಭಾಚಾರಕ್ಕೆ ಬೀಜವಾಗಿದ್ದ (ಮೂರನೆಯ) ಭಾಗದಿಂದ ಹೊಟ್ಟೆಯ ಚೀಲವನ್ನು ತುಂಬಿಸಿಕೊಳ್ಳುತ್ತಿದ್ದನು.

೧೧೨. ಮತ್ತೆ ಅವನು ತನ್ನ ಎಲ್ಲ ಪಾಪಗಳನ್ನೂ ಎಣಿಸುವವನಂತೆ ಸುಳ್ಳು ಜಪವನ್ನು ಮಾಡುತ್ತಾ ಅಕ್ಷಮಾಲಿಕೆಯನ್ನು ತಿರುಗಿಸುತ್ತಿದ್ದನು.

೧೧೩. ಇರುಳಿನಲ್ಲಿ ಅವನು ಪ್ರಪಂಚದ ಅತಿ ಸೂಕ್ಷ್ಮ ತರ್ಕ ಸ್ಥಳಗಳನ್ನು ಚಿಂತಿಸುತ್ತಾ ಮಠದ ಒಳಗೆ ಒಬ್ಬನೇ ಇರುತ್ತಿದ್ದನು.

೧೧೪. ಹೀಗೆ ಪ್ರತಿದಿನವೂ ಕಷ್ಟವಾದ, ನೆಪಮಾತ್ರದ ತಪಸ್ಸನ್ನು ಮಾಡುತ್ತಾ ಅಲ್ಲಿ ಅವನು ನಗರವಾಸಿಗಳ ಮನಸ್ಸನ್ನು ವಶಪಡಿಸಿಕೊಂಡನು.

೧೧೫. ಎಲ್ಲ ಜನರೂ ಅವನಲ್ಲಿ ಭಕ್ತಿಯನ್ನಿಟ್ಟು ನಮ್ರರಾಗಲು ""ಆಹಾ ! ಈ ತಪಸ್ವಿ ಶಾಂತಸ್ವಭಾವದವನು" ಎಂಬ ಕೀರ್ತಿಯು ಎಲ್ಲ ಕಡೆಯೂ ಹುಟ್ಟಿ ಹಬ್ಬಿತು.

೧೧೬. ಗೂಢಚಾರರ ಮುಖದಿಂದ ಇದೆಲ್ಲವನ್ನೂ ತಿಳಿದುಕೊಂಡ ಅವನ ಜೊತೆಗಾರ ಮಾಧವನೂ ಅದೇ ನಗರದೊಳಕ್ಕೆ ಬಂದನು.

---

ಆದಾಯ ದ್ವಿಜಗೇಹೇಭ್ಯೋ ಮೌನೀ ಭಿಕ್ಷಾತ್ರಯಂ ತತಃ ।
ಸದಂಡಾಜಿನಿಕಶ್ಚಕ್ರೇ ತ್ರಿಃ ಸತ್ಯಮಿವ ಖಂಡಶಃ ॥ ೧೧೦

ಭಾಗಂ ದದೌ ಚ ಕಾಕೇಭ್ಯೋ ಭಾಗಮಭ್ಯಾಗತಾಯ ಚ ।
ಭಾಗೇನ ದಂಭಬೀಜೇನ ಕುಕ್ಷಿಭಸ್ತ್ರಾಮಪೂರಯತ್ ॥ ೧೧೧

ಪುನಃ ಸ ಸರ್ವಪಾಪಾನಿ ನಿಜಾನಿ ಗಣಯನ್ನಿವ ।
ಜಪನ್ನಾವರ್ತಯಾಮಾಸ ಚಿರಂ ಮಿಥ್ಯಾಕ್ಷಮಾಲಿಕಾಮ್ ॥ ೧೧೨

ರಜನ್ಯಾಮದ್ವಿತೀಯಶ್ಚ ಸ ತಸ್ಥೌ ಮಠಿಕಾಂತರೇ ।
ಅಪಿ ಸೂಕ್ಷ್ಮಾಣಿ ಲೋಕಸ್ಯ ತರ್ಕಸ್ಥಾನಾನಿ ಚಿಂತಯನ್ ॥ ೧೧೩

ಏವಂ ಪ್ರತಿದಿನಂ ಕುರ್ವನ್ ಕಷ್ಟಂ ವ್ಯಾಜಮಯಂ ತಪಃ ।
ಸ ತತ್ರಾವರ್ಜಯಾಮಾಸ ನಗರೀವಾಸಿನಾಂ ಮನಃ ॥ ೧೧೪

ಅಹೋ ತಪಸ್ವೀ ಶಾಂತೋಽಯಮಿತಿ ಖ್ಯಾತಿಶ್ಚ ಸರ್ವತಃ ।
ಉದಪದ್ಯತ ತತ್ರಾಸ್ಯ ಭಕ್ತಿನಮ್ರೇಽಖಿಲೇ ಜನೇ ॥ ೧೧೫

ತಾವಚ್ಚ ಸ ದ್ವಿತೀಯೋಽಸ್ಯ ಸಖಾ ಚಾರಮುಖೇನ ತಮ್ ।
ವಿಜ್ಞಾಯ ಮಾಧವೋಽಪ್ಯೇತನ್ನಗರೀಂ ಪ್ರವಿವೇಶ ತಾಮ್ ॥ ೧೧೬

೧೦೭ ದೂರದಲ್ಲಿದ್ದ ಒಂದು ದೇವಸ್ಥಾನದೊಳಗೆ ವಸತಿಯನ್ನು ಪಡೆದುಕೊಂಡು ರಾಜಪುತ್ರನ ವೇಷದಲ್ಲಿದ್ದ ಅವನು ಸ್ನಾನ ಮಾಡುವುದಕ್ಕಾಗಿ ಸಿಪ್ರಾ ನದಿಯ ದಡಕ್ಕೆ ಹೋದನು.

೧೦೮. ಅನುಯಾಯಿಗಳೊಡನೆ ಅವನು ಸ್ನಾನ ಮಾಡಿ ದೇವರ ಎದುರಿನಲ್ಲಿ ಜಪದಲ್ಲಿ ನಿರತನಾಗಿದ್ದ ಆ ಶಿವನನ್ನು ನೋಡಿ ಅತ್ಯಂತ ವಿನಯದಿಂದ ಬಗ್ಗಿ ಅವನ ಪಾದಗಳ ಮೇಲೆ ಬಿದ್ದನು.

೧೦೯. ಜನಗಳ ಮುಂದೆ (ರಾಜಕುಮಾರನ ವೇಷದಲ್ಲಿದ್ದ ಮಾಧವನು) ಹೇಳಿದನು. "'ಇಂತಹ ಇನ್ನೊಬ್ಬ ತಾಪಸನು ಎಲ್ಲೂ ಇಲ್ಲ. ತೀರ್ಥಸ್ಥಾನಗಳಲ್ಲಿ ಅಲೆದಾಡುತ್ತಿದ್ದ ಇವನನ್ನು ಅನೇಕ ಬಾರಿ ನಾನು ನೋಡಿದ್ದೇನೆ."

೧೧೦. ಶಿವನಾದರೋ ಅವನನ್ನು ನೋಡಿದರೂ ಡಂಭದಿಂದ ಕತ್ತನ್ನು ನಿಮಿರಿಸಿ ತಾನಿದ್ದಂತೆಯೇ ಇದ್ದು ಬಿಟ್ಟನು. ಆ ಮಾಧವನೂ ತನ್ನ ವಸತಿಗೆ ತೆರಳಿದನು.

೧೧೧. ರಾತ್ರಿಯಲ್ಲಿ ಅವರಿಬ್ಬರೂ ಒಂದು ಸ್ಥಳದಲ್ಲಿ ಸಂಧಿಸಿ, ತಿಂದು, ಕುಡಿದು, ಅಲ್ಲಿಂದ ಮುಂದೆ ಮಾಡಬೇಕಾದ ಕರ್ತವ್ಯವನ್ನು ಗುಟ್ಟಾಗಿ ಮಾತನಾಡಿಕೊಂಡರು.

೧೧೨. ರಾತ್ರಿಯ ಕೊನೆಯ ಜಾವದಲ್ಲಿ ಶಿವನು ತನ್ನ ಮಠಕ್ಕೆ ಸ್ವಚ್ಛಂದದಿಂದ ಹೋದನು. ಮಾಧವನು ಬೆಳಗಾದ ಮೇಲೆ ತನ್ನ ಕಡೆಯ ಒಬ್ಬ ವಂಚಕನಿಗೆ ಹೀಗೆ ಆದೇಶಿಸಿದನು.

---

ಗೃಹೀತ್ವಾ ವಸತಿಂ ಚಾತ್ರ ದೂರೇ ದೇವಕುಲಾಂತರೇ ।
ಸ ರಾಜಪುತ್ರಚ್ಛದ್ಮಾ ಸನ್ ಸ್ನಾತುಂ ಸಿಪ್ರಾತಟಂ ಯಯೌ ॥ ೧೦೭
ಸ್ನಾತ್ವಾ ಸಾನುಚರೋ ದೃಷ್ಟ್ವಾ ದೇವಾಗ್ರೇ ಜಪತತ್ಪರಮ್ ।
ತಂ ಶಿವಂ ಪರಮಪ್ರಹ್ವೋ ನಿಪಪಾತಾಸ್ಯ ಪಾದಯೋಃ ॥ ೧೦೮
ಜಗಾದ ಚ ಜನಸ್ಯಾಗ್ರೇ ನಾಸ್ತೀದೃಕ್ ತಾಪಸೋಽಪರಃ ।
ಅಸಕೃದ್ಧಿ ಮಯಾ ದೃಷ್ಟಸ್ತೀರ್ಥಾನ್ಯೇಷ ಭ್ರಮನ್ನಿತಿ ॥ ೧೦೯
ಶಿವಸ್ತು ತಂ ವಿಲೋಕ್ಯಾಪಿ ದಂಭಸ್ತಂಭಿತಕಂಧರಃ ।
ತಥೈವಾಸೀತ್ತತಃ ಸೋಽಪಿ ಮಾಧವೋ ವಸತಿಂ ಯಯೌ ॥ ೧೧೦
ರಾತ್ರೌ ಮಿಲಿತ್ವಾ ಚೈಕತ್ರ ಭುಕ್ತ್ವಾ ಪೀತ್ವಾ ಚ ತಾವುಭೌ ।
ಮಂತ್ರಯಾಮಾಸತುಃ ಶೇಷಂ ಕರ್ತವ್ಯಂ ಯದತಃ ಪರಮ್ ॥
೧೧೧
ಯಾಮೇ ಚ ಪಶ್ಚಿಮೇ ಸ್ವೈರಮಾಗಾತ್ ಸ್ವಮಠಿಕಾಂ ಶಿವಃ ।
ಮಾಧವೋಽಪಿ ಪ್ರಭಾತೇ ಸ್ವಂ ಧೂರ್ತಮೇಕಂ ಸಮಾದಿಶತ್ ॥
೧೧೨

೧೧೩. '"ನೀನು ಈ ಬಟ್ಟೆಗಳ ಜೋಡಿಯನ್ನು ತೆಗೆದುಕೊಂಡು ರಾಜಪುರೋಹಿತನಾದ ಶಂಕರಸ್ವಾಮಿಯ ಬಳಿಗೆ ಕಾಣಿಕೆಯನ್ನಾಗಿ ಕೊಡಲು ಹೋಗು.

೧೧೪. ಮಾಧವನೆಂಬ ರಾಜಪುತ್ರನು ತನ್ನ ದಾಯಾದಿಗಳಿಂದ ಸೋತು ಹೋಗಿ ಪಿತ್ರಾರ್ಜಿತವಾದ ಧನವನ್ನು ತೆಗೆದುಕೊಂಡು ದಕ್ಷಿಣಾಪಥದಿಂದ ಇಲ್ಲಿಗೆ ಬಂದಿದ್ದಾನೆ

೧೧೫. ಅವನಿಗೆ ಸಮಾನರಾದ ಕೆಲವರು ರಾಜಪುತ್ರರೂ ಅವನನ್ನು ಅನುಸರಿಸಿ ಬಂದಿದ್ದಾರೆ. ಆ ಮಾಧವನು ನಿಮ್ಮ ರಾಜನ ಸೇವೆಯನ್ನು ಮಾಡುವನು.

೧೧೬. "ಕೀರ್ತಿನಿಧಿಯೇ, ಆ ಮಾಧವನು ನಿನ್ನ ದರ್ಶನಕ್ಕಾಗಿ ನನ್ನನ್ನು ಕಳುಹಿಸಿದ್ದಾನೆ' ಎಂದು ನೀನು ವಿನಯದಿಂದ ಆ ಪುರೋಹಿತನಿಗೆ ಹೇಳಬೇಕು."

೧೧೭. ಹೀಗೆ ಹೇಳಿ ಮಾಧವನು ಆ ವಂಚಕನನ್ನು ಕಳುಹಿಸಿದನು. ಅವನು ಕೈಗಳಲ್ಲಿ ಕಾಣಿಕೆಯನ್ನು ಹಿಡಿದುಕೊಂಡು ಆ ಪುರೋಹಿತನ ಮನೆಗೆ ಹೋದನು.

೧೧೮. ಸರಿಯಾದ ಅವಕಾಶದಲ್ಲಿ ಏಕಾಂತದಲ್ಲಿ ಅವನಿಗೆ ಆ ಕಾಣಿಕೆಯನ್ನು ಕೊಟ್ಟು ಮಾಧವನ ಸಂದೇಶವನ್ನು ಉಚಿತ ರೀತಿಯಲ್ಲಿ ಅವನು ಹೇಳಿದನು.

೧೧೯. ಆ ಪುರೋಹಿತನೂ ತನ್ನ ಭವಿಷ್ಯವನ್ನು ಕಲ್ಪಿಸಿಕೊಳ್ಳುತ್ತಾ ಕಾಣಿಕೆಯ ಆಸೆಯಿಂದ ವಂಚಕನು ಹೇಳಿದುದನ್ನೆಲ್ಲ ನಂಬಿದನು. ಆಶೆಬುರುಕರಿಗೆ ಕಾಣಿಕೆಯೇ ಆಕರ್ಷಣೆಯ ಮದ್ದಲ್ಲವೆ ?

---

ಏತದ್ ಗೃಹೀತ್ವಾ ಗಚ್ಛ ತ್ವಂ ವಸ್ತ್ರಯುಗ್ಮಮುಪಾಯನಮ್ ।
ಶಂಕರಸ್ವಾಮಿನಃ ಪಾರ್ಶ್ವಮಿಹ ರಾಜಪುರೋಧಸಃ ॥ ೧೧೩
ರಾಜಪುತ್ರಃ ಪರಾಭೂತೋ ಮಾಧವೋ ನಾಮ ಗೋತ್ರಜೈಃ ।
ಪಿತ್ರ್ಯಂ ಬಹು ಗೃಹೀತ್ವಾರ್ಥಮಾಗತೋ ದಕ್ಷಿಣಾಪಥಾತ್ ॥ ೧೧೪
ಸಮೈಃ ಕತಿಪಯೈರನ್ಯೈ ರಾಜಪುತ್ರೈರನುದ್ರುತಃ ।
ಸ ಚೇಹ ಯುಷ್ಮದೀಯಸ್ಯ ರಾಜ್ಞಃ ಸೇವಾಂ ಕರಿಷ್ಯತಿ ॥ ೧೧೫
ತೇನ ತ್ವದ್ದರ್ಶನಾಯಾಹಂ ಪ್ರೇಷಿತೋ ಯಶಸಾಂ ನಿಧೇ ।
ಇತಿ ತ್ವಯಾ ಸವಿನಯಂ ಸ ಚ ವಾಚ್ಯಃ ಪುರೋಹಿತಃ ॥ ೧೧೬
ಏವಂ ಸ ಮಾಧವೇನೋಕ್ತ್ವಾ ಧೂರ್ತಃ ಸಂಪ್ರೇಷಿತಸ್ತದಾ ।
ಜಗಾಮೋಪಾಯನಕರೋ ಗೃಹಂ ತಸ್ಯ ಪುರೋಧಸಃ ॥ ೧೧೭
ಉಪೇತ್ಯಾವಸರೇ ದತ್ತ್ವಾ ಪ್ರಾಭೃತಂ ವಿಜನೇ ಚ ತತ್ ।
ತಸ್ಮೈ ಮಾಧವಸಂದೇಶಂ ಶಂಸತಿ ಸ್ಮ ಯಥೋಚಿತಮ್ ॥ ೧೧೮
ಸೋ□ಪ್ಯುಪಾಯನಲೋಭಾತ್ತತ್ಪ್ರದ್ದಧೇ ಕಲ್ಪಿತಾಯತಿಃ ।
ಉಪಪ್ರದಾನಂ ಲಿಪ್ಸೂನಾಮೇಕಂ ಹ್ಯಾಕರ್ಷಣೌಷಧಮ್ ॥ ೧೧೯

೧೨೦. ಮಂಚನು ಹಿಂದಿರುಗಿ ಬಂದ ಮೇಲೆ ಮತ್ತೊಂದು ದಿನ ಮಾಧವನು ಅವಕಾಶವನ್ನು ಪಡೆದು ಪುರೋಹಿತನನ್ನು ನೋಡಲು ತಾನೇ ಹೋದನು.

೧೨೧. ರಾಜಪುತ್ರರೆಂದು ತಾವೇ ಹೇಳಿಕೊಳ್ಳುತ್ತಿದ್ದ ಅವನ ಅನುಚರರು ಕಾರ್ಪಟಿಕರ ವೇಷವನ್ನು ಧರಿಸಿ ಸೌದೆಯ ಚೂರುಗಳ ಮೇಲೆ ರಚಿಸಿದ ಲಾಂಛನಗಳನ್ನೆತ್ತಿಕೊಂಡು ಮಾಧವನ ಸುತ್ತಲೂ ನಿಂತಿದ್ದರು.

೧೨೨. ಮುಂದೆ ನಡೆಯುತ್ತಿದ್ದವನು ಪರಿಚಯವನ್ನು ಘೋಷಿಸುತ್ತಿರಲು ಅವನು ಪುರೋಹಿತನ ಬಳಿಗೆ ಹೋದನು. ಪುರೋಹಿತನೂ ಎದುರುಗೊಂಡು ಆನಂದದಿಂದ ಮತ್ತು ಸ್ವಾಗತಗಳಿಂದ ಅಭಿನಂದಿಸಿದನು.

೧೨೩. ಆಮೇಲೆ ಅವನೊಡನೆ ಇದ್ದು ಮಾತುಕಥೆಗಳಲ್ಲಿ ಕ್ಷಣಕಾಲವನ್ನು ಕಳೆದು ಮಾಧವನು ಅವನ ಅಪ್ಪಣೆಯನ್ನು ಪಡೆದು ತನ್ನ ವಸತಿಗೆ ಬಂದನು.

೧೨೪. ಎರಡನೆಯ ದಿನ ಮತ್ತೆ ಬಟ್ಟೆಜೋಡಿಯನ್ನು ಕಾಣಿಕೆಯಾಗಿ ಕಳುಹಿಸಿ ಮತ್ತೊಮ್ಮೆ ಪುರೋಹಿತನ ಬಳಿಗೆ ಹೋಗಿ ಹೀಗೆ ನುಡಿದನು.

೧೨೫. ""ಪರಿವಾರದವರ ಪ್ರಾರ್ಥನೆಯಿಂದ ನಾವು ಸೇವೆಯನ್ನು ಮಾಡಲು ಅಪೇಕ್ಷಿಸುತ್ತಿದ್ದೇವೆ. ಅದಕ್ಕಾಗಿ ನಾವು ನಿನ್ನನ್ನು ಆಶ್ರಯಿಸಿದ್ದೇವೆ. ನಮ್ಮಲ್ಲಿ ಸ್ವಲ್ಪ ಹಣವೂ ಇದೆ".

---

ತತಃ ಪ್ರತ್ಯಾಗತೇ ತಸ್ಮಿನ್ ಧೂರ್ತೇಽನ್ಯೇದ್ಯುಃ ಸ ಮಾಧವಃ ।
ಲಬ್ಧಾವಕಾಶಸ್ತಮಗಾತ್ ಸ್ವಯಂ ದ್ರಷ್ಟುಂ ಪುರೋಹಿತಮ್ ॥ ೧೨೦
ಧೃತಕಾರ್ಪಟಿಕಾಕಾರೈ ರಾಜಪುತ್ರಾಪದೇಶಿಭಿಃ ।
ವೃತಃ ಪಾರ್ಶ್ವಚರೈರಾತ್ತಕಾಷ್ಠಖಂಡಕಲಾಂಛನೈಃ ॥ ೧೨೧
ಪುರೋಗಾವೇದಿತಶ್ಚೈನಮಭ್ಯಗಾತ್ ಸ ಪುರೋಹಿತಮ್ ।
ತೇನಾಪ್ಯಭ್ಯುದ್ಗಮಾನಂದಸ್ವಾಗತೈರಭ್ಯನಂದ್ಯತ ॥ ೧೨೨
ತತಸ್ತೇನ ಸಹ ಸ್ಥಿತ್ವಾ ಕಥಾಲಾಪೈಃ ಕ್ಷಣಂ ಚ ಸಃ ।
ಆಯಯೌ ತದನುಜ್ಞಾತೋ ಮಾಧವೋ ವಸತಿಂ ನಿಜಾಮ್ ॥ ೧೨೩
ದ್ವಿತೀಯೇಽಹ್ನಿ ಪುನಃ ಪ್ರೇಷ್ಯ ಪ್ರಾಭೃತಂ ವಸ್ತ್ರಯೋರ್ಯುಗಮ್ ।
ಭೂಯೋಽಪಿ ತಮುಪಾಗಚ್ಛತ್ ಪುರೋಹಿತಮುವಾಚ ಚ ॥ ೧೨೪
ಪರಿವಾರಾನುರೋಧೇನ ಕಿಲ ಸೇವಾರ್ಥಿನೋ ವಯಮ್ ।
ತೇನ ತ್ವಮಾಶ್ರಿತೋಽಸ್ಮಾಭಿರರ್ಥಮಾತ್ರಾಸ್ತಿ ನಃ ಪುನಃ ॥ ೧೨೫

೧೨೬. ಅದನ್ನು ಕೇಳಿ ಅವನಿಂದ ಹಣ ಸಿಗುವುದೆಂದು ಊಹಿಸಿ ಆ ಪುರೋಹಿತನು ಮಾಧವನಿಗೆ ಅವನ ಇಷ್ಟಾರ್ಥದ ಬಗ್ಗೆ (ಸಾಧಿಸಿಕೊಡುವೆನೆಂದು) ಮಾತನ್ನು ಕೊಟ್ಟನು.

೧೨೭. ಒಂದು ಕ್ಷಣಾನಂತರ ಪುರೋಹಿತನು ಮಾಧವನಿಗೋಸ್ಕರ ರಾಜನಿಗೆ ವಿಜ್ಞಾಪನೆ ಮಾಡಿದನು. ಅವನಲ್ಲಿದ್ದ ಗೌರವದಿಂದ ರಾಜನೂ ಆ ಸಲಹೆಯನ್ನು ಒಪ್ಪಿಕೊಂಡನು.

೧೨೮. ಮಾರನೆಯ ದಿನ ಪರಿವಾರಸಮೇತನಾಗಿದ್ದ ಮಾಧವನನ್ನು ಪುರೋಹಿತನು ಗೌರವಸಹಿತವಾಗಿ ಕರೆದುಕೊಂಡು ಹೋಗಿ ರಾಜನಿಗೆ ತೋರಿಸಿದನು.

೧೨೯. ರಾಜಪುತ್ರರಿಗೆ ಹೋಲುವ ಆಕಾರವನ್ನು ಹೊಂದಿದ್ದ ಮಾಧವನನ್ನು ನೋಡಿ ರಾಜನೂ ಆದರದಿಂದ ಅನುಗ್ರಹಿಸಿ ಅವನಿಗೆ ಒಂದು ಉದ್ಯೋಗವನ್ನು ಕಲ್ಪಿಸಿಕೊಟ್ಟನು.

೧೩೦. ಆಮೇಲೆ ರಾಜನ ಸೇವೆಯನ್ನು ಮಾಡುತ್ತಾ ಮಾಧವನು ಅಲ್ಲೇ ಇದ್ದನು. ಪ್ರತಿ ರಾತ್ರಿಯಲ್ಲೂ ಮಂತ್ರಾಲೋಚನೆಗಾಗಿ ಶಿವನೊಡನೆ ಸಂಧಿಸುತ್ತಿದ್ದನು.

೧೩೧. ಕಾಣಿಕೆಗಳ ಉಪಚಾರದಿಂದಲೇ ಜೀವಿಸುತ್ತಿದ್ದ ಆ ಪುರೋಹಿತನು ದುರಾಸೆಯಿಂದ 'ನೀನು ನನ್ನ ಮನೆಯಲ್ಲೇ ವಾಸಮಾಡು' ಎಂದು ಮಾಧವನನ್ನು ಕೇಳಿಕೊಂಡನು.

---

ತಚ್ಛ್ರುತ್ವಾ ಪ್ರಾಪ್ತಿಮಾಶಂಕ್ಯ ತಸ್ಮಾತ್ ಸೋಽಥ ಪುರೋಹಿತಃ ।
ಪ್ರತಿಶುಶ್ರಾವ ತತ್ತಸ್ಮೈ ಮಾಧವಾಯ ಸಮೀಹಿತಮ್ ॥ ೧೨೬
ಕ್ಷಣಾಚ್ಚ ಗತ್ವಾ ರಾಜಾನಮೇತದರ್ಥಂ ವ್ಯಜಿಜ್ಞಪತ್ ।
ತದ್ಗೌರವೇಣ ರಾಜಾಪಿ ತತ್ತಥಾ ಪ್ರತ್ಯಪದ್ಯತ ॥ ೧೨೭
ಅಪರೇಽಹ್ನಿ ಚ ನೀತ್ವಾ ತಂ ಮಾಧವಂ ಸಪರಿಚ್ಛದಮ್ ।
ನೃಪಾಯಾದರ್ಶಯತ್ತಸ್ಮೈ ಸ ಪುರೋಧಾಃ ಸಗೌರವಮ್ ॥ ೧೨೮
ನೃಪೋಽಪಿ ಮಾಧವಂ ದೃಷ್ಟ್ವಾ ರಾಜಪುತ್ರೋಪಮಾಕೃತಿಮ್ ।
ಆದರೇಣಾನುಜಗ್ರಾಹ ವೃತ್ತಿಂ ಚಾಸ್ಯ ಪ್ರದಿಷ್ಟವಾನ್ ॥ ೧೨೯
ತತೋಽತ್ರ ಸೇವಮಾನಸ್ತಂ ನೃಪಂ ತಸ್ಥೌ ಸ ಮಾಧವಃ ।
ರಾತ್ರೌರಾತ್ರೌ ಚ ಮಂತ್ರಾಯ ಶಿವೇನ ಸಮಗಚ್ಛತ ॥ ೧೩೦
ಇಹೈವ ವಸ ಮದ್ಗೇಹೇ ಇತಿ ತೇನ ಪುರೋಧಸಾ ।
ಸೋಽರ್ಥಿತಶ್ಚಾಭವಲ್ಲೋಭಾದುಪಚಾರೋಪಜೀವಿನಾ ॥ ೧೩೧

೧೩೨. ಆಮೇಲೆ ಅವನು ವಿನಾಶಕ್ಕೆ ಕಾರಣವಾದ ಹುಳು ಮರದ ಕಾಂಡವನ್ನು ಆಶ್ರಯಿಸುವಂತೆ ತನ್ನ ಅನುಯಾಯಿಗಳೊಡನೆ ಆ ಪುರೋಹಿತನ ಮನೆಯನ್ನೇ ಆಶ್ರಯಿಸಿದನು.

೧೩೩. ಆ ಪುರೋಹಿತನ ಕೋಶಾಗಾರದಲ್ಲಿ, ಕೃತ್ರಿಮವಾದ ಮಾಣಿಕ್ಯಗಳಿಂದ ಮಾಡಿದ ಒಡವೆಗಳಿಂದ ತುಂಬಿಸಿದ ಪಾತ್ರೆಯನ್ನಿರಿಸಿದನು.

೧೩೪. ಹುಲ್ಲನ್ನು ಹಾಕಿ ಹಸುವಿನ ಮನಸ್ಸನ್ನು ವಶಪಡಿಸಿಕೊಳ್ಳುವಂತೆ ಆಗಾಗ ಆ ಪಾತ್ರೆಯನ್ನು ತೆರೆದು ಯಾವ ಯಾವ ನೆವದಿಂದಲೋ ಆ ಆಭರಣಗಳನ್ನು ತೋರಿಸಿ ಆ ಪುರೋಹಿತನ ಮನಸ್ಸನ್ನು ವಶಪಡಿಸಿಕೊಂಡನು.

೧೩೫. ಆ ಪುರೋಹಿತನಿಗೆ ಚೆನ್ನಾಗಿ ನಂಬಿಕೆ ಹುಟ್ಟಿದ ಮೇಲೆ, ಕಡಿಮೆ ಆಹಾರವನ್ನು ಸೇವಿಸಿ ಶರೀರವನ್ನು ತೆಳ್ಳಗೆ ಮಾಡಿಕೊಂಡ ಮಾಧವನು ಸುಳ್ಳು ಸುಳ್ಳಾಗಿ ಜಾಡ್ಯ ತೋರಿಸಿಕೊಂಡನು.

೧೩೬. ಕೆಲವು ದಿನಗಳು ಕಳೆಯಲು ಆ ಪುರೋಹಿತನು (ಮಾಧವನ) ಹಾಸಿಗೆಯ ಬಳಿ ಬಂದು ನಿಂತಾಗ, ಆ ವಂಚಕರಾಜ ಮಾಧವನು ಕೆಲವೇ ಮಾತುಗಳಿಂದ ಹೀಗೆ ಹೇಳಿದನು.

೧೩೭. "ನನ್ನ ಶರೀರದಲ್ಲಿ ಈಗ ವಿಷಮ ಪರಿಸ್ಥಿತಿ ಇದೆ. ಆದ್ದರಿಂದ ವಿಪ್ರಶ್ರೇಷ್ಠನೇ, ನೀನು ಯಾವನನ್ನಾದರೂ ಒಳ್ಳೆಯ ಬ್ರಾಹ್ಮಣನನ್ನು ಕರೆದುಕೊಂಡು ಬಾ.

---

ತತಃ ಸಹಚರೈಸ್ಸಾಕಂ ತಸ್ಯೈವಾಶಿಶ್ರಿಯದ್ ಗೃಹಮ್ ।
ವಿನಾಶಹೇತುರ್ವಾಸಾಯ ಮದ್ಗುಃ ಸ್ಕಂಧಂ ತರೋರಿವ ॥ ೧೩೨

ಕೃತ್ವಾ ಕೃತ್ರಿಮಮಾಣಿಕ್ಯಮಯೈರಾಭರಣೈ ರ್ಭೃತಮ್ ।
ಭಾಂಡಂ ಚ ಸ್ಥಾಪಯಾಮಾಸ ತದೀಯೇ ಕೋಷವೇಶ್ಮನಿ ॥ ೧೩೩

ಅಂತರಾ ಚ ತದುದ್ಘಾಟ್ಯ ತೈಸ್ತೈರ್ವ್ಯಾಜಾರ್ಧದರ್ಶಿತೈಃ ।
ಜಹಾರಾಭರಣೈಸ್ತಸ್ಯ ಶಷ್ಪೈರಿವ ಪಶೋರ್ಮನಃ ॥ ೧೩೪

ವಿಶ್ವಸ್ತೇ ಚ ತತಸ್ತಸ್ಮಿನ್ ಪುರೋಧಸಿ ಚಕಾರ ಸಃ ।
ಮಾಂದ್ಯಮಲ್ಪತರಾಹಾರಕೃಶೀಕೃತತನುರ್ಮೃಷಾ ॥ ೧೩೫

ಯಾತೇ ಕತಿಪಯಾಹೇ ಚ ತಂ ಶಯ್ಯೋಪಾಂತವರ್ತಿನಮ್ ।
ಪುರೋಹಿತಂ ಸ ವಕ್ತಿ ಸ್ಮ ಧೂರ್ತರಾಜೋ□ಲ್ಪಯಾ ಗಿರಾ ॥ ೧೩೬

ಮಮ ತಾವಚ್ಛರೀರೇ□ಸ್ಮಿನ್ ವರ್ತತೇ ವಿಷಮಾ ದಶಾ ।
ತದ್ವಿಪ್ರವರ ಕಂಚಿತ್ ತ್ವಂ ಬ್ರಾಹ್ಮಣೋತ್ತಮಮಾನಯ ॥ ೧೩೭

೧೩೮. ಈ ಲೋಕದಲ್ಲೂ ಪರಲೋಕದಲ್ಲೂ ನನಗೆ ಸುಖ ಸಿಗಲೆಂದು ಆ ಬ್ರಾಹ್ಮಣನಿಗೆ ನನ್ನ ಸರ್ವಸ್ವವನ್ನೂ ದಾನ ಮಾಡಿಬಿಡುತ್ತೇನೆ. ಜೀವನವೇ ಅಸ್ಥಿರವಾದಾಗ ಮನುಷ್ಯನಿಗೆ ಹಣದಲ್ಲಿ ಯಾವ ಆಸಕ್ತಿ?".

೧೩೯. ದಾನಗಳಿಂದಲೇ ತನ್ನ ಬದುಕನ್ನು ಸಾಗಿಸುತ್ತಿದ್ದ ಆ ಪುರೋಹಿತನಿಗೆ (ಮಾಧವನು) ಹೀಗೆ ಹೇಳಿದಾಗ 'ಹಾಗೇ ಮಾಡುತ್ತೇನೆ' ಎಂದು ಹೇಳಿದ ಅವನು ಮಾಧವನ ಕಾಲಿಗೆ ಬಿದ್ದನು.

೧೪೦. ಆ ಮೇಲೆ ಆ ಪುರೋಹಿತನು ಯಾವ ಯಾವ ಬ್ರಾಹ್ಮಣನನ್ನು ಕರೆದು ತಂದರೂ, ವಿಶೇಷವಾದ (ಅರ್ಹತೆಗಳನ್ನು) ಬಯಸುವ ನೆಪದಿಂದ ಮಾಧವನು ಅವರನ್ನು ಒಪ್ಪಲಿಲ್ಲ.

೧೪೧. ಅದನ್ನು ನೋಡಿ ಅವನ ಪಕ್ಕದಲ್ಲೇ ಇದ್ದ ಇನ್ನೊಬ್ಬ ವಂಚಕನು ಹೀಗೆಂದನು. ""ಇವನಿಗೆ ಸಾಮಾನ್ಯ ಬ್ರಾಹ್ಮಣನು ಹಿಡಿಸುವುದಿಲ್ಲ.

೧೪೨. ಆದ್ದರಿಂದ ಸಿಪ್ರಾನದಿಯ ದಡದಲ್ಲಿ ಶಿವ ಎಂಬ ಮಹಾತಪಸ್ವಿ ಒಬ್ಬನು ಇದ್ದಾನಲ್ಲ, ಅವನು ಈಗ ಇವನಿಗೆ ಇಷ್ಟವಾಗುತ್ತಾನೋ ಇಲ್ಲವೋ ವಿಚಾರಿಸೋಣವಾಗಲಿ."

೧೪೩. ಅದನ್ನು ಕೇಳಿ ಮಾಧವನು ನೋವನ್ನು ತೋರಿಸಿಕೊಂಡು ಆ ಪುರೋಹಿತನಿಗೆ ""ಆಹಾ, ಪ್ರಸನ್ನನಾಗು. ಅವನನ್ನು ಕರೆದುಕೊಂಡು ಬಾ. ಅಂತಹ ಬ್ರಾಹ್ಮಣನು ಬೇರೆ ಯಾವನೂ ಇಲ್ಲ" ಎಂದು ಹೇಳಿದನು.

---

ಯಸ್ಮೈ ದಾಸ್ಯಾಮಿ ಸರ್ವಸ್ವಮಿಹಾಮುತ್ರ ಚ ಶರ್ಮಣೇ ।
ಅಸ್ಥಿರೇ ಜೀವಿತೇ ಹ್ಯಾಸ್ಥಾ ಕಾ ಧನೇಷು ಮನಸ್ವಿನಃ ॥ ೧೩೮
ಇತ್ಯುಕ್ತೇ ಸ ಪುರೋಧಾಶ್ಚ ತೇನ ದಾನೋಪಜೀವಕಃ ।
ಏವಂ ಕರೋಮೀತ್ಯಾಹ ಸ್ಮ ಸೋಽಪತಚ್ಚಾಸ್ಯ ಪಾದಯೋಃ ॥ ೧೩೯
ತತಃ ಸ ಬ್ರಾಹ್ಮಣಂ ಯಂ ಯಮಾನಿನಾಯ ಪುರೋಹಿತಃ ।
ವಿಶೇಷೇಚ್ಛಾನಿಭಾತ್ತಂ ತಂ ಶ್ರದ್ದಧೇ ನ ಸ ಮಾಧವಃ ॥ ೧೪೦
ತದ್ ದೃಷ್ಟ್ವಾ ತಸ್ಯ ಪಾರ್ಶ್ವಸ್ಥೋ ಧೂರ್ತ ಏಕೋಽಬ್ರವೀದಿದಮ್ ।
ನ ತಾವದಸ್ಮೈ ಸಾಮಾನ್ಯೋ ವಿಪ್ರಃ ಪ್ರಾಯೇಣ ರೋಚತೇ ॥ ೧೪೧
ತದ್ಯ ಏಷ ಶಿವೋ ನಾಮ ಸಿಪ್ರಾತೀರೇ ಮಹಾತಪಾಃ ।
ಸ್ಥಿತಃ ಸಂಪ್ರತಿ ಭಾತ್ಯಸ್ಯ ನ ವೇತ್ಯೇತನ್ನಿರೂಪ್ಯತಾಮ್ ॥ ೧೪೨
ತಚ್ಛ್ರುತ್ವಾ ಮಾಧವೋಽವಾದೀತ್ ಕೃತಾರ್ತಿಸ್ತಂ ಪುರೋಹಿತಮ್ ।
ಹಂತ ಪ್ರಸೀದಾನಯ ತಂ ವಿಪ್ರೋ ನಾನ್ಯೋ ಹಿ ತಾದೃಶಃ ॥ ೧೪೩

೧೫೪. ಹೀಗೆ ಅವನು ಹೇಳಿದಾಗ ಪುರೋಹಿತನು ಶಿವನ ಬಳಿಗೆ ಹೋದನು. ಧ್ಯಾನ ಮಾಡುತ್ತಾ ನಿಶ್ಚಲನಾಗಿದ್ದ ಅವನನ್ನು ನೋಡಿದನು.

೧೫೫. ಆಮೇಲೆ ಪ್ರದಕ್ಷಿಣೆ ಮಾಡಿ ಅವನ ಎದುರಿಗೆ ಕುಳಿತನು. ಆ ಕ್ಷಣದಲ್ಲಿ ವಂಚಕ ಶಿವನು ಮೆಲ್ಲಮೆಲ್ಲನೆ ಕಣ್ಣುಗಳನ್ನು ತೆರೆದವನಾದನು.

೧೫೬ ಆಮೇಲೆ ಪುರೋಹಿತನು ಅವನಿಗೆ ಬಗ್ಗಿ ನಮಸ್ಕರಿಸಿ ಇಂತೆಂದನು. "ಪ್ರಭು, ನೀನು ಕೋಪಿಸಿಕೊಳ್ಳದಿದ್ದರೆ ನಾನು ಸ್ವಲ್ಪ ಬಿನ್ನವಿಸುತ್ತೇನೆ."

೧೫೭ ಅದನ್ನು ಕೇಳಿ ಶಿವನು ತುಟಿಯನ್ನು ಸ್ವಲ್ಪ ಉಬ್ಬಿಸಿ ಸಂಜ್ಞೆಯಿಂದ ಅನುಮತಿಯನ್ನು ಕೊಟ್ಟನು. ಆಗ ಪುರೋಹಿತನು ಹೀಗೆ ನುಡಿದನು.

೧೫೮. ದ್ಷಿಣದೇಶದಿಂದ ಬಂದಿರುವ ಮಹಾಧನಿಕನಾದ ಒಬ್ಬ ಮಾಧವನೆಂಬ ರಾಜಪುತ್ರನು ಈ ಊರಿನಲ್ಲಿದ್ದಾನೆ. ಅವನು ಅಸ್ವಸ್ಥನಾಗಿ ತನ್ನ ಎಲ್ಲವನ್ನೂ ದಾನ ಮಾಡಲು ಉದ್ಯುಕ್ತನಾಗಿದ್ದಾನೆ.

೧೫೯. ನೀನು ಒಪ್ಪುವುದಾದರೆ ಅವನು ನಿನಗೆ ಅನೇಕ ದೊಡ್ಡ ಅನರ್ಘ್ಯ ರತ್ನಗಳು ತುಂಬಿದ ಆಭರಣಗಳಿಂದ ಬೆಳಗುವ ಸರ್ವಸ್ವವನ್ನೂ ಕೊಟ್ಟು ಬಿಡುತ್ತಾನೆ.

---

ಇತ್ಯುಕ್ತಸ್ತೇನ ಚ ಯಯೌ ಸ ಶಿವಸ್ಯಾಂತಿಕಂ ತತಃ ।
ಪುರೋಧಾಸ್ತಮಪಶ್ಯಚ್ಚ ರಚಿತಧ್ಯಾನನಿಶ್ಚಲಮ್ ॥ ೧೫೪
ಉಪಾವಿಶಚ್ಚ ತಸ್ಯಾಗ್ರೇ ತತಃ ಕೃತ್ವಾ ಪ್ರದಕ್ಷಿಣಮ್ ।
ತತ್ಕ್ಷಣಂ ಸೋಽಪಿ ಧೂರ್ತೋರ್ಽಭೂಚ್ಛನೈರುನ್ಮೀಲಿತೇಕ್ಷಣಃ ॥ ೧೫೫
ತತಃ ಪ್ರಣಮ್ಯ ತಂ ಪ್ರಷ್ಟಃ ಸ ಉವಾಚ ಪುರೋಹಿತಃ ।
ನ ಚೇತ್ ಕುಪ್ಯಸಿ ತತ್ಕಿಂಚಿತ್ ಪ್ರಭೋ ವಿಜ್ಞಾಪಯಾಮ್ಯಹಮ್ ॥ ೧೫೬
ತನ್ನಿಶಮ್ಯ ಚ ತೇನೋಷ್ಠಪುಟೋನ್ನಮನಸಂಜ್ಞಯಾ ।
ಅನುಜ್ಞಾತಃ ಶಿವೇನೈವಂ ತಮುವಾದೀತ್ ಪುರೋಹಿತಃ ॥ ೧೫೭
ಇಹ ಸ್ಥಿತೋ ದಾಕ್ಷಿಣಾತ್ಯೋ ರಾಜಪುತ್ರೋ ಮಹಾಧನಃ ।
ಮಾಧವಾಖ್ಯಃ ಸ ಚಾಸ್ವಸ್ಥಃ ಸರ್ವಸ್ವಂ ದಾತುಮುದ್ಯತಃ ॥ ೧೫೮
ಮನ್ಯಸೇ ಯದಿ ತತ್ತುಭ್ಯಂ ಸ ಸರ್ವಂ ತತ್ ಪ್ರಯಚ್ಛತಿ ।
ನಾನಾನರ್ಘಮಹಾರತ್ನಮಯಾಲಂಕರಣೋಜ್ಜ್ವಲಮ್ ॥ ೧೫೯

೧೫೦. ಅದನ್ನು ಕೇಳಿ ಮೆಲ್ಲನೆ ಮೌನವನ್ನು ಮುರಿದ ಶಿವನು ""ಅಯ್ಯಾ ಬ್ರಾಹ್ಮಣ, ಭಿಕ್ಷೆಯನ್ನು ತಿನ್ನುವ ಬ್ರಹ್ಮಚಾರಿಯಾದ ನನಗೆ ಹಣದಿಂದ ಏನು ಪ್ರಯೋಜನ?" ಎಂದು ನುಡಿದನು.

೧೫೧. ಆಗ ಪುರೋಹಿತನೂ ಮತ್ತೆ ಅವನಿಗಿಂತೆಂದನು ""ಮಹಾ ಬ್ರಾಹ್ಮಣ, ಹಾಗೆ ಹೇಳಬೇಡ. ಆಶ್ರಮಗಳ ಕ್ರಮವು ನಿನಗೆ ತಿಳಿಯದೇ ?"

೧೫೨. ಮದುವೆಯನ್ನು ಮಾಡಿಕೊಂಡು ಮನೆಯಲ್ಲಿ ದೇವತೆಗಳಿಗೂ ಪಿತೃಗಳಿಗೂ ಅತಿಥಿಗಳಿಗೂ ಅವರವರಿಗೆ ಯೋಗ್ಯವಾದ (ಪೂಜಾದಿ) ಕ್ರಿಯೆಗಳನ್ನು ಮಾಡಿ ಮನುಷ್ಯನು (ಧರ್ಮ, ಅರ್ಥ, ಕಾಮ ಎಂಬ ಪುರುಷಾರ್ಥಗಳ) ತ್ರಿವರ್ಗವನ್ನು ಪಡೆಯುತ್ತಾನೆ. ಆದ್ದರಿಂದ ಗೃಹಸ್ಥನೇ ಎಲ್ಲ ಆಶ್ರಮಿಗಳಲ್ಲಿ ಶ್ರೇಷ್ಠನು."

೧೫೩. ಆಗ ಶಿವನು "ನಾನು ಹೆಂಡತಿಯನ್ನೆಂತು ಹುಡುಕಲಿ? ಅಂಥದೋ ಇಂಥದೋ ವಂಶದಿಂದ (ಬಂದ ಹೆಣ್ಣನ್ನು) ನಾನು ಮದುವೆ ಮಾಡಿಕೊಳ್ಳಲಾರೆನು" ಎಂದು ಹೇಳಿದನು.

೧೫೪. ಅದನ್ನು ಕೇಳಿ, ಅವನ ಹಣವು ಸುಖವಾಗಿ ಅನುಭವಿಸಲು ತನಗೆ ಸಿಗುವುದು ಎಂದುಕೊಂಡು, ಅವಕಾಶವನ್ನು ಪಡೆದ ಲೋಭಿ ಪುರೋಹಿತನು ಅವನಿಗೆ ಹೀಗೆ ಹೇಳಿದನು.

೧೫೫. ""ಹಾಗಾದರೆ, ನನಗೆ ವಿನಯಸ್ವಾಮಿನೀ ಎಂಬ ಮಗಳಿದ್ದಾಳೆ. ಅವಳು ಅತಿರೂಪವತಿಯೂ ಆಗಿದ್ದಾಳೆ. ಅವಳನ್ನು ನಿನಗೆ ಕೊಡುತ್ತೇನೆ.

---

ತಚ್ಛ್ರುತ್ವಾ ಸ ಶನೈರ್ಮುಕ್ತಮೌನಃ ಕಿಲ ಶಿವೋಽಬ್ರವೀತ್ ।
ಬ್ರಹ್ಮನ್ ಭಿಕ್ಷಾಶನಸ್ಯಾರ್ಥೈಃ ಕೋಽರ್ಥೋ ಮೇ ಬ್ರಹ್ಮಚಾರಿಣಃ ॥ ೧೫೦
ತತಃ ಪುರೋಹಿತೋಽಪ್ಯೇವಂ ಸ ತಂ ಪುನರಭಾಷತ ।
ಮೈವಂ ವಾದೀರ್ಮಹಾಬ್ರಹ್ಮನ್ ಕಿಂ ನ ವೇತ್ಸ್ಯಾಶ್ರಮಕ್ರಮಮ್ ॥ ೧೫೧
ಕೃತದಾರೋ ಗೃಹೇ ಕುರ್ವನ್ ದೇವಪಿತ್ರತಿಥಿಕ್ರಿಯಾಃ ।
ಧನೈಸ್ತ್ರಿವರ್ಗಂ ಪ್ರಾಪ್ನೋತಿ ಗೃಹೀ ಹ್ಯಾಶ್ರಮಿಣಾಂ ವರಃ ॥ ೧೫೨
ತತಃ ಸೋಽಪಿ ಶಿವೋಽವಾದೀತ್ ಕುತೋ ಮೇ ದಾರಸಂಗ್ರಹಃ ।
ನ ಹ್ಯಹಂ ಪರಿಣೇಷ್ಯಾಮಿ ಕುಲಾದ್ ಯಾದೃಶತಾದೃಶಾತ್ ॥ ೧೫೩
ತಚ್ಛ್ರುತ್ವಾ ಕುಲಭೋಗ್ಯಂ ಚ ಮತ್ವಾ ತಸ್ಯ ತಥಾ ಧನಮ್ ।
ಸ ಪ್ರಾಪ್ತಾವಸರೋ ಲುಬ್ಧಃ ಪುರೋಧಾಸ್ತಮಭಾಷತ ॥ ೧೫೪
ಅಸ್ತಿ ತರ್ಹಿ ಸುತಾ ಕನ್ಯಾ ವಿನಯಸ್ವಾಮಿನೀತಿ ಮೇ ।
ಅತಿರೂಪವತೀ ಸಾ ಚ ತಾಂ ಚ ತುಭ್ಯಂ ದದಾಮ್ಯಹಮ್ ॥ ೧೫೫

೧೪೬ ನೀನು ಮಾಧವನಿಂದ ದಾನರೂಪದಲ್ಲಿ ಪಡೆಯುವ ಹಣವನ್ನು ನಾನು ನಿನಗಾಗಿ ರಕ್ಷಿಸಿ ಇಡುತ್ತೇನೆ. ಆದ್ದರಿಂದ ಗೃಹಸ್ಥಾಶ್ರಮವನ್ನು ಸ್ವೀಕರಿಸು."

೧೪೭ ಅದನ್ನು ಕೇಳಿ ತನ್ನ ಇಷ್ಟಾರ್ಥವು ಕೈಗೂಡಿತು ಎಂದುಕೊಂಡ ಶಿವನು ಹೇಳಿದನು. ""ಬ್ರಹ್ಮನ್, ಇದು ನಿನ್ನ ಒತ್ತಾಯವಾದರೆ ನಿನ್ನ ಮಾತನ್ನು ನಡೆಸಿಕೊಡುತ್ತೇನೆ.

೧೪೮. ನಾನು ತಪಸ್ವಿ, ಚಿನ್ನ, ರತ್ನ ಇತ್ಯಾದಿ ಸ್ವರೂಪದಲ್ಲಿ ನಾನು (ಏನೂ ಅರಿಯದ) ಮುಗ್ಧ. ನಿನ್ನ ಮಾತಿನಿಂದ ಹೀಗೆ ಮಾಡುತ್ತಿರುವೆನಷ್ಟೆ. ನಿನಗೆ ಹೇಗೆ ತಿಳಿಯುವುದೋ ಹಾಗೆ ಮಾಡು."

೧೪೯. ಶಿವನ ಈ ಮಾತುಗಳನ್ನು ಕೇಳಿ ಸಂತೋಷಪಟ್ಟ ಆ ದಡ್ಡ ಪುರೋಹಿತನು ಹಾಗೆಯೇ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದನು.

೧೫೦. ಶಿವನೆಂಬ ಹೆಸರಿಟ್ಟುಕೊಂಡಿದ್ದ ಆ ಅಶಿವನನ್ನು ತನ್ನ ಮನೆಯಲ್ಲಿ ನೆಲೆಗೊಳಿಸಿ, ತನ್ನನ್ನು ಅಭಿನಂದಿಸಿದ ಮಾಧವನಿಗೆ ತಾನು ಮಾಡಿದುದೆಲ್ಲವನ್ನೂ ಪುರೋಹಿತನು ಹೇಳಿದನು.

೧೫೧. ಕಷ್ಟಪಟ್ಟು ಬೆಳೆಸಿದ್ದ ತನ್ನ ಮಗಳನ್ನು ದಡ್ಡತನದಿಂದ ಕಳೆದುಕೊಂಡ ಸಂಪತ್ತಿನಂತೆ ಶಿವನಿಗೆ ಕೊಟ್ಟನು.

---

ಯಚ್ಚ ಪ್ರತಿಗ್ರಹಧನಂ ತಸ್ಮಾತ್ ಪ್ರಾಪ್ಸ್ಯೋಷಿ ಮಾಧವಾತ್ ।
ತದಹಂ ತವ ರಕ್ಷಾಮಿ ತದ್ ಭಜಸ್ವ ಗೃಹಾಶ್ರಮಮ್ ॥ ೧೪೬
ಇತ್ಯಾಕರ್ಣ್ಯ ಸ ಸಂಪನ್ನಯಥೇಷ್ಟಾರ್ಥಃ ಶಿವೋ□ಬ್ರವೀತ್ ।
ಬ್ರಹ್ಮನ್ ಗ್ರಹಸ್ತವಾಯಂ ಚೇತ್ ತತ್ ಕರೋಮಿ ವಚಸ್ತವ ॥ ೧೪೭
ಹೇಮರತ್ನಸ್ವರೂಪೇ ತು ಮುಗ್ಧ ಏವಾಸ್ಮಿ ತಾಪಸಃ ।
ತ್ವದ್ವಾಚೈವ ಪ್ರವರ್ತೇ□ಹಂ ಯಥಾ ವೇತ್ಸಿ ತಥಾ ಕುರು ॥ ೧೪೮
ಏತಚ್ಛಿವವಚಃ ಶ್ರುತ್ವಾ ಪರಿತುಷ್ಟಸ್ತಥೇತಿ ತಮ್ ।
ಮೂಢೋ ನಿನಾಯ ಗೇಹಂ ಸ್ವಂ ತಥೈವ ಸ ಪುರೋಹಿತಃ ॥ ೧೪೯
ಸಂನಿವೇಶ್ಯ ಚ ತತ್ರೈನಂ ಶಿವಾಖ್ಯಮಶಿವಂ ತತಃ ।
ಯಥಾಕೃತಂ ಶಶಂಸೈತನ್ಮಾಧವಾಯಾಭಿನಂದತೇ ॥ ೧೫೦
ತದ್ವೈವ ಚ ದದೌ ತಸ್ಮೈ ಸುತಾಂ ಕ್ಲೇಶವಿವರ್ಧಿತಾಮ್ ।
ನಿಜಾಂ ಶಿವಾಯ ಸಂಪತ್ತಿಮಿವ ಮೂಢತ್ವಹಾರಿತಾಮ್ ॥ ೧೫೧

೧೬೨. ಮದುವೆಯಾದ ಮೇಲೆ ಮೂರನೆಯ ದಿನ ಅವನನ್ನು ದಾನಸ್ವೀಕಾರಕ್ಕಾಗಿ ನೆವ ಮಾತ್ರದಿಂದ ಅಸ್ವಸ್ಥನಾಗಿದ್ದ ಮಾಧವನ ಬಳಿಗೆ ಕರೆದುಕೊಂಡು ಹೋದನು.

೧೬೩. "ಊಹಿಸಲು ಅಶಕ್ಯವಾದ ತಪಸ್ಸನ್ನು ಮಾಡುತ್ತಿರುವ ನಿನಗೆ ವಂದಿಸುತ್ತೇನೆ' ಎಂದು ಸತ್ಯವನ್ನೇ ನುಡಿಯುತ್ತಾ ಮಾಧವನು ಎದ್ದು ಶಿವನ ಪಾದಗಳಿಗೆ ನಮಸ್ಕಾರ ಮಾಡಿದನು.

೧೬೪. ಕೋಶಗೃಹದಿಂದ ಆಗ ತರಲಾದ ಕೃತಕ ಮಾಣಿಕ್ಯಗಳಿಂದ ತುಂಬಿದ್ದ ಆಭರಣಗಳ ಪೆಟ್ಟಿಗೆಯನ್ನು ಅವನಿಗೆ ಮಾಧವನು ಕೊಟ್ಟನು.

೧೬೫. ಶಿವನು ಅದನ್ನು ತೆಗೆದುಕೊಂಡು ""ಇದು ನನಗೆ ತಿಳಿಯದು, ನಿನಗೇ ಇದು ಗೊತ್ತು" ಎಂದು ಹೇಳಿ ಅದನ್ನು ಪುರೋಹಿತನ ಕೈಗೆ ಸಮರ್ಪಿಸಿಬಿಟ್ಟನು.

೧೬೬ ""ಇದನ್ನು ಮೊದಲೇ ನಾನು ಒಪ್ಪಿಕೊಂಡಿದ್ದೇನೆ. ನಿನಗೇಕೆ ಇದರ ಚಿಂತೆ?" ಎಂದು ಹೇಳಿ ಪುರೋಹಿತನು ಆ ಕ್ಷಣದಲ್ಲೇ ಅದನ್ನು ತೆಗೆದುಕೊಂಡನು.

೧೬೭ ಶಿವನು ಆಶೀರ್ವಾದವನ್ನು ಮಾಡಿ ತನ್ನ ಹೆಂಡತಿಯ ವಾಸದ ಕೋಣೆಗೆ ಹೋಗಲು, ಪುರೋಹಿತನು ಅದನ್ನು (ಆಭರಣಗಳ ಪೆಟ್ಟಿಗೆಯನ್ನು) ತನ್ನ ಖಜಾನೆಯಲ್ಲಿ ಇಟ್ಟುಕೊಂಡನು.

---

ಕೃತೋದ್ವಾಹಂ ತೃತೀಯೇಽಹ್ನಿ ಪ್ರತಿಗ್ರಹಕೃತೇ ಚ ತಮ್ ।
ನಿನಾಯ ವ್ಯಾಜಮಂದಸ್ಯ ಮಾಧವಸ್ಯ ತತೋಽಂತಿಕಮ್ ॥ ೧೬೨
ಅತರ್ಕ್ಯತಪಸಂ ವಂದೇ ತ್ವಾಮಿತ್ಯವಿತಥಂ ವದನ್ ।
ಮಾಧವೋಽಪ್ಯಪತತ್ತಸ್ಯ ಶಿವಸ್ಯೋತ್ಥಾಯ ಪಾದಯೋಃ ॥ ೧೬೩
ದದೌ ಚ ತಸ್ಮೈ ವಿಧಿವತ್ ಕೋಷಾಗಾರಾತ್ತದಾಹೃತಮ್ ।
ಭೂರಿಕೃತ್ರಿಮಮಾಣಿಕ್ಯಮಯಾಭರಣಭಾಂಡಕಮ್ ॥ ೧೬೪
ಶಿವೋಽಪಿ ಪ್ರತಿಗೃಹ್ಯೈತತ್ ತಸ್ಯ ಹಸ್ತೇ ಪುರೋಧಸಃ ।
ನಾಹಂ ವೇದ್ಮಿ ತ್ವಮೇವೈತದ್ ವೇತ್ಸೀತ್ಯುಕ್ತ್ವಾ ಸಮಾರ್ಪಯತ್ ॥ ೧೬೫
ಅಂಗೀಕೃತಮಿದಂ ಪೂರ್ವಂ ಮಯಾ ಚಿಂತಾ ತವಾತ್ರ ಕಾ ।
ಇತ್ಯುಕ್ತ್ವಾ ತಚ್ಚ ಜಗ್ರಾಹ ತತ್ಕ್ಷಣಂ ಸ ಪುರೋಹಿತಃ ॥ ೧೬೬
ಕೃತಾಶಿಷಿ ತತೋ ಯಾತೇ ಸ್ವವಧೂವಾಸಕಂ ಶಿವೇ ।
ನೀತ್ವಾ ಸ ಸ್ಥಾಪಯಾಮಾಸ ತನ್ನಿಜೇ ಕೋಷವೇಶ್ಮನಿ ॥ ೧೬೭

೧೬೮. ಇನ್ನೊಂದು ದಿನ ಮಾಧವನು ರೋಗದ ತೋರಿಕೆಯನ್ನು ಮೆಲ್ಲ ಮೆಲ್ಲನೆ ನಿಲ್ಲಿಸಿ ತಾನು ಮಾಡಿದ ಮಹಾದಾನದ ಪ್ರಭಾವದಿಂದ ರೋಗ ವಾಸಿಯಾಯಿತು ಎಂದು ಹೇಳಿದನು.

೧೬೯. ಹತ್ತಿರ ಬಂದ ಪುರೋಹಿತನನ್ನು ""ಧರ್ಮವನ್ನೇ ನಂಬಿರುವ ನಿನ್ನಿಂದ ನಾನು ದೊಡ್ಡ ಆಪತ್ತಿನಿಂದ ಪಾರಾದೆನು" ಎಂದು ಹೊಗಳಿದನು.

೧೭೦. ""ಇವನ ಮಹಿಮೆಯಿಂದ ಈ ಮೈ ಉಳಿಯಿತು" ಎಂದು ಹೇಳುತ್ತಾ ಎಲ್ಲರಿಗೂ ಕಾಣುವಂತೆಯೇ ಅವನು ಶಿವನೊಡನೆ ಗೆಳೆತನವನ್ನು ಬೆಳೆಸಿಕೊಂಡನು.

೧೭೧. ಕೆಲವು ದಿನಗಳು ಕಳೆಯಲು ಶಿವನು ಪುರೋಹಿತನಿಗೆ ಹೇಳಿದನು ""ಹೀಗೆ ನಿನ್ನ ಮನೆಯಲ್ಲಿ ನಾನೆಷ್ಟು ತಿನ್ನುವುದು ?

೧೭೨. ಆ ಆಭರಣಗಳನ್ನು ನೀನೇ ಏಕೆ ಬೆಲೆಯನ್ನು ನನಗೆ ಕೊಟ್ಟು ತೆಗೆದುಕೊಳ್ಳುವುದಿಲ್ಲ? ಅದು ತುಂಬ ಬೆಲೆಯುಳ್ಳದ್ದು ಎನ್ನುವುದಾದರೆ, ನಿನ್ನ ಕೈಲಾಗುವಷ್ಟೇ ನನಗೆ ಕೊಡು."

೧೭೩. ಅದನ್ನು ಕೇಳಿ ಆ ಒಡವೆಗಳು ಬೆಲೆಕಟ್ಟಲು ಅಸಾಧ್ಯವಾದುವು ಎಂದುಕೊಂಡು ""ನೀನು ಹೇಳಿದ ಹಾಗೇ ಆಗಬಹುದು" ಎಂದು ಆ ಪುರೋಹಿತನು ತನ್ನ ಸಮಸ್ತ ಧನವನ್ನೂ ಆಭರಣಗಳ ಬೆಲೆಯೆಂದು ಶಿವನಿಗೆ ಕೊಟ್ಟು ಬಿಟ್ಟನು.

---

ಮಾಧವೋಽಪಿ ತದನ್ಯೇದ್ಯುರ್ಮಾಂದ್ಯವ್ಯಾಜಂ ಶನೈಸ್ತ್ಯಜನ್ ।
ರೋಗೋಪಶಾಂತಿಂ ವಕ್ತಿ ಸ್ಮ ಮಹಾದಾನಪ್ರಭಾವತಃ ॥ ೧೬೮
ತ್ವಯಾ ಧರ್ಮಸಹಾಯೇನ ಸಮುತ್ತೀರ್ಣೋಽಹಮಾಪದಃ ।
ಇತಿ ಚಾಂತಿಕಮಾಯಾಂತಂ ಪ್ರಶಶಂಸ ಪುರೋಹಿತಮ್ ॥ ೧೬೯
ಏತತ್ ಪ್ರಭಾವಾದೇತನ್ಮೇ ಶರೀರಮಿತಿ ಕೀರ್ತಯನ್ ।
ಪ್ರಕಾಶಮೇವ ಚಕ್ರೇ ಚ ಶಿವೇನ ಸಹ ಮಿತ್ರತಾಮ್ ॥ ೧೭೦
ಶಿವೋಽಪಿ ಯಾತೇಷು ದಿನೇಷ್ವವಾದೀತ್ತಂ ಪುರೋಹಿತಮ್ ।
ಏವಮೇವ ಭವದ್ಗೇಹೇ ಭೋಕ್ಷ್ಯತೇ ಚ ಕಿಯನ್ಮಯಾ ॥ ೧೭೧
ತತ್ಕಿಂ ತ್ವಮೇವ ಮೂಲ್ಯೇನ ಗೃಹ್ಣಾಸ್ಯಭರಣಂ ನ ತತ್ ।
ಮಹಾರ್ಘಮಿತಿ ಚೇನ್ಮೂಲ್ಯಂ ಯಥಾಸಂಭವಿ ದೇಹಿ ಮೇ ॥ ೧೭೨
ತಚ್ಛ್ರುತ್ವಾ ತದನರ್ಘಂ ಚ ಮತ್ವಾ ತನ್ನಿಷ್ಕ್ರಯಂ ದದೌ ।
ತಥೇತಿ ತಸ್ಮೈ ಸರ್ವಸ್ವಂ ಶಿವಾಯ ಸ ಪುರೋಹಿತಃ ॥ ೧೭೩

೧೭೪. ಆಭರಣಗಳ ಬೆಲೆ ತನ್ನ ಹಣಕ್ಕಿಂತಲೂ ಹೆಚ್ಚೆಂದು ಭಾವಿಸಿದ ಪುರೋಹಿತನು ಶಿವನಿಂದ ಪತ್ರವನ್ನು ಬರೆಸಿಕೊಂಡುದಲ್ಲದೆ ತಾನು ಸ್ವಹಸ್ತದಿಂದ ಪತ್ರ ಬರೆದುಕೊಟ್ಟನು.

೧೭೫. ಹೀಗೆ ಪರಸ್ಪರರು ಬರೆದ ಮೇಲೆ ಪತ್ರವನ್ನು ತೆಗೆದುಕೊಂಡ ಪುರೋಹಿತನು ತಾನು ಬೇರೆ (ಮನೆಯಲ್ಲಿ) ವಾಸಿಸತೊಡಗಿದನು.  ಶಿವನೂ ಬೇರೆ ಮನೆಯನ್ನು ಮಾಡಿಕೊಂಡನು.

೧೭೬. ಆಮೇಲೆ ಶಿವಮತ್ತು ಮಾಧವ ಇಬ್ಬರೂ ಒಟ್ಟಾಗಿ ಸೇರಿ ಪುರೋಹಿತನ ಹಣವನ್ನು ಇಷ್ಟಬಂದಂತೆ ಅನುಭವಿಸುತ್ತಾ ಆ ಊರಿನಲ್ಲೇ ಇದ್ದರು.

೧೭೭. ಸ್ವಲ್ಪ ಕಾಲಾನಂತರ ಪುರೋಹಿತನಿಗೆ ಹಣ ಬೇಕಾದಾಗ ಆ ಒಡವೆಗಳಲ್ಲಿ ಒಂದನ್ನು ಮಾರಲು ಪೇಟೆಗೆ ಹೋದನು.

೧೭೮. ಅಲ್ಲಿ ರತ್ನಗಳ ತತ್ತ್ವವನ್ನು ತಿಳಿದ ವ್ಯಾಪಾರಿಗಳು (ಆಭರಣವನ್ನು) ಪರೀಕ್ಷೆ ಮಾಡಿ ಹೇಳಿದರು.  "ಆಹಾ ! ಈ ಕೃತ್ರಿಮವನ್ನು ಯಾವನು ಮಾಡಿದನೋ ಅವನ ಬುದ್ಧಿ ಯಾರಿಗಿದೆ ?

೧೭೯. ನಾನಾ ಬಣ್ಣಗಳನ್ನು ಬಳಿದ ಗಾಜಿನ ಮತ್ತು ಸ್ಫಟಿಕದ ಚೂರುಗಳಿವು.  ರತ್ನಗಳಲ್ಲ, ಹಿತ್ತಾಳೆಗೆ ಅವನ್ನು ಅಂಟಿಸಿದ್ದಾರೆ. ಇದು ಚಿನ್ನವೂ ಅಲ್ಲ."

---

ತದರ್ಥಂ ಚ ಸ್ವಹಸ್ತೇನ ಶಿವಂ ಲೇಖ್ಯಮಕಾರಯತ್ ।
ಸ್ವಯಂ ಚಾಪ್ಯಕರೋದ್ ಬುದ್ಧ್ವಾ ತದ್ಧನಂ ಸ್ವಧನಾಧಿಕಮ್ ॥ ೧೭೪
ಅನ್ಯೋನ್ಯಲಿಖಿತಂ ಹಸ್ತೇ ಗೃಹೀತ್ವಾ ಸ ಪುರೋಹಿತಃ ।
ಪೃಥಗಾಸೀತ್ ಪೃಥಕ್ ಸೋಽಪಿ ಶಿವೋ ಭೇಜೇ ಗೃಹಸ್ಥಿತಿಮ್ ॥ ೧೭೫
ತತಶ್ಚ ಸ ಶಿವಃ ಸೋಽಪಿ ಮಾಧವಃ ಸಂಗತಾವುಭೌ ।
ಪುರೋಹಿತಾರ್ಥಾನ್ ಭುಂಜಾನೌ ಯಥೇಚ್ಛಂ ತತ್ರ ತಸ್ಥತುಃ ॥ ೧೭೬
ಗತೇ ಕಾಲೇ ಚ ಮೂಲ್ಯಾರ್ಥೀ ಸ ಪುರೋಧಾಃ ಕಿಲಾಪಣೇ ।
ತತೋಽಲಂಕರಣಾದೇಕಂ ವಿಕ್ರೇತುಂ ಕಟಕಂ ಯಯೌ ॥ ೧೭೭
ತತ್ರೈತದ್ರತ್ನ ತತ್ತ್ವಜ್ಞಾಃ ಪರೀಕ್ಷ್ಯ ವಣಿಜೋಽಬ್ರುವನ್ ।
ಅಹೋ ಕಸ್ಯಾಸ್ತಿ ವಿಜ್ಞಾನಂ ಯೇನೈತತ್ ಕೃತ್ರಿಮಂ ಕೃತಮ್ ॥ ೧೭೮
ಕಾಚಸ್ಫಟಿಕಖಂಡಾ ಹಿ ನಾನಾರಾಗೋಪರಂಜಿತಾಃ ।
ರೀತಿಬದ್ಧಾ ಇಮೇ ನೈತೇ ಮಣಯೋ ನ ಚ ಕಾಂಚನಮ್ ॥ ೧೭೯

೧೮೦. ಅದನ್ನು ಕೇಳಿ ಕಂಗೆಟ್ಟು ಆ ಪುರೋಹಿತನು ಆಗಲೇ ಹೋಗಿ ಮನೆಯಿಂದ ಎಲ್ಲ ಆಭರಣಗಳನ್ನೂ ತಂದು ಅವರಿಗೆ ತೋರಿಸಿದನು.

೧೮೧. ಅವರು ಅದರಂತೆಯೇ ನೋಡಿ ಎಲ್ಲವೂ ಕೃತಕವೇ ಎಂದು ಹೇಳಿದರು. ಅದನ್ನು ಕೇಳಿದಾಗ ಪುರೋಹಿತನಿಗೆ ಸಿಡಿಲು ಬಡಿದಂತಾಯಿತು.

೧೮೨. ಕೂಡಲೇ ಆ ಪೆದ್ದನು ಹೋಗಿ ಶಿವನಿಗೆ "ನಿನ್ನ ಒಡವೆಗಳನ್ನು ನೀನೇ ತೆಗೆದುಕೋ, ನನ್ನ ಹಣವನ್ನು ನನಗೆ ಕೊಡು" ಎಂದು ಕೇಳಿದನು.

೧೮೩. 'ಆ ಹಣ ಈಗ ನನ್ನಲ್ಲಿ ಎಲ್ಲಿದೆ? ಅದನ್ನು ಪೂರ್ಣವಾಗಿ ನಾನು ಈವರೆಗೆ ಮನೆಯಲ್ಲೇ ಖರ್ಚುಮಾಡಿಬಿಟ್ಟೆ' ಎಂದು ಶಿವನು ಉತ್ತರವನ್ನು ಕೊಟ್ಟನು.

೧೮೪. ಶಿವ, ಪುರೋಹಿತ ಇಬ್ಬರೂ ವಿವಾದ ಮಾಡುತ್ತಾ ಪಕ್ಕದಲ್ಲಿ ಮಾಧವನನ್ನು ಕೂಡಿಸಿಕೊಂಡಿದ್ದ ರಾಜನ ಬಳಿಗೆ ಹೋದರು.

೧೮೫-೧೮೬. "ದೇವ, ಗಾಜು ಮತ್ತು ಸ್ಫಟಿಕಗಳಿಗೆ ಚೆನ್ನಾಗಿ ಬಣ್ಣ ಹಾಕಿ ಹಿತ್ತಾಳೆಯಲ್ಲಿ ಕಟ್ಟಿ ಕೃತಕ ಆಭರಣಗಳನ್ನು ಮಾಡಿ ಶಿವನು ಏನನ್ನೂ ತಿಳಿಯದ ನನ್ನ ಎಲ್ಲ ಹಣವನ್ನು ತಿಂದು ಹಾಕಿದ್ದಾನೆ' ಎಂದು ಪುರೋಹಿತನು ರಾಜನಿಗೆ ವಿಜ್ಞಾಪನೆ ಮಾಡಿದನು.

---

ತಚ್ಛ್ರುತ್ವಾ ವಿಹ್ವಲೋ ಗತ್ವಾ ಸ ಪುರೋಧಾಸ್ತದೈವ ತತ್ ।
ಆನೀಯಾಭರಣಂ ಗೇಹಾತ್ ಕೃತ್ಸ್ನಂ ತೇಷಾಮದರ್ಶಯತ್ ॥ ೧೮೦
ತೇ ದೃಷ್ಟ್ವಾ ತದ್ವದೇವಾಸ್ಯ ಸರ್ವಂ ಕೃತ್ರಿಮಮೇವ ತತ್ ।
ಊಚಿರೇ ಚ ಸ ತಚ್ಛ್ರುತ್ವಾ ವಜ್ರಾಹತ ಇವಾಭವತ್ ॥ ೧೮೧
ತತಶ್ಚ ಗತ್ವಾ ತತ್ಕಾಲಂ ಸ ಮೂಢಃ ಶಿವಮಭ್ಯಧಾತ್ ।
ಗೃಹ್ಣೀಷ್ವ ಸ್ವಾನ್ ಅಲಂಕಾರಾನ್ ತನ್ಮೇ ದೇಹಿ ನಿಜಂ ಧನಮ್ ॥ ೧೮೨
ಕುತೋ ಮಮಾದ್ಯಾಪಿ ಧನಂ ತದ್ಧ್ಯಶೇಷಂ ಗೃಹೇ ಮಯಾ ।
ಕಾಲೇನ ಭುಕ್ತಮಿತಿ ತಂ ಶಿವೋಽಪಿ ಪ್ರತ್ಯಭಾಷತ ॥ ೧೮೩
ತತೋ ವಿವದಮಾನೌ ತೌ ಪಾರ್ಶ್ವಾವಸ್ಥಿತಮಾಧವಮ್ ।
ಪುರೋಧಾಶ್ಚ ಶಿವಶ್ಚೋಭೌ ರಾಜಾನಮುಪಜಗ್ಮತುಃ ॥ ೧೮೪
ಕಾಚಸ್ಫಟಿಕಯೋಃ ಖಂಡ್ಯೈ ರೀತಿಬದ್ಧೈಃ ಸುರಂಜಿತಮ್ ।
ರಚಿತಂ ದೇವ ತತ್ರೈವ ವ್ಯಾಜಾಲಂಕರಣಂ ಮಹತ್ ॥ ೧೮೫
ಶಿವೇನ ಮಮ ಸರ್ವಸ್ವಮಜಾನಾನಸ್ಯ ಭಕ್ಷಿತಮ್ ।
ಇತಿ ವಿಜ್ಞಾಪಯಾಮಾಸ ನೃಪತಿಂ ಸ ಪುರೋಹಿತಃ ॥ ೧೮೬

೧೮೭–೧೯೦. ಆಗ ಶಿವನು ಹೇಳಿದನು. "ರಾಜನ್, ನಾನು ಚಿಕ್ಕಂದಿನಿಂದ ತಪಸ್ವಿಯಾಗಿದ್ದೆನು. ಇವನೇ ನನ್ನನ್ನು ಬೇಡಿಕೊಂಡು ದಾನವನ್ನು ನನಗೆ ಕೊಡಿಸಿದನು. ಆಗಲೇ ಮುಗ್ಧನಾಗಿದ್ದ ನಾನು ಇವನಿಗೆ ಹೇಳಿದೆನು, '"ರತ್ನ ಮುಂತಾದವುಗಳಲ್ಲಿ ಏನೂ ತಿಳಿಯದ ನನಗೆ ನೀನೇ ಪ್ರಮಾಣ". "ನಾನು ನಿನಗೆ ಪ್ರಮಾಣವಾಗಿ ನಿಂತಿದ್ದೇನೆ' ಎಂದು ಅವನೂ ಒಪ್ಪಿಕೊಂಡನು. ದಾನವನ್ನು ಸ್ವೀಕರಿಸಿ ಎಲ್ಲವನ್ನೂ ಅವನ ಕೈಯಲ್ಲೇ ಅರ್ಪಿಸಿದೆನು.

೧೯೦. ಆಮೇಲೆ ಅದನ್ನು ಅವನೇ ತನ್ನ ಇಚ್ಛಾನುಸಾರವಾಗಿ ಕೊಂಡುಕೊಂಡನು. ಪ್ರಭು, ಈ ಬಗೆಗೆ ನಾವಿಬ್ಬರೂ ಸ್ವಹಸ್ತದಿಂದ ಒಬ್ಬರಿಗೊಬ್ಬರು ಬರೆದುಕೊಟ್ಟ ಪತ್ರವೂ ಇದೆ

೧೯೧. ಈಗ ಪ್ರಭುವೇ ತನ್ನ ಜೊತೆಯಲ್ಲಿರುವ ಮಾಧವನ ಬಗ್ಗೆ ಚೆನ್ನಾಗಿ ತಿಳಿದಿರುವನು' ಎಂದು ಶಿವನು ತನ್ನ ಮಾತನ್ನು ಮುಗಿಸಲು ಮಾಧವ ನಿಂತೆಂದನು.

೧೯೨. '"ಮಾನ್ಯನಾದ ನೀನು ಹೀಗೆ ಹೇಳಬೇಡ. ಇದರಲ್ಲಿ ನನ್ನ ಅಪರಾಧವೇನಿದೆ? ಶಿವನದಾಗಲಿ ನಿನ್ನದಾಗಲಿ ನಾನೇನೂ ತೆಗೆದುಕೊಂಡಿಲ್ಲ.

---

ತತಃ ಶಿವೋಽಬ್ರವೀದ್ ರಾಜನ್ಬಾ ಬಾಲ್ಯಾತ್ತಾಪಸೋಽಭವಮ್ ।
ಅನೇನೈವ ತದಭ್ಯರ್ಥ್ಯ ಗ್ರಾಹಿತೋಽಹಂ ಪ್ರತಿಗ್ರಹಮ್ ॥ ೧೮೭
ತದೈವ ಭಾಷಿತಂ ಚಾಸ್ಯ ಮುಗ್ಧೇನಾಪಿ ಸತಾ ಮಯಾ ।
ರತ್ನಾದಿಷ್ವನಭಿಜ್ಞಸ್ಯ ಪ್ರಮಾಣಂ ಮೇ ಭವಾನಿತಿ ॥ ೧೮೮
ಅಹಂ ಸ್ಥಿತಸ್ತವಾತ್ರೇತಿ ಪ್ರತ್ಯಪದ್ಯತ ಚೈವ ತತ್ ।
ಪ್ರತಿಗೃಹ್ಯ ಚ ತತ್ ಸರ್ವಂ ಹಸ್ತೇಽಸ್ಯೈವ ಮಯಾರ್ಪಿತಮ್ ॥ ೧೮೯
ತತೋಽನೇನ ಗೃಹೀತಂ ತತ್ ಸ್ವೇಚ್ಛಂ ಮೂಲ್ಯೇನ ಮೇ ಪ್ರಭೋ ।
ವಿದ್ಯತೇ ಚಾವಯೋರತ್ರ ಸ್ವಹಸ್ತಲಿಖಿತಂ ಮಿಥಃ ॥ ೧೯೦
ಇದಾನೀಂ ಚೈವ ಸಾಹಾಯ್ಯಂ ಪರಂ ಜಾನಾತ್ಯತಃ ಪ್ರಭುಃ ।
ಏವಂ ಶಿವೇ ಸಮಾಪ್ತೋಕ್ತಾವುವಾಚ ಸ ಚ ಮಾಧವಃ ॥ ೧೯೧
ಮೈವಮಾದಿಶ ಮಾನ್ಯಸ್ತ್ವಮಪರಾಧೋ ಮಮಾತ್ರ ಕಃ ।
ನ ಗೃಹೀತಂ ಮಯಾ ಕಿಂಚಿದ್ ಭವತೋ ವಾ ಶಿವಸ್ಯ ವಾ ॥ ೧೯೨

೧೯೩. ತಂದೆಯಿಂದ ಬಂದಿದ್ದ ಆಸ್ತಿಯನ್ನು ದೀರ್ಘಕಾಲ ನ್ಯಾಯವಾಗಿ ಬೇರೆಯವರಲ್ಲಿ ಇರಿಸಿದ್ದೆನು. ಆಗ ಅದನ್ನೇ ತಂದು ನಾನು ಬ್ರಾಹ್ಮಣನಿಗೆ ಕೊಟ್ಟೆನು.

೧೯೪. ಸತ್ಯವಾಗಿ ಅದು ಚಿನ್ನವಲ್ಲ, ಅವು ರತ್ನಗಳಲ್ಲ ಎನ್ನುವುದಾದರೆ ಹಿತ್ತಾಳೆ, ಸ್ಫಟಿಕ ಮತ್ತು ಗಾಜುಗಳ ದಾನದ ಫಲವೇ ನನಗೆ ಸಿಕ್ಕಲಿ.

೧೯೫. ನನ್ನ ಹೃದಯ ನಿಷ್ಕಪಟವಾದುದರಿಂದ ದಾನದಲ್ಲಿ ನನಗೆ ನಂಬಿಕೆ. ಏಕೆಂದರೆ ಅತಿ ಕಷ್ಟವಾದ ರೋಗವನ್ನು ಎಲ್ಲರೂ ನೋಡುತ್ತಿದ್ದಂತೆ ದಾಟಿ ಬಂದಿದ್ದೇನೆ."

೧೯೬. ಹೀಗೆ ಮುಖದ ಬಣ್ಣ ಏನೂ ಬದಲಾಗದಂತೆ ಮಾಧವನು ನುಡಿಯಲು ಮಂತ್ರಿಗಳೊಡನೆ ರಾಜನು ನಕ್ಕು ಸಂತೋಷಪಟ್ಟನು.

೧೯೭. ಮಾಧವನದಾಗಲಿ ಶಿವನದಾಗಲಿ ಸ್ವಲ್ಪವೂ ಅನ್ಯಾಯವಿಲ್ಲ ಎಂದು ಅಲ್ಲಿದ್ದ ಸಭಾಸದರೆಲ್ಲ ಒಳಗೊಳಗೇ ನಗುತ್ತಾ ಹೇಳಿದರು.

೧೯೮. ಪುರೋಹಿತನು ನಾಚಿಕೆ ಪಟ್ಟುಕೊಳ್ಳುತ್ತಾ ಹಣವನ್ನೆಲ್ಲ ಕಳೆದುಕೊಂಡವನಾಗಿ ಅಲ್ಲಿಂದ ಹೊರಟು ಹೋದನು. ಅತಿ ಲೋಭದಿಂದ ಬುದ್ಧಿಯ ಕುರುಡುತನ ಉಂಟಾದರೆ ಅದು ಯಾವ ಆಪತ್ತುಗಳಿಗೆ ತಾನೆ ಕಾರಣವಾಗುವುದಿಲ್ಲ?

೧೯೯. ಸಂತುಷ್ಟನಾಗಿದ್ದ ರಾಜನಿಂದ ಅನುಗ್ರಹವನ್ನು ಪಡೆದ ಆ ಶಿವ, ಮಾಧವ ಎಂಬ ಇಬ್ಬರು ಮೋಸಗಾರರು ಸುಖವಾಗಿ ಬಹುಕಾಲ ಅಲ್ಲೇ ಇದ್ದರು.

---

ಪೈತೃಕಂ ಧನಮನ್ಯತ್ರ ಚಿರಂ ನ್ಯಾಸೀಕೃತಂ ಸ್ಥಿತಮ್ ।
ತದಾ ತದೇವ ಚಾನೀತಂ ಮಯಾ ದತ್ತಂ ದ್ವಿಜನ್ಮನೇ ॥ ೧೯೩
ಸತ್ಯಂ ಯದಿ ನ ತತ್ ಸ್ವರ್ಣಂ ನ ಚ ರತ್ನಾನಿ ತಾನಿ ತತ್ ।
ರೀತಿಸ್ಫಟಿಕಕಾಚಾನಾಂ ಪ್ರದಾನಾದಸ್ತು ಮೇ ಫಲಮ್ ॥ ೧೯೪
ನಿರ್ವ್ಯಾಜಹೃದಯತ್ವೇನ ದಾನೇ ಚ ಪ್ರತ್ಯಯೋ ಮಮ ।
ದೃಷ್ಟ ಏವಾವತೀರ್ಣೋऽಸ್ಮಿ ಯದ್ ರೋಗಮತಿದುಸ್ತರಮ್ ॥ ೧೯೫
ಇತ್ಯಭಿನ್ನಮುಖಚ್ಛಾಯಮುಕ್ತವತ್ಯಥ ಮಾಧವೇ ।
ಜಹಾಸ ಮಂತ್ರಿಸಹಿತೋ ರಾಜಾ ತಸ್ತೌ ತುತೋಷ ಚ ॥ ೧೯೬
ನೈವಮನ್ಯಾಯತಃ ಕಿಂಚಿತ್ ಮಾಧವಸ್ಯ ಶಿವಸ್ಯ ವಾ ।
ಇತಿ ತತ್ರ ಸಭಾಸದ್ಭಿಃ ಸಾಂತರ್ಹಾಸಮುದೀರಿತೇ ॥ ೧೯೭
ಪುರೋಹಿತಃ ಸೋऽಥ ಯಯೌ ಹಾರಿತಾರ್ಥೋ ವಿಲಜ್ಜಿತಃ ।
ಕಾಸಾಂ ಹಿ ನಾಪದಾಂ ಹೇತುರತಿಲೋಭಾಂಧಬುದ್ಧಿತಾ ॥ ೧೯೮
ತೌ ಚ ಧೂರ್ತೌ ತತಸ್ತತ್ರ ತಸ್ಥತುಃ ಶಿವಮಾಧವೌ ।
ಪರಿತುಷ್ಟನೃಪಾವಾಪ್ತಪ್ರಸಾದಸುಖಿತೌ ಚಿರಮ್ ॥ ೧೯೯

೨೦೦. ಹೀಗೆ ನದಿಯ ಪ್ರವಾಹದಲ್ಲಿ ಬಲೆ ಹಾಕಿ ಜೀವನ ಮಾಡುವ ಬೆಸ್ತರಂತೆ ವಂಚಕರೂ ನೂರಾರು ಬೇರೆ ಬೇರೆ ಸೂತ್ರಗಳಿಂದ ನಾಲಿಗೆಯ ಬಲೆಗಳನ್ನು ಹರಡುತ್ತಾರೆ.

೨೦೧. ತಂದೆಯೇ, ಅದೇ ರೀತಿಯಾಗಿ ಈ ಬ್ರಾಹ್ಮಣನೂ ತಾನು ಕನಕಪುರಿಯನ್ನು ನೋಡಿದ್ದೇನೆಂದು ಸುಳ್ಳನ್ನು ಹೇಳಿ ನಿನ್ನನ್ನು ಮೋಸಗೊಳಿಸಿ ನನ್ನನ್ನು ಪಡೆದುಕೊಳ್ಳಲು ಬಯಸಿದ್ದಾನೆ.

೨೦೨. ಆದ್ದರಿಂದ ಈಗ ನಿನಗೆ ನನ್ನ ಮದುವೆಯ ಬಗೆಗೆ ತ್ವರೆ ಬೇಡ. ನಾನು ಕನ್ಯೆಯಾಗಿಯೇ ಉಳಿದಿದ್ದೇನೆ. ಮುಂದೇನಾಗುವುದೋ ನೋಡೋಣ.'

೨೦೩. ಮಗಳು ಕನಕರೇಖೆ ಹೀಗೆ ನುಡಿದಾಗ ದೊರೆ ಪರೋಪಕಾರಿಯು ಅವಳಿಗೆ ಹೀಗೆ ಉತ್ತರವನ್ನು ಹೇಳಿದನು.

೨೦೪. "ಮಗಳೆ, ಹರೆಯದಲ್ಲಿ ಕನ್ಯೆಯಾಗಿ ದೀರ್ಘಕಾಲ ಇರುವುದು ಸರಿಯಲ್ಲ. ಗುಣಗಳಲ್ಲಿ ಮತ್ಸರವನ್ನಿಡುವ ಕೆಟ್ಟ ಮಂದಿ ಸುಳ್ಳು ದೋಷವನ್ನು ಆರೋಪಿಸುತ್ತಾರೆ.

೨೦೫. ವಿಶೇಷವಾಗಿ ಜನರು ಉತ್ತಮಜನರಲ್ಲಿ ಕಳಂಕವನ್ನು ಹುಟ್ಟಿಸುತ್ತಾರೆ. ಈ ವಿಷಯದಲ್ಲಿ ಹರಸ್ವಾಮಿಯ ಕಥೆಯನ್ನು ಹೇಳುತ್ತೇನೆ, ಕೇಳು.

---

ಏವಂ ಸೂತ್ರಶತೈಸ್ತೈಸ್ತೈರ್ಜಿಹ್ವಾಜಾಲಾನಿ ತನ್ವತೇ ।
ಜಾಲೋಪಜೀವಿನೋ ಧೂರ್ತಾ ಧಾರಾಯಾಂ ಧೀವರಾ ಇವ ॥ ೨೦೦

ತತ್ತಾತ ಮಿಥ್ಯಾ ಕನಕಪುರೀಂ ದೃಷ್ಟಾಮಿವ ಬ್ರುವನ್ ।
ಏಷೋಽಪಿ ವಂಚಯಿತ್ವಾ ತ್ವಾಂ ವಿಪ್ರೋ ಮತ್ಪ್ರಾಪ್ತಿಮಿಚ್ಛತಿ ॥ ೨೦೧

ಅತಃ ಸಂಪ್ರತಿ ಮಾ ಭೂತ್ತೇ ಮದ್ವಿವಾಹಕೃತೇ ತ್ವರಾ ।
ಸ್ಥಿತಾಸ್ಮಿ ತಾವತ್ ಕನ್ಯೈವ ಪಶ್ಯಾಮೋ ಭವಿತಾತ್ರ ಕಿಮ್ ॥ ೨೦೨

ಇತ್ಯುಕ್ತಃ ಸುತಯಾ ರಾಜಾ ತಯಾ ಕನಕರೇಖಯಾ ।
ಪರೋಪಕಾರೀ ಸ ತದಾ ತಾಮೇವಂ ಪ್ರತ್ಯಭಾಷತ ॥ ೨೦೩

ಯೌವನೇ ಕನ್ಯಕಾಭಾವಶ್ಚಿರಂ ಪುತ್ರಿ ನ ಯುಜ್ಯತೇ ।
ಮಿಥ್ಯಾ ವದಂತಿ ದೋಷಂ ಹಿ ದುರ್ಜನಾ ಗುಣಮತ್ಸರಾಃ ॥ ೨೦೪

ಉತ್ತಮಸ್ಯ ವಿಶೇಷೇಣ ಕಲಂಕೋತ್ಪಾದಕೋ ಜನಃ ।
ಹರಸ್ವಾಮಿಕಥಾಮತ್ರ ಶೃಣ್ವೇತಾಂ ಕಥಯಾಮಿ ತೇ ॥ ೨೦೫

## ಹರಸ್ವಾಮಿಯ ಕಥೆ

೨೦೬ ಗಂಗೆಯ ದಡದಲ್ಲಿ ಇರುವ ಕುಸುಮಪುರ ಎಂಬ ನಗರದಲ್ಲಿ ಹರಸ್ವಾಮಿ ಎಂಬ ಒಬ್ಬ ತಪಸ್ವಿಯು ಪುಣ್ಯಕ್ಷೇತ್ರದಲ್ಲಿ ವಾಸಮಾಡುತ್ತಿದ್ದನು.

೨೦೭ ಭಿಕ್ಷೆಯಿಂದ ಜೀವಿಸುತ್ತಿದ್ದ ಅವನು ಬ್ರಾಹ್ಮಣನಾಗಿದ್ದು ಗಂಗೆಯ ದಡದಲ್ಲಿ ಒಂದು ಪರ್ಣಶಾಲೆಯನ್ನು ಕಟ್ಟಿಕೊಂಡಿದ್ದನು. ತಪಸ್ಸಿನ ತೀವ್ರತೆಯಿಂದ ಅವನು ಜಗತ್ತಿನ ಗೌರವಕ್ಕೆ ಪಾತ್ರನಾಗಿದ್ದನು.

೨೦೮. ಒಂದು ಸಲ ಅವನು ಭಿಕ್ಷೆಗಾಗಿ ಹೊರಟಾಗ ದೂರದಿಂದ ಅವನನ್ನು ನೋಡಿ ಅವನ ಗುಣಗಳಲ್ಲಿ ಅಸಹನೆ ಇದ್ದ ಒಬ್ಬ ದುರುಳನು ಜನರ ಮಧ್ಯದಲ್ಲಿ ಹೀಗೆ ಹೇಳಿದನು.

೨೦೯. "ಇವನು ಕಪಟತಪಸ್ವಿ ಏಕೆ ಆದನೆಂಬುದು ನಿಮಗೆ ಗೊತ್ತೆ? ಇನ್ನೊಂದು ನಗರದಲ್ಲಿ ಇವನೇ ಮಕ್ಕಳನ್ನೆಲ್ಲ ಕಬಳಿಸಿದ್ದಾನೆ"

೨೧೦. ಅದನ್ನು ಕೇಳಿ ಅವನಂತಹವನೇ ಇನ್ನೊಬ್ಬನು ಹೇಳಿದನು. "ಸತ್ಯ, ಹೀಗೆ ಜನರು ಹೇಳುತ್ತಿದ್ದುದನ್ನು ನಾನೂ ಕೇಳಿದ್ದೇನೆ".

೨೧೧. ಮೂರನೆಯವನೂ ಅದನ್ನೇ ಸಮರ್ಥಿಸಿ "ಹೌದು, ಅದು ಹಾಗೆಯೇ' ಎಂದು ದನಿಗೂಡಿಸಿದನು. ಖಳಜನರ ಮಾತಿನ ಸರಪಣಿಯು ಶಿಷ್ಟಜನರ ಅಪವಾದವನ್ನು ಕಟ್ಟಿ ಜೋಡಿಸುತ್ತದೆ.

---

ಗಂಗೋಪಕಂಠೇ ಕುಸುಮಪುರಂ ನಾಮಾಸ್ತಿ ಯತ್ ಪುರಮ್ ।
ಹರಸ್ವಾಮೀತಿ ಕೋಽಪ್ಯಾಸೀತ್ ತೀರ್ಥಾರ್ಥೀ ತತ್ರ ತಾಪಸಃ ॥ ೨೦೬
ಸ ಭೈಕ್ಷವೃತ್ತಿರ್ವಿಪ್ರೋಽತ್ರ ಗಂಗಾತೀರಕೃತೋಟಜಃ ।
ತಪಃಪ್ರಕರ್ಷಾಲ್ಲೋಕಸ್ಯ ಗೌರವಾಸ್ಪದತಾಂ ಯಯೌ ॥ ೨೦೭
ಕದಾಚಿಚ್ಚಾತ್ರ ತಂ ದೃಷ್ಟ್ವಾ ದೂರಾದ್ ಭಿಕ್ಷಾವಿನಿರ್ಗತಮ್ ।
ಜನಮಧ್ಯೇ ಜಗಾದೈಕಸ್ತದ್ಗುಣಾಸಹನಃ ಖಲಃ ॥ ೨೦೮
ಅಪಿ ಜಾನೀಥ ಜಾತೋಽಯಂ ಕೀದೃಕ್ಕಪಟತಾಪಸಃ ।
ಅನೇನೈವಾರ್ಭಕಾಃ ಸರ್ವೇ ನಗರೇಽಮುತ್ರ ಭಕ್ಷಿತಾಃ ॥ ೨೦೯
ತಚ್ಛ್ರುತ್ವಾ ಚ ದ್ವಿತೀಯೋಽತ್ರ ತತ್ರಾವೋಚತ ತಾದೃಶಃ ।
ಸತ್ಯಂ ಶ್ರುತಂ ಮಯಾಪ್ಯೇತದುಚ್ಯಮಾನಂ ಜನೈರಿತಿ ॥ ೨೧೦
ಏವಮೇತದಿತಿ ಸ್ಮಾಹ ತೃತೀಯೋಽಪಿ ಸಮರ್ಥಯನ್ ।
ಬಧ್ನಾತ್ಯಾರ್ಯಪರೀವಾದಂ ಖಲಸಂವಾದಶೃಂಖಲಾ ॥ ೨೧೧

೨೧೨. ಇದೇ ಕ್ರಮದಿಂದ ಕಿವಿಯಿಂದ ಕಿವಿಗೆ ಪರಂಪರೆಯಾಗಿ ಹೋದ ಈ ಗಾಳಿಮಾತು ಆ ಊರಿನಲ್ಲೆಲ್ಲ ಬಹಳವಾಗಿ ಬೆಳೆದು ಹರಡಿಕೊಂಡಿತು.

೨೧೩. ಹರಸ್ವಾಮಿ ಮಕ್ಕಳನ್ನೆಲ್ಲ ಎತ್ತಿಕೊಂಡು ಹೋಗಿ ತಿಂದು ಹಾಕುತ್ತಾನೆ ಎಂದು ಊರಿನ ಜನರೆಲ್ಲ ಮಕ್ಕಳನ್ನು ತಡೆ ಹಿಡಿದು ಮನೆಯಿಂದ ಹೊರಗೆ ಹೋಗುವುದಕ್ಕೇ ಬಿಡಲಿಲ್ಲ.

೨೧೪. ಆಮೇಲೆ ತಮ್ಮ ಸಂತತಿಯೇ ನಾಶವನ್ನು ಹೊಂದುತ್ತದೆ ಎಂದು ಭಯಪಟ್ಟ ಬ್ರಾಹ್ಮಣರು ಒಟ್ಟಿಗೆ ಸೇರಿ ಹರಸ್ವಾಮಿಯನ್ನು ಆ ಊರಿನಿಂದ ಓಡಿಸಲು ಗುಟ್ಟಾಗಿ ಆಲೋಚನೆ ಮಾಡಿದರು.

೨೧೫. ಅವನು ಕೋಪಗೊಂಡರೆ ನಮ್ಮನ್ನೇ ನುಂಗಿಹಾಕಬಹುದು ಎಂಬ ಭಯದಿಂದ ಅವರು ಅವನಿಗೆ ನೇರವಾಗಿ ಹೇಳಲಾರದೆ ಕೊನೆಗೆ ಅವನ ಬಳಿಗೆ ದೂತರನ್ನು ಕಳುಹಿಸಿದರು.

೨೧೬. ಆ ದೂತರೂ ಹೋಗಿ ದೂರದಿಂದಲೇ ಹರಸ್ವಾಮಿಗೆ "ನೀನು ಈ ಊರಿನಿಂದ ಹೊರಟು ಹೋಗಬೇಕೆಂದು ಬ್ರಾಹ್ಮಣರು ಹೇಳುತ್ತಿದ್ದಾರೆ." ಎಂದು ಹೇಳಿದರು.

೨೧೭. ಆಶ್ಚರ್ಯಗೊಂಡ ಅವನು 'ಯಾವ ಕಾರಣಕ್ಕಾಗಿ?' ಎಂದು ಕೇಳಿದಾಗ, ಅವರು 'ಮಕ್ಕಳು ಕಂಡರೆ ಸಾಕು, ಅವರನ್ನು ತಿಂದು ಹಾಕುತ್ತೀಯಲ್ಲ' ಎಂದು ಮತ್ತೆ ಹೇಳಿದರು.

---

ತೇನೈವ ಚ ಕ್ರಮೇಣೈಷ ಗತಃ ಕರ್ಣಪರಂಪರಾಮ್ ।
ಪ್ರವಾದೋ ಬಹುಲೀಭಾವಂ ಸರ್ವತ್ರಾತ್ರ ಪುರೇ ಯಯೌ ॥ ೨೧೨

ಪೌರಾಶ್ಚ ಸರ್ವೇ ಗೇಹೇಭ್ಯೋ ಬಲಾದ್ ಬಾಲಾನ್ನ ತತ್ಯಜುಃ ।
ಹರಸ್ವಾಮೀ ಶಿಶೂನ್ನೀತ್ವಾ ಭಕ್ಷಯತ್ಯಖಿಲಾನಿತಿ ॥ ೨೧೩

ತತಶ್ಚ ಬ್ರಾಹ್ಮಣಾಸ್ತತ್ರ ಸಂತತಿಕ್ಷಯಭೀರವಃ ।
ಸಂಭೂಯ ಮಂತ್ರಯಾಮಾಸುಃ ಪುರಾತ್ತಸ್ಯ ಪ್ರವಾಸನಮ್ ॥ ೨೧೪

ಗ್ರಸೇತ ಕುಪಿತಃ ಸೋಽಸ್ಮಾನಿತಿ ಸಾಕ್ಷಾದ್ ಭಯಾನ್ನ ತೇ ।
ಯದಾ ತಸ್ಯಾಶಕನ್ ವಕ್ತುಂ ದೂತಾನ್ ವಿಸಸೃಜುಸ್ತದಾ ॥ ೨೧೫

ತೇ ಚ ಗತ್ವಾ ತದಾ ದೂತಾ ದೂರಾದೇವ ತಮಬ್ರುವನ್ ।
ನಗರಾದ್ ಗಮ್ಯತಾಮಸ್ಮಾದಿತ್ಯಾಹುಸ್ತ್ವಾಂ ದ್ವಿಜಾತಯಃ ॥ ೨೧೬

ಕಿಂ ನಿಮಿತ್ತಮಿತಿ ಪ್ರೋಕ್ತಾ ವಿಸ್ಮಿತೇನಾಥ ತೇನ ತೇ ।
ಪುನರೂಚುಸ್ತ್ವಮಶ್ನಾಸಿ ಬಾಲದರ್ಶಮಿಹೇತಿ ತಮ್ ॥ ೨೧೭

೨೧೮. ಅದನ್ನು ಕೇಳಿದ ಹರಸ್ವಾಮಿಯು ತಾನೇ ಜನರಿಗೆ ನಂಬಿಕೆಯನ್ನು ಹುಟ್ಟಿಸಬೇಕೆಂದು ಯೋಚಿಸಿ ಬ್ರಾಹ್ಮಣರ ಬಳಿಗೆ ಹೋದನು. ಅವನನ್ನು ಕಂಡು ಜನರು ಹೆದರಿಕೆಯಿಂದ ಅದೃಶ್ಯರಾಗುತ್ತಿದ್ದರು.

೨೧೯. ಬ್ರಾಹ್ಮಣರು ಅವನನ್ನು ನೋಡಿದ ಕೂಡಲೇ ಬೆದರಿ ಮಠದ ಮೇಲೆ ಹತ್ತಿದರು. ಗಾಳಿಮಾತಿನಿಂದ ಹೆದರಿದ ಜನರು ಪ್ರಾಯಶಃ ವಿಚಾರ ಮಾಡಲು ಶಕ್ತರಾಗಿರುವುದಿಲ್ಲ.

೨೨೦. ಆಮೇಲೆ ಹರಸ್ವಾಮಿಯು ತಾನು ಕೆಳಗೆ ನಿಂತು ಮೇಲೆ ನಿಂತಿದ್ದ ಒಬ್ಬೊಬ್ಬ ಬ್ರಾಹ್ಮಣನನ್ನೂ ಹೆಸರು ಹಿಡಿದು ಕರೆದು ಅವರಿಗೆ ಹೀಗೆ ಹೇಳಿದನು.

೨೨೧. "'ವಿಪ್ರರೆ, ನಿಮಗೆ ಇಂದು ಈ ಅಜ್ಞಾನ ಏಕೆ? ಪರಸ್ಪರ ನೀವು ನೋಡಿಕೊಳ್ಳಬಾರದೆ? ನಾನು ಯಾರ ಮಕ್ಕಳನ್ನು ಎಲ್ಲಿ ತಿಂದಿದ್ದೇನೆ? ಎಷ್ಟು ಜನರನ್ನು ತಿಂದಿದ್ದೇನೆ?"

೨೨೨. ಅದನ್ನು ಕೇಳಿ ಆ ವಿಪ್ರರು ಒಬ್ಬರಿಗೊಬ್ಬರು ಹೇಳಿ ವಿಮರ್ಶೆ ಮಾಡಿದಾಗ ಎಲ್ಲರ ಎಲ್ಲ ಮಕ್ಕಳೂ ಜೀವಂತರಾಗಿದ್ದಾರೆ (ಎಂದು ತಿಳಿದುಬಂದಿತು).

೨೨೩. ಆಮೇಲೆ ಬೇರೆ ಪೌರರನ್ನು ವಿಚಾರಿಸಿದಾಗ ಅಲ್ಲಿ ಅದನ್ನು ಹಾಗೆಯೇ ಒಪ್ಪಿಕೊಂಡರು. ಬ್ರಾಹ್ಮಣರೂ, ವೈಶ್ಯರೂ ಸೇರಿದಂತೆ ಎಲ್ಲರೂ ಒಟ್ಟಿಗೆ ಹೀಗೆಂದರು.

---

ತಚ್ಛ್ರುತ್ವಾ ಸ ಹರಸ್ವಾಮೀ ಸ್ವಯಂ ಪ್ರತ್ಯಾಯನೇಚ್ಛಯಾ ।
ವಿಪ್ರಾಣಾಂ ನಿಕಟಂ ತೇಷಾಂ ಭೀತಿನಶ್ಯಜ್ಜನೋ ಯಯೌ ॥ ೨೧೮
ವಿಪ್ರಾಶ್ಚಾರುರುಹುಸ್ತ್ರಾಸಾತ್ತಂ ದೃಷ್ಟ್ವೈವ ಮಠೋಪರಿ ।
ಪ್ರವಾದಮೋಹಿತಃ ಪ್ರಾಯೋ ನ ವಿಚಾರಕ್ಷಮೋ ಜನಃ ॥ ೨೧೯
ಅಥ ದ್ವಿಜಾನ್ ಹರಸ್ವಾಮೀ ತಾನ್ ಏಕೈಕಮಧಃ ಸ್ಥಿತಃ ।
ನಾಮಗ್ರಾಹಂ ಸಮಾಹೂಯ ಸ ಜಗಾದೋಪರಿಸ್ಥಿತಾನ್ ॥ ೨೨೦
ಕೋಽಯಂ ಮೋಹೋಽದ್ಯ ವೋ ವಿಪ್ರಾ ನಾವೇಕ್ಷಧ್ವಂ ಪರಸ್ಪರಮ್ ।
ಕಿಯಂತೋ ಬಾಲಕಾಃ ಕಸ್ಯ ಮಯಾ ಕುತ್ರ ಚ ಭಕ್ಷಿತಾಃ ॥ ೨೨೧
ತಚ್ಛ್ರುತ್ವಾ ಯಾವದನ್ಯೋನ್ಯಂ ವಿಪ್ರಾಃ ಪರಿಮೃಶಂತಿ ತೇ ।
ತಾವತ್ ಸರ್ವೇಽಪಿ ಸರ್ವೇಷಾಂ ಜೀವಂತೋ ಬಾಲಕಾಃ ಸ್ಥಿತಾಃ ॥ ೨೨೨
ಕ್ರಮಾನಿಯುಕ್ತಾಶ್ಚಾನ್ಯೇಽಪಿ ಪೌರಾಸ್ತತ್ರ ತಥೈವ ತತ್ ।
ಪ್ರತ್ಯಪದ್ಯಂತ ಸರ್ವೇಽಪಿ ಸವಿಪ್ರವಣಿಜೋಽಬ್ರುವನ್ ॥ ೨೨೩

೨೨೪. "ಅಯ್ಯೋ ! ಮೂಢರಾದ ನಾವು ಈ ಸಾಧುವನ್ನು ಸುಮ್ಮನೆ ತೆಗಳಿದೆವು. ಎಲ್ಲರ ಮಕ್ಕಳೂ ಜೀವಂತರಾಗೇ ಇದ್ದಾರೆ. ಯಾರ ಮಕ್ಕಳನ್ನು ಇವನು ತಿಂದನು?'

೨೨೫. ಹೀಗೆ ಎಲ್ಲರೂ ಹೇಳಿದ ಮೇಲೆ ಹರಸ್ವಾಮಿಯು (ಅಪರಾಧದ ಆರೋಪದಿಂದ ಮುಕ್ತನಾಗಿ) ಶುದ್ಧಿಯನ್ನು ಪಡೆದು ಆಗಲೇ ನಗರದಿಂದ ಹೊರಟು ಹೋಗಲು ಸಿದ್ಧನಾದನು.

೨೨೬. ದುಷ್ಟರು ಹುಟ್ಟಿಸಿದ ದೋಷದಿಂದ ಮನಸ್ಸು ಬೇಸರಗೊಂಡ ಮೇಲೆ ಅಭಿಮಾನಿ ಮನುಷ್ಯನಿಗೆ ಅವಿವೇಕಿಗಳೇ ತುಂಬಿರುವ ಕೆಟ್ಟ ದೇಶದಲ್ಲಿ ಯಾವ ಪ್ರೀತಿ ಇರುತ್ತದೆ?

೨೨೭. ಆಮೇಲೆ ವೈಶ್ಯರೂ ಬ್ರಾಹ್ಮಣರೂ ಹರಸ್ವಾಮಿಯ ಅಡಿಗಳಿಗೆರಗಿ ಪ್ರಾರ್ಥಿಸಿಕೊಂಡಾಗ ಅವನು ಹೇಗೋ ಅಲ್ಲೇ ವಾಸಿಸಲು ಒಪ್ಪಿಕೊಂಡನು.

೨೨೮. ಹೀಗೆ ದುರುಳರು ಒಳ್ಳೆಯ ಕಾರ್ಯವನ್ನು ನೋಡಿದಾಗ ಅವರ ದ್ವೇಷವು ಉಕ್ಕಿ ಅವರನ್ನು ಮಾತನಾಡಿಸುತ್ತದೆ. ಇದೇ ರೀತಿ ಅವರು ಸಜ್ಜನರ ಮೇಲೆ ಹುಸಿ ತಪ್ಪುಗಳನ್ನು ಹೊರಿಸುತ್ತಾರೆ. ಒಳಗೆ ನೋಡಲು ಆ ದುರ್ಜನರಿಗೆ ತುಸು ಅವಕಾಶ ಸಿಕ್ಕಿದರೆ ಸಾಕು, ಉರಿಯುವ ಬೆಂಕಿಗೆ ಧಾರಾಳವಾಗಿ ತುಪ್ಪವನ್ನು ಸುರಿದಂತಾಗುತ್ತದೆ.

---

ಅಹೋ ವಿಮೂಢೈರಸ್ಮಾಭಿಃ ಸಾಧುರ್ಮಿಥ್ಯೈವ ದೂಷಿತಃ ।
ಜೀವಂತಿ ಬಾಲಾಃ ಸರ್ವೇಷಾಂ ಸಾಧುರ್ಮಿಥ್ಯೈವ ದೂಷಿತಃ ॥ ೨೨೪
ಇತ್ಯುಕ್ತವತ್ಸು ಸರ್ವೇಷು ಹರಸ್ವಾಮೀ ತದೈವ ಸಃ ।
ಸಂಪನ್ನಶುದ್ಧಿರ್ನಗರಾದ್ಗಂತುಂ ಪ್ರವವೃತೇ ತತಃ ॥ ೨೨೫
ದುರ್ಜನೋತ್ಪಾದಿತಾವದ್ಯವಿರಕ್ತೀಕೃತಚೇತಸಃ ।
ಅವಿವೇಕಿನಿ ದುರ್ದೇಶೇ ರತಿಃ ಕಾ ಹಿ ಮನಸ್ವಿನಃ ॥ ೨೨೬
ತತೋ ವಣಿಗ್ಭಿರ್ವಿಪ್ರೈಶ್ಚ ಪ್ರಾರ್ಥಿತಶ್ಚರಣಾನತೈಃ ।
ಕಥಂಚಿತ್ ಸ ಹರಸ್ವಾಮೀ ತತ್ರ ವಸ್ತುಮಮನ್ಯತ ॥ ೨೨೭
ಇತ್ಥಂ ಸಚ್ಚರಿತಾವಲೋಕನಲಸದ್ವಿದ್ವೇಷವಾಚಾಲಿತಾ
ಮಿಥ್ಯಾದೂಷಣಮೇವಮೇವ ದದತಿ ಪ್ರಾಯಃ ಸತಾಂ ದುರ್ಜನಾಃ ।
ಕಿಂಚಿತ್ ಕಿಂ ಪುನರಾಪ್ನುವಂತಿ ಯದಿ ತೇ ತತ್ರಾವಕಾಶಂ ಮನಾಗ್
ದ್ರಷ್ಟುಂ ತಜ್ಜ್ವಲಿತೇನಲೇ ನಿಪತಿತಃ ಪ್ರಾಜ್ಯಾಜ್ಯಧಾರೋತ್ಕರಃ ॥
೨೨೮

೨೨೯. ಆದ್ದರಿಂದ ಮಗಳೇ, ನನ್ನನ್ನು ನೋವಿನ ಶಲ್ಯದಿಂದ ಮುಕ್ತಗೊಳಿಸಲು ನೀನು ಇಷ್ಟಪಟ್ಟರೆ, ಈ ನಿನ್ನ ಹೊಸ ಹರೆಯವು ಉಕ್ಕುತ್ತಿರುವಾಗ ದುಷ್ಟರ ಕೆಟ್ಟ ಮಾತುಗಳಿಗೆ ಸುಲಭವಾಗಿ ಗುರಿಯಾಗುವ ಕನ್ಯಕಾಭಾವವನ್ನು ದೀರ್ಘಕಾಲದವರೆಗೆ ನಿನ್ನ ಇಚ್ಛೆಯಂತೆ ನೀನು ಹೊಂದಿರುವುದು ಸರಿಯಲ್ಲ.'

೨೩೦. ಹೀಗೆ ತನ್ನ ತಂದೆಯಾದ ರಾಜನು ಹೇಳಿದಾಗ ರಾಜಕುಮಾರಿ ಕನಕರೇಖೆಯು ತನ್ನ ನಿಶ್ಚಯದಲ್ಲೇ ನಿಶ್ಚಲವಾಗಿದ್ದು ಮತ್ತೆ ಅವನಿಗಿಂತೆಂದಳು.

೨೩೧. ""ಆ ಕನಕಪುರಿಯನ್ನು ಯಾವನಾದರೂ ವಿಪ್ರನೋ ಅಥವಾ ಕ್ಷತ್ರಿಯನೋ ನೋಡಿದ್ದರೆ, ಅವನನ್ನು ಬೇಗನೆ ಹುಡುಕಿಸು. ಅವನಿಗೇ ನನ್ನನ್ನು ಕೊಡು ಎಂದು ಮೊದಲೇ ನಾನು ಹೇಳಿರುವೆನಷ್ಟೆ".

೨೩೨. ಹೀಗೆ ಅವಳ ತೀರ್ಮಾನ ದೃಢವಾಗಿರುವುದನ್ನು ಕೇಳಿ, ಅವಳು ಪೂರ್ವಜನ್ಮದ ಸ್ಮರಣೆ ಇರುವವಳೆಂದು ಎಣಿಸಿ, ಆ ಮಗಳಿಗೆ ಬೇರೆಯ ತನಗೆ ಇಷ್ಟವಾದ ಗಂಡನನ್ನು ತರಲು ಯಾವ ಉಪಾಯದ ದಾರಿಯನ್ನೂ ಕಾಣದವನಾಗಿ ರಾಜನು ಆ ದೇಶದಲ್ಲಿ ಅಲ್ಲಿಂದ ಮುಂದೆ ಪ್ರತಿದಿನವೂ ಬರುವ ಹೊಸ ಆಗಂತುಕರನ್ನು ಪ್ರಶ್ನಿಸುವುದಕ್ಕಾಗಿ ಮತ್ತೆ ತಮಟೆಯನ್ನು ಬಾರಿಸಿ ಘೋಷಣೆಯನ್ನು ಮಾಡಲು ಆಣತಿ ಮಾಡಿದನು.

---

ತಸ್ಮಾದ್ ವಿಶಲ್ಯಯಿತುಮಿಚ್ಛಸಿ ಮಾಂ ಯದಿ ತ್ವಂ
ವತ್ಸೇ ತದುನ್ಮಿಷತಿ ನೂತನಯೌವನೇ□ಸ್ಮಿನ್ ।
ನ ಸ್ವೇಚ್ಛಮರ್ಹಸಿ ಚಿರಂ ಖಲು ಕನ್ಯಕಾತ್ವಮ್
ಆಸೇವಿತುಂ ಸುಲಭದುರ್ಜನದುಷ್ಪ್ರವಾದಮ್ ॥ ೨೨೯

ಇತ್ಯುಕ್ತಾ ನೃಪತಿನಾ ಪಿತ್ರಾ ಪ್ರಾಯೇಣ ಕನಕರೇಖಾ ಸಾ ।
ನಿಜಗಾದ ರಾಜತನಯಾ ತಮವಸ್ಥಿತನಿಶ್ಚಯಾ ಭೂಯಃ ॥ ೨೩೦

ದೃಷ್ಟಾ ಕನಕಪುರೀ ಸಾ ವಿಪ್ರೇಣ ಕ್ಷತ್ರಿಯೇಣ ವಾ ಯೇನ ।
ತರ್ಹಿ ತಮಾಶು ಗವೇಷಯ ತಸ್ಮೈ ಮಾಂ ದೇಹಿ ಭಾಷಿತಂ ಹಿ ಮಯಾ ॥ ೨೩೧

ತಚ್ಛ್ರುತ್ವಾ ದೃಢನಿಶ್ಚಯಾಂ ವಿಗಣಯನ್ ಜಾತಿಸ್ಮರಾಂ ತಾಂ ಸುತಾಂ
ನಾಸ್ಯಾಶ್ಚಾನ್ಯಮಭೀಷ್ಟ ಭರ್ತೃಘಟನೇ ಪಶ್ಯನ್ನುಪಾಯಕ್ರಮಮ್ ।
ದೇಶೇ ತತ್ರ ತತಃ ಪ್ರಭೃತ್ಯನುದಿನಂ ಪ್ರಷ್ಟುಂ ನವಾಗಂತುಕಾನ್
ಭೂಯೋ ಭೂಮಿಪತಿಃ ಸುನಿತ್ಯಪಟಹಪ್ರೋದ್ಘೋಷಣಾ-
ಮಾದಿಶತ್ ॥ ೨೩೨

೨೩೩ ಯಾವ ವಿಪ್ರನು ಅಥವಾ ಕ್ಷತ್ರಿಯನು ಕನಕಪುರಿಯನ್ನು ನೋಡಿದ್ದಾನೋ, ಅವನು ಹೇಳಲಿ. ಅವನಿಗೆ ರಾಜನು ತನ್ನ ಮಗಳನ್ನೂ ಯುವರಾಜಪದವಿಯನ್ನೂ ಕೊಡುವನು ಎಂದು ಎಲ್ಲ ಕಡೆಯಲ್ಲೂ ತಮಟೆಯನ್ನು ಬಾರಿಸಿ ಘೋಷಣೆಯನ್ನು ಮಾಡಲಾಯಿತು. ಎಷ್ಟೋ ಕಾಲ ಹೀಗೆ ಮಾಡಿದರೂ ಕನಕಪುರಿಯ ದರ್ಶನವನ್ನು ಮಾಡಿದ ಯಾವನೇ ಒಬ್ಬನೂ ಸಿಗಲಿಲ್ಲ.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಚತುರ್ದಾರಿಕಾಲಂಬಕದಲ್ಲಿ

ಮೊದಲನೆಯ ತರಂಗವು ಮುಗಿಯಿತು.

---

ಯೋ ವಿಪ್ರಃ ಕ್ಷತ್ರಿಯೋ ವಾ ನನು ಕನಕಪುರೀಂ ದೃಷ್ಟವಾನ್ ಸೋಽಭಿಧತ್ತಾಂ
ತಸ್ಮೈ ರಾಜಾ ಕಿಲ ಸ್ವಾಂ ವಿತರತಿ ತನಯಾಂ ಯೌವರಾಜ್ಯೇನ ಸಾಕಮ್ ।
ಸರ್ವತ್ರಾಘೋಷ್ಯತೈವಂ ಪುನರಪಿ ಪಟಹಾನಂತರಂ ಚಾತ್ರ ಶಶ್ವ-
ನ್ನ ತ್ವೇಕಃ ಕೋಽಪಿ ತಾವತ್ ಕೃತಕನಕಪುರೀದರ್ಶನೋ ಲಭ್ಯತೇಸ್ಮ ॥ ೨೩೩

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಚತುರ್ದಾರಿಕಾಲಂಬಕೇ ಪ್ರಥಮಸ್ತರಂಗಃ

## ಎರಡನೆಯ ತರಂಗ

೧ ಈ ಮಧ್ಯದಲ್ಲಿ ತನಗೆ ಇಷ್ಟವಾಗಿದ್ದ ಅರಸುಕುವರಿಯಿಂದ ಅಪಮಾನಕ್ಕೆ ಈಡಾಗಿದ್ದ ಬ್ರಾಹ್ಮಣತರುಣ ಶಕ್ತಿದೇವನು ಮನಸ್ಸಿನಲ್ಲಿ ಬೇಸರಪಟ್ಟುಕೊಂಡು ಚಿಂತಿಸತೊಡಗಿದನು.

೨. ಇಲ್ಲಿ ನಾನು ಸುಳ್ಳು ಸುಳ್ಳಾಗಿ ಕನಕಪುರಿಯನ್ನು ನೋಡಿದ್ದೇನೆಂದು ಹೇಳಿದುದರಿಂದ ನನಗೆ ಅವಮಾನ ಸಿಕ್ಕಿತೇ ವಿನಾ ಅರಸುಕುವರಿ ಸಿಗಲಿಲ್ಲ.

೩. ಆದ್ದರಿಂದ ಅವಳ ಪ್ರಾಪ್ತಿಗೋಸ್ಕರ ನಾನು ಆ ನಗರವನ್ನಾದರೂ ನೋಡಬೇಕು, ಅಥವಾ ನನ್ನ ಪ್ರಾಣ ಹೋಗಬೇಕು. ಅಲ್ಲಿಯವರೆಗೂ ನಾನು ಭೂಮಿಯಲ್ಲಿ ಅಲೆಯಬೇಕು.

೪. ಆ ಪಟ್ಟಣವನ್ನು ನೋಡಿ ಅದರ ಪಣದ ಮೇಲೆ ಗೆಲ್ಲಬಹುದಾದ ಈ ರಾಜಕುಮಾರಿಯನ್ನು ನಾನು ಪಡೆದುಕೊಳ್ಳದೆ ಹೋದರೆ ನನ್ನ ಬದುಕಿನ ಫಲವೇನು?

---

## ದ್ವಿತೀಯಸ್ತರಂಗಃ

ಅತ್ರಾಂತರೇ ದ್ವಿಜಯುವಾ ಶಕ್ತಿದೇವಃ ಸ ದುರ್ಮನಾಃ ।
ಅಚಿಂತಯದಭಿಪ್ರೇತರಾಜಕನ್ಯಾವಮಾನಿತಃ ॥ ೧
ಮಯೇಹ ಮಿಥ್ಯಾಕನಕಪುರೀದರ್ಶನವಾದಿನಾ ।
ವಿಮಾನನಾ ಪರಂ ಪ್ರಾಪ್ತಾ ನ ತ್ವಸೌ ರಾಜಕನ್ಯಕಾ ॥ ೨
ತದೇತತ್ ಪ್ರಾಪ್ತಯೇ ತಾವದ್ ಭ್ರಮಣೀಯಾ ಮಹೀ ಮಯಾ ।
ಯಾವತ್ ಸಾ ನಗರೀ ದೃಷ್ಟಾ ಪ್ರಾಣೈರ್ವಾಪಿ ಗತಂ ಮಮ ॥ ೩
ತಾಂ ಹಿ ದೃಷ್ಟ್ವಾ ಪುರೀಮೇತ್ಯ ತತ್ಪಣೋಪಾರ್ಜಿತಾಂ ನ ಚೇತ್ ।
ಲಭೇಯ ರಾಜತನಯಾಮೇನಾಂ ಕಿಂ ಜೀವಿತೇನ ತತ್ ॥ ೪

೫ ಹೀಗೆ ಪ್ರತಿಜ್ಞೆಯನ್ನು ಮಾಡಿ ಆ ಬ್ರಾಹ್ಮಣನು ವರ್ಧಮಾನಪುರದಿಂದ ಹೊರಟು ತೆಂಕಣ ದಿಕ್ಕನ್ನು ಹಿಡಿದು ನಡೆದನು.

೬ ಕ್ರಮವಾಗಿ ಹೋಗುತ್ತಾ ಅವನು ವಿಂಧ್ಯಮಹಾರಣ್ಯವನ್ನು ತಲುಪಿದನು. ತನ್ನ ಆಸೆಯಂತೆಯೇ ದಟ್ಟವೂ ವಿಶಾಲವೂ ಆಗಿದ್ದ ಆ ಕಾಡಿನೊಳಗೆ ಅವನು ಹೊಕ್ಕನು.

೭ ಅಲ್ಲಿ ಗಾಳಿಯು ಮರಗಳ ಮೃದುವಾದ ತಳಿರುಗಳನ್ನು ಅಲುಗಾಡಿಸುತ್ತಿದ್ದು, ಅದು ಸೂರ್ಯನ ಕಿರಣಗಳ ರಾಶಿಗಳಿಂದ ಬಿಸಿಯಾದ ತನ್ನ ಶರೀರವನ್ನು ಆ ತಳಿರುಗಳಿಂದ ಆ ವಿಂಧ್ಯಾಟವಿ ಬೀಸಿಕೊಳ್ಳುತ್ತಿರುವಂತಿತ್ತು.

೮ ಸಿಂಹ ಮೊದಲಾದವು ಕೊಲ್ಲುತ್ತಿದ್ದ ಮೃಗಗಳ ತೀವ್ರವಾದ ಶಬ್ದಗಳು ಅಲ್ಲಿ ಕೇಳಿ ಬರುತ್ತಿದ್ದು, ದೊಡ್ಡ ಕಳ್ಳರಿಂದಾದ ಸೋಲಿನ ದುಃಖದಿಂದ ಹಗಲೂ ಇರುಳೂ ಆ ವಿಂಧ್ಯಾಟವಿ ಕಿರುಚುತ್ತಿರುವಂತೆ ಇತ್ತು.

೯. ತನಗೆ ಇಷ್ಟ ಬಂದಂತೆ ಮೇಲೆ ಹಾರುತ್ತಿದ್ದ ನೀರಿಲ್ಲದ ನೆಲಗಳ ಕಿರಣಗಳಿಂದ ಆ ವಿಂಧ್ಯಾಟವಿಯು ಸೂರ್ಯನ ಅತಿ ಉಗ್ರವಾದ ತೇಜಸ್ಸುಗಳನ್ನು ಗೆಲ್ಲಲು ಇಚ್ಛಿಸುವಂತಿತ್ತು

೧೦. ಅಲ್ಲಿ ನೀರಿಲ್ಲದಿದ್ದರೂ ಆಪತ್ತುಗಳು ಸದಾ ಸಿದ್ಧವಾಗಿರುತ್ತಿದ್ದವು. ಸತತವಾಗಿ ದಾಟುತ್ತಿದ್ದರೂ ಅಲ್ಲಿ ನೆಲ ದೂರವಾಗುತ್ತಿತ್ತು.

---

ಏವಂ ಕೃತಪ್ರತಿಜ್ಞಃ ಸನ್ ವರ್ಧಮಾನಪುರಾತ್ತತಃ ।
ದಕ್ಷಿಣಾಂ ದಿಶಮಾಲಂಬ್ಯ ಸ ಪ್ರತಸ್ಥೇ ತದಾ ದ್ವಿಜಃ ॥ ೫
ಕ್ರಮೇಣ ಗಚ್ಛಂಶ್ಚ ಪ್ರಾಪ ಸೋಽಥ ವಿಂಧ್ಯಮಹಾಟವೀಮ್ ।
ವಿವೇಶ ಚ ನಿಜಾಂ ವಾಂಛಾಮಿವ ತಾಂ ಗಹನಾಯತಾಮ್ ॥ ೬
ತಸ್ಯಾಂ ಚ ಮಾರುತಾಧೂತಮೃದುಪಾದಪಪಲ್ಲವೈಃ ।
ವೀಜಯಂತ್ಯಾಮಿವಾತ್ಮಾನಂ ತಪ್ತಮರ್ಕಕರೋತ್ಕರೈಃ ॥ ೭
ಭೂರಿಚೌರಪರಾಭೂತಿದುಃಖಾದಿವ ದಿವಾನಿಶಮ್ ।
ಕ್ರೋಶಂತ್ಯಾಂ ತೀವ್ರಸಿಂಹಾದಿಹನ್ಯಮಾನಮೃಗಾರವೈಃ ॥ ೮
ಸ್ವಚ್ಛಂದೋಚ್ಚಲದುದ್ದಾಮಮಹಾಮರುಮರೀಚಿಭಿಃ ।
ಜಿಗೀಷಂತ್ಯಾಮಿವಾತ್ಯುಗ್ರಾಣ್ಯಪಿ ತೇಜಾಂಸಿ ಭಾಸ್ವತಃ ॥ ೯
ಜಲಸಂಗತಿಹೀನಾಯಾಮಪ್ಯಹೋ ಸುಲಭಾಪದಿ ।
ಸತತೋಲ್ಲಂಘ್ಯಮಾನಾಯಾಮಪಿ ದೂರೀಭವದ್ಭುವಿ ॥ ೧೦

೧೧. ಅನೇಕ ದಿನಗಳಲ್ಲಿ ಬಹಳ ದೂರವನ್ನು ದಾಟಿ ಆ ಶಕ್ತಿದೇವನು ಒಂದು ರಹಸ್ಯ ಸ್ಥಳದಲ್ಲಿದ್ದ, ತಂಪಾದ ಶುದ್ಧನೀರಿನಿಂದ ತುಂಬಿದ್ದ ದೊಡ್ಡ ಸರೋವರವನ್ನು ಕಂಡನು.

೧೨. ಬೆಳ್ದಾವರೆಗಳು ಅದರ ಮೇಲೆತ್ತಿದ ಕೊಡೆ ; ಹೊಳೆಯುತ್ತಿದ್ದ ಹಂಸಗಳು ಅದರ ಚಾಮರ. ಹೀಗೆ ಆ ಸರೋವರವು ಎಲ್ಲ ಸರಸ್ಸುಗಳ ರಾಜನಂತೆ ಶೋಭಿಸುತ್ತಿತ್ತು.

೧೩. ಅವನು ಅದರಲ್ಲಿ ಸ್ನಾನಾದಿಗಳನ್ನು ಮಾಡಿ ಅದರ ಉತ್ತರ ಭಾಗದಲ್ಲಿ ಹಣ್ಣುಗಳಿಂದ ತುಂಬಿದ್ದ ದಟ್ಟವಾದ ಮರಗಳಿದ್ದ ಆಶ್ರಮ ಪ್ರದೇಶವನ್ನು ನೋಡಿದನು.

೧೪. ಅಲ್ಲಿ ಅರಳಿಮರದ ಬುಡದ ಬಳಿ ಕುಳಿತಿದ್ದ, ತಪಸ್ವಿಗಳಿಂದ ಸುತ್ತುವರಿಯಲ್ಪಟ್ಟಿದ್ದ ಸೂರ್ಯತಪಸ್ ಎಂಬ ಹೆಸರಿನ ವೃದ್ಧ ಮುನಿಯನ್ನು ಕಂಡನು.

೧೫. ಮುಪ್ಪಿನಿಂದ ಬೆಳ್ಳಗಾಗಿದ್ದ ಅವನ ಕಿವಿಗಳ ಮೇಲೆ ಕುಳಿತಿದ್ದ ಜಪಮಾಲೆಯಿಂದ ಆ ಮುನಿಯು ಶೋಭಿಸುತ್ತಿದ್ದನು. ಆ ಮಾಲೆಯು ಅವನ ವಯಸ್ಸಾದ ನೂರು ವರ್ಷಗಳ ಸಂಖ್ಯೆಯನ್ನು ಕೂಡಿಸಿ ಮಾಡಿದಂತಿತ್ತು.

೧೬. ನಮಸ್ಕಾರಪೂರ್ವಕವಾಗಿ ಸುಖದೇವನು ಆ ಮುನಿಯ ಬಳಿಗೆ ಹೋದನು. ಆ ಮುನಿಯೂ ಅತಿಥಿಸತ್ಕಾರದಿಂದ ಅವನನ್ನು ಅಭಿನಂದಿಸಿದನು.

---

ದಿವಸೈರ್ದೂರಮಧ್ವಾನಮತಿಕ್ರಮ್ಯ ದದರ್ಶ ಸಃ ।
ಏಕಾಂತೇ ಶೀತಲಸ್ವಚ್ಛಸಲಿಲಂ ಸುಮಹತ್ ಸರಃ ॥ ೧೧

ಪುಂಡರೀಕೋಚ್ಛ್ರಿತಚ್ಛತ್ರಂ ಪ್ರೋಲ್ಲಸದ್ಧಂಸಚಾಮರಮ್ ।
ಕುರ್ವಾಣಮಿವ ಸರ್ವೇಷಾಂ ಸರಸಾಮಧಿರಾಜತಾಮ್ ॥ ೧೨

ತಸ್ಮಿನ್ ಸ್ನಾನಾದಿ ಕೃತ್ವಾ ಚ ತತ್ಪಾರ್ಶ್ವೇ ಪುನರುತ್ತರೇ ।
ಅಪಶ್ಯದಾಶ್ರಮಪದಂ ಸಫಲಸ್ನಿಗ್ಧಪಾದಪಮ್ ॥ ೧೩

ತತ್ರಾಶ್ವತ್ಥತರೋರ್ಮೂಲೇ ನಿಷಣ್ಣಂ ತಾಪಸೈರ್ವೃತಮ್ ।
ಸ ಸೂರ್ಯತಪಸಂ ನಾಮ ಸ್ಥವಿರಂ ಮುನಿಮೈಕ್ಷತ ॥ ೧೪

ಸ್ವವಯೋಽಬ್ದಶತಗ್ರಂಥಿಸಂಖ್ಯಯೇವಾಕ್ಷಮಾಲಯಾ ।
ಜರಾಧವಲಕರ್ಣಾಗ್ರಸಂಶ್ರಯಿಣ್ಯಾ ವಿರಾಜಿತಮ್ ॥ ೧೫

ಪ್ರಣಾಮಪೂರ್ವಕಂ ತಂ ಚ ಮುನಿಮಭ್ಯಾಜಗಾಮ ಸಃ ।
ತೇನಾಪ್ಯತಿಥಿಸತ್ಕಾರೈರ್ಮುನಿನಾ ಸೋಽಭ್ಯನಂದ್ಯತ ॥ ೧೬

೧೭ ಹಣ್ಣು ಇತ್ಯಾದಿಗಳನ್ನು ಅವನಿಗೂ ಹಂಚಿ ಅನಂತರ ಆ ಮುನಿಯು ಅವನನ್ನು "ಭದ್ರ, ಎಲ್ಲಿಂದ ಬಂದಿರುವೆ ? ಎಲ್ಲಿಗೆ ಹೋಗುತ್ತಿರುವೆ ? ಹೇಳು" ಎಂದು ಕೇಳಿದನು.

೧೮-೧೯. ಶಕ್ತಿದೇವನು ವಿನಯದಿಂದ ತಗ್ಗಿ "ಭಗವನ್, ನಾನು ವರ್ಧಮಾನ ಪುರದಿಂದ ಬಂದಿದ್ದೇನೆ. ಒಂದು ಪ್ರತಿಜ್ಞೆಯನ್ನು ಮಾಡಿ ಕನಕಪುರಿಗೆ ಹೋಗಲು ತೊಡಗಿದ್ದೇನೆ. ಆದರೆ ಆ ನಗರವು ಎಲ್ಲಿದೆಯೋ ನನಗೆ ತಿಳಿಯದು. ನಿಮಗೆ ತಿಳಿದಿದ್ದರೆ ಹೇಳಬೇಕು" ಎಂದು ಆ ಮುನಿಗೆ ಹೇಳಿದನು.

೨೦. "ವತ್ಸ, ಈ ಆಶ್ರಮದಲ್ಲಿ ನನಗೆ ಎಂಟುನೂರು ವರ್ಷಗಳು ಕಳೆದವು. ಆ ನಗರದ ಹೆಸರನ್ನೂ ನಾನು ಕೇಳಿಲ್ಲ"

೨೧. ಎಂದು ಆ ಮುನಿಯು ಹೇಳಿದಾಗ ಸುಖದೇವನು ವಿಷಣ್ಣನಾದನು. ಆಮೇಲೆ "ಹಾಗಾದರೆ ಈ ಭೂಮಿಯನ್ನು ಸುತ್ತುತ್ತಾ ನಾನು ಸತ್ತು ಹೋಗುತ್ತೇನೆ" ಎಂದು ನುಡಿದನು.

೨೨. (ಅವನಿಂದ) ಕ್ರಮವಾಗಿ ವಿಷಯವನ್ನು ತಿಳಿದ ಆ ಮುನಿಯು ಹೀಗೆ ಹೇಳಿದನು. "ನಿನಗೆ ನಿಶ್ಚಯವಿದ್ದರೆ ನಾನು ಏನು ಹೇಳುವೆನೋ ಅದನ್ನು ಮಾಡು.

---

ಅಪೃಚ್ಛ್ಯತ ಚ ತೇನೈವ ಸಂವಿಭಜ್ಯ ಫಲಾದಿಭಿಃ ।
ಕುತಃ ಪ್ರಾಪ್ತೋಽಸಿ ಗಂತಾಸಿ ಕ್ವ ಚ ಭದ್ರೋಚ್ಯತಾಮಿತಿ ॥ ೧೭
ವರ್ಧಮಾನಪುರಾತ್ತಾವದ್ ಭಗವನ್ನಹಮಾಗತಃ ।
ಗಂತುಂ ಪ್ರವೃತ್ತಃ ಕನಕಪುರೀಮಸ್ಮಿ ಪ್ರತಿಜ್ಞಯಾ ॥ ೧೮
ನ ಜಾನೇ ಕ್ವ ಭವೇತ್ ಸಾ ತು ಭಗವಾನ್ ವಕ್ತು ವೇತ್ತಿ ಚೇತ್ ।
ಇತಿ ತಂ ಶಕ್ತಿದೇವೋಽಪಿ ಸ ಪ್ರಹ್ವೋ ಮುನಿಮಭ್ಯಧಾತ್ ॥ ೧೯
ವತ್ಸ ವರ್ಷಶತಾನ್ಯಷ್ಟೌ ಮಮಾಶ್ರಮಪದೇ ತ್ವಿಹ ।
ಅತಿಕ್ರಾಂತಾನಿ ನ ಚ ಸಾ ಶ್ರುತಾಪಿ ನಗರೀ ಮಯಾ ॥ ೨೦
ಇತಿ ತೇನಾಪಿ ಮುನಿನಾ ಗದಿತಃ ಸ ವಿಷಾದವಾನ್ ।
ಪುನರೇವಾಬ್ರವೀತರ್ಹಿ ಮೃತೋಽಸ್ಮಿ ಕ್ಷ್ಮಾಂ ಭ್ರಮನ್ನಿಹ ॥ ೨೧
ತತಃ ಕ್ರಮೇಣ ಜ್ಞಾತಾರ್ಥಃ ಸ ಮುನಿಸ್ತಮಭಾಷತ ।
ಯದಿ ತೇ ನಿಶ್ಚಯಸ್ತರ್ಹಿ ಯದಹಂ ವಚ್ಮಿ ತತ್ಕುರು ॥ ೨೨

೨೩. ಇಲ್ಲಿಂದ ಮೂರು ನೂರು ಯೋಜನ ದೂರದಲ್ಲಿ ಕಾಂಪಿಲ್ಯ ಎಂಬ ದೇಶವಿದೆ. ಅದರಲ್ಲಿ ಉತ್ತರ ಎಂಬ ಬೆಟ್ಟವಿದೆ. ಅದರ ಮೇಲೆ ಆಶ್ರಮವೊಂದಿದೆ.

೨೪. ದೀರ್ಘತಪಸ್ ಎಂಬ ಹೆಸರಿನ ನನ್ನ ಪೂಜ್ಯ ಅಣ್ಣನು ಅಲ್ಲಿದ್ದಾನೆ. ಅವನ ಬಳಿಗೆ ಹೋಗು. ಒಂದು ವೇಳೆ ಆ ವೃದ್ಧನಿಗೆ ಆ ನಗರ ಗೊತ್ತಿರಬಹುದು."

೨೫. ಇದನ್ನು ಕೇಳಿ ಹಾಗೇ ಆಗಲಿ ಎಂದು ಆಸಕ್ತಿ ಕೆರಳಿ ಶಕ್ತಿದೇವನು ಆ ರಾತ್ರಿಯನ್ನು ಅಲ್ಲೇ ಕಳೆದು ಬೆಳಗಾದ ಮೇಲೆ ಬೇಗನೆ ಅಲ್ಲಿಂದ ಹೊರಟನು.

೨೬. ಕಷ್ಟಪಟ್ಟು ನೂರಾರು ದುರ್ಗಮದೇಶಗಳನ್ನು ದಾಟಿ ಬಹುಕಾಲಾನಂತರ ಆ ಕಾಂಪಿಲ್ಯದೇಶಕ್ಕೆ ತಲುಪಿ ಅಲ್ಲಿದ್ದ ಉತ್ತರ ಎಂಬ ಬೆಟ್ಟವನ್ನು ಏರಿದನು.

೨೭. ಅಲ್ಲಿ ಆಶ್ರಮವಾಸಿಯಾಗಿದ್ದ ದೀರ್ಘತಪಸ್ ಎಂಬ ಮುನಿಯನ್ನು ನೋಡಿ, ನಮಸ್ಕರಿಸಿ, ಸಮೀಪಿಸಿದನು. ಸಂತೋಷದಿಂದ ಆ ಮುನಿಯು ಅವನಿಗೆ ಅತಿಥಿಸತ್ಕಾರವನ್ನು ಮಾಡಿದನು.

೨೮. "ರಾಜಪುತ್ರಿಯು ಹೇಳಿದ ಕನಕಪುರಿಯನ್ನು ನೋಡಲು ಹೊರಟಿದ್ದೇನೆ. ಭಗವನ್ ! ಆ ನಗರವು ಎಲ್ಲಿದೆ ಎಂಬುದು ನನಗೆ ತಿಳಿಯದು' ಎಂದು (ಶಕ್ತಿದೇವನು) ವಿಜ್ಞಾಪಿಸಿಕೊಂಡನು.

೨೯. "ನಾನು ಅವಶ್ಯವಾಗಿ ಆ ನಗರಕ್ಕೆ ಹೋಗಲೇಬೇಕು. ಅದು ನನಗೆ ಸಿಗುವಂತಾಗಲು ಸೂರ್ಯತಪಸ್ ಮುನಿಯು ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು.'

---

ಅಸ್ತಿ ಕಾಂಪಿಲ್ಯವಿಷಯೋ ಯೋಜನಾನಾಂ ಶತೇಷ್ವಿತಃ ।
ತ್ರಿಷು ತತ್ರೋತ್ತರಾಖ್ಯಶ್ಚ ಗಿರಿಸ್ತತ್ರಾಪಿ ಚಾಶ್ರಮಃ ॥ ೨೩
ತತ್ರಾರ್ಯೋಽಸ್ತಿ ಮಮ ಭ್ರಾತಾ ಜ್ಯೇಷ್ಠೋ ದೀರ್ಘತಪಾ ಇತಿ ।
ತತ್ಪಾರ್ಶ್ವಂ ವ್ರಜ ಜಾನೀಯಾತ್ ಸ ವೃದ್ಧೋ ಜಾತು ತಾಂ ಪುರೀಮ್ ॥ ೨೪
ಏತಚ್ಛ್ರುತ್ವಾ ತಥೇತ್ಯುಕ್ತ್ವಾ ಜಾತಾಸ್ಥಸ್ತತ್ರ ತಾಂ ನಿಶಾಮ್ ।
ನೀತ್ವಾ ಪ್ರತಸ್ಥೇ ಸ ಪ್ರಾತಃ ಶಕ್ತಿದೇವೋ ದ್ರುತಂ ತತಃ ॥ ೨೫
ಕ್ಲೇಶಾತಿಕ್ರಾಂತಕಾಂತಾರಶತಶ್ಚಾಸಾದ್ಯ ತಂ ಚಿರಾತ್ ।
ಕಾಂಪಿಲ್ಯವಿಷಯಂ ತಸ್ಮಿನ್ನಾರುರೋಹೋತ್ತರೇ ಗಿರೌ ॥ ೨೬
ತತ್ರ ತಂ ದೀರ್ಘತಪಸಂ ಮುನಿಮಾಶ್ರಮವರ್ತಿನಮ್ ।
ದೃಷ್ಟ್ವಾ ಪ್ರಣಮ್ಯ ಚ ಪ್ರೀತಃ ಕೃತಾತಿಥ್ಯಮುಪಾಯಯೌ ॥ ೨೭
ವ್ಯಜಿಜ್ಞಪಚ್ಚ ಕನಕಪುರೀಂ ರಾಜಸುತೋದಿತಾಮ್ ।
ಪ್ರಸ್ಥಿತೋಽಹಂ ನ ಜಾನಾಮಿ ಭಗವನ್ ಕ್ವಾಸ್ತಿ ಸಾ ಪುರೀ ॥ ೨೮
ಸಾ ಚ ಮೇಽವಶ್ಯಗಂತವ್ಯಾ ತತಸ್ತದುಪಲಬ್ಧಯೇ ।
ಋಷಿಣಾ ಸೂರ್ಯತಪಸಾ ಪ್ರೇಷಿತೋಽಸ್ಮಿ ತವಾಂತಿಕಮ್ ॥ ೨೯

೩೦. ಹೀಗೆ ಹೇಳಿದ ಶಕ್ತಿದೇವನಿಗೆ ಆ ಮುನಿಯು ಹೇಳಿದನು. "ಮಗನೆ, ಇಷ್ಟು ವಯಸ್ಸಾದ ಮೇಲೆ ಈಗ ಇಂದು ಆ ನಗರದ ಹೆಸರನ್ನು ಕೇಳಿದೆನು.

೩೧. ಬೇರೆ ಬೇರೆ ದೇಶಗಳಿಂದ ಬಂದ ಎಷ್ಟು ಜನರೊಡನೆ ನನಗೆ ಪರಿಚಯವಾಗಿಲ್ಲ ? ಆದರೆ ಅದರ ಬಗೆಗೆ ನಾನು ಕೇಳಿಲ್ಲ. ಅದರ ದರ್ಶನವಂತೂ ದೂರದಲ್ಲೇ (ಉಳಿಯಿತು).

೩೨. ಇಷ್ಟಂತೂ ನನಗೆ ಖಚಿತವಾಗಿ ಗೊತ್ತು. ಆ ನಗರ ಯಾವುದೋ ದೂರದ ದ್ವೀಪದಲ್ಲಿ ಇರಬೇಕು. ಅದಕ್ಕೂ ನಿನಗೊಂದು ಉಪಾಯವನ್ನು ಹೇಳುತ್ತೇನೆ.

೩೩. ಕಡಲಿನ ಮಧ್ಯದಲ್ಲಿ ಉತ್ಥಲ ಎಂಬ ಹೆಸರಿನ ದ್ವೀಪವಿದೆ. ಅಲ್ಲಿ ಧನಿಕನಾದ ಸತ್ಯವ್ರತನೆಂಬ ಬೇಡರ ದೊರೆ ಇದ್ದಾನೆ.

೩೪. ಅವನು ಬೇರೆ ಬೇರೆ ದ್ವೀಪಗಳಿಗೂ ಹೋಗಿಬರುತ್ತಿರುತ್ತಾನೆ. ಅವನು ಆ ಕನಕಪುರಿಯನ್ನು ನೋಡಿರಬಹುದು ಅಥವಾ ಅದರ ಬಗೆಗೆ ಕೇಳಿರಬಹುದು.

೩೫. ಆದ್ದರಿಂದ ನೀನು ಮೊದಲು ಕಡಲಿನ ತೀರದಲ್ಲಿ ಸ್ಥಿರವಾಗಿ ಸ್ಥಾಪಿಸಲ್ಪಟ್ಟಿರುವ ವಿಟಂಕಪುರ ಎಂಬ ಹೆಸರಿನ ನಗರಕ್ಕೆ ಹೋಗು.

೩೬. ಅಲ್ಲಿಂದ ಯಾವನಾದರೂ ವ್ಯಾಪಾರಿಯ ಜೊತೆಯಲ್ಲಿ ಹಡಗಿನಿಂದ ಬೇಡರ (ದೊರೆಯ) ಸ್ಥಾನವಾದ ದ್ವೀಪಕ್ಕೆ ನಿನ್ನ ಇಷ್ಟಸಿದ್ಧಿಗಾಗಿ ಹೋಗು."

---

ಇತ್ಯುಕ್ತವಂತಂ ತಂ ಶಕ್ತಿದೇವಂ ಸೋऽಪ್ಯಬ್ರವೀನ್ಮುನಿಃ ।
ಇಯತಾ ವಯಸಾ ಪುತ್ರ ಪುರೀ ಸಾದ್ಯ ಶ್ರುತಾ ಮಯಾ । ೩೦
ದೇಶಾಂತರಾಗತೈಃ ಕೈಃ ಕೈರ್ಜಾತಃ ಪರಿಚಯೋ ನ ಮೇ ।
ನ ಚ ತಾಂ ಶ್ರುತವಾನಸ್ಮಿ ದೂರೇ ತದ್ದರ್ಶನಂ ಪುನಃ ॥ ೩೧
ಜಾನಾಮ್ಯಹಂ ಚ ನಿಯತಂ ದವೀಯಸಿ ತಯಾ ಕ್ವಚಿತ್ ।
ಭಾವ್ಯಂ ದ್ವೀಪಾಂತರೇ ವತ್ಸ ತತ್ರೋಪಾಯಂ ಚ ವಚ್ಮಿ ತೇ ॥ ೩೨
ಅಸ್ತಿ ವಾರಿನಿಧೇರ್ಮಧ್ಯೇ ದ್ವೀಪಮುತ್ಥಲಸಂಜ್ಞಕಮ್ ।
ತತ್ರ ಸತ್ಯವ್ರತಾಖ್ಯೋऽಸ್ತಿ ನಿಷಾದಾಧಿಪತಿರ್ಧನೀ ॥ ೩೩
ತಸ್ಯ ದ್ವೀಪಾಂತರೇಷ್ವಸ್ತಿ ಸರ್ವೇಷ್ವಪಿ ಗತಾಗತಮ್ ।
ತೇನ ಸಾ ನಗರೀ ಜಾತು ಭವೇದ್ ದೃಷ್ಟಾ ಶ್ರುತಾಪಿ ವಾ ॥ ೩೪
ತಸ್ಮಾತ್ ಪ್ರಯಾಹಿ ಜಲಧೇರುಪಕಂಠಪ್ರತಿಷ್ಠಿತಮ್ ।
ನಗರಂ ಪ್ರಥಮಂ ತಾವದ್ ವಿಟಂಕಪುರಸಂಜ್ಞಕಮ್ ॥ ೩೫
ತತಃ ಕೇನಾಪಿ ವಣಿಜಾ ಸಮಂ ಪ್ರವಹಣೇನ ತತ್ ।
ನಿಷಾದಸ್ಯಾಸ್ಪದಂ ಗಚ್ಛ ದ್ವೀಪಂ ತಸ್ಯೇಷ್ಟಸಿದ್ಧಯೇ ॥ ೩೬

೩೭ ಹೀಗೆ ಮುನಿಯು ಹೇಳಿದಾಗ ಶಕ್ತಿದೇವನು ಹಾಗೆಯೇ ಮಾಡುತ್ತೇನೆ ಎಂದು ಹೇಳಿ ಆ ಕ್ಷಣದಲ್ಲೇ ಆ ಋಷಿಗೆ ಬೀಳ್ಕೊಡುಗೆಯನ್ನು ಹೇಳಿ ಆ ಆಶ್ರಮದಿಂದ ಹೊರಟುಬಿಟ್ಟನು.

೩೮. ಕಾಲ ಕಳೆಯುತ್ತಿದ್ದಂತೆ ಅವನು ಅನೇಕ ದೇಶಗಳನ್ನು ತಲುಪಿ ಅವುಗಳನ್ನು ದಾಟಿ ಕ್ರೋಶಗಳನ್ನು ಮೀರಿ ಕಡಲಿನ ತೀರದ ತಿಲಕದಂತಿದ್ದ ಆ ವಿಟಂಕಪುರಕ್ಕೆ ತಲುಪಿದನು.

೩೯. ಅಲ್ಲಿ ಸಮುದ್ರದತ್ತನೆಂಬ ವ್ಯಾಪಾರಿಯು ಉತ್ಪಲ ದ್ವೀಪಕ್ಕೆ ಹೊರಟಿದ್ದನು. ಅವನನ್ನು ಹುಡುಕಿ ಶಕ್ತಿದೇವನು ಅವನೊಡನೆ ಗೆಳೆತನವನ್ನು ಬೆಳೆಸಿದನು.

೪೦. ಅವನೊಡನೆ ಅವನ ಹಡಗನ್ನು ಹತ್ತಿ ಅವನ ಪ್ರೀತಿಯನ್ನೇ ಪೂರ್ಣವಾದ ಬುತ್ತಿಯಾಗಿ ಮಾಡಿಕೊಂಡು ಕಡಲದಾರಿಯಿಂದ ಮುಂದೆ ಹೊರಟನು.

೪೧. (ಉತ್ಪಲದ್ವೀಪವನ್ನು ಸೇರಲು) ಇನ್ನು ಸ್ವಲ್ಪ ಮಾತ್ರ ದೂರ ಉಳಿದಿದ್ದಾಗ ಅನಿರೀಕ್ಷಿತವಾಗಿ ಮಿಂಚಿನ ಬಳ್ಳಿಯನ್ನೇ ನಾಲಿಗೆಯಾಗಿ ಹೊಂದಿದ್ದ ಕಪ್ಪುಬಣ್ಣದ ಪರ್ಜನ್ಯರಾಕ್ಷಸನು ಗರ್ಜಿಸುತ್ತಾ ಎದುರಿಗೆ ಎದ್ದುನಿಂತನು.

೪೨. ಭಯಂಕರವಾದ ಬಿರುಗಾಳಿಯು ವಿಧಿಯ ಕಾರ್ಯದಂತೆ ಹಗುರವಾದ ಪದಾರ್ಥಗಳನ್ನು ಮೇಲೆ ಎತ್ತುತ್ತಾ, ಭಾರವುಳ್ಳವುಗಳನ್ನು ಕೆಳಗೆ ಬೀಳಿಸುತ್ತಾ ಬೀಸಿತು.

---

ಇತ್ಯುಕ್ತಸ್ತೇನ ಮುನಿನಾ ಶಕ್ತಿದೇವಃ ಸ ತತ್ಕ್ಷಣಮ್ ।
ತಥೇತ್ಯುಕ್ತ್ವಾ ತಮಾಮಂತ್ರ್ಯ ಪ್ರಯಾತಿ ಸ್ಮ ತದಾಶ್ರಮಾತ್ ॥ ೩೭
ಕಾಲೇನ ಪ್ರಾಪ್ಯ ಚೋಲ್ಲಂಘ್ಯ ದೇಶಾನ್ ಕ್ರೋಶಾನ್ ಮಹಂಶ್ಚ ಸಃ ।
ವಾರಿಧೇಸ್ತೀರತಿಲಕಂ ತದ್ವಿಟಂಕಪುರಂ ಪರಮ್ ॥ ೩೮
ತಸ್ಮಿನ್ ಸಮುದ್ರದತ್ತಾಖ್ಯಮುತ್ಪಲದ್ವೀಪಯಾಯಿನಮ್ ।
ಅನ್ವಿಷ್ಯ ವಣಿಜಂ ತೇನ ಸಹ ಸಖ್ಯಂ ಚಕಾರ ಸಃ ॥ ೩೯
ತದೀಯಂ ಯಾನಪಾತ್ರಂ ಚ ಸಮಂ ತೇನಾಧಿರುಹ್ಯ ಸಃ ।
ತತ್ಪ್ರೀತಿಪೂರ್ಣಪಾಥೇಯಃ ಪ್ರತಸ್ಥೇಽಂಬುಧಿವರ್ತ್ಮನಾ ॥ ೪೦
ತತೋಽಲ್ಪದೇಶೇ ಗಂತವ್ಯೇ ಸಮುತ್ತಸ್ಥಾವಶಂಕಿತಮ್ ।
ಕಾಲೋ ವಿದ್ಯುಲ್ಲತಾಜಿಹ್ವೋ ಗರ್ಜನ್ ಪರ್ಜನ್ಯರಾಕ್ಷಸಃ ॥ ೪೧
ಲಘೂನುನ್ನಮಯನ್ ಭಾವಾನ್ ಗುರೂನಪ್ಯವಪಾತಯನ್ ।
ವವೌ ವಿಧೇರಿವಾರಂಭಃ ಪ್ರಚಂಡಶ್ಚ ಪ್ರಭಂಜನಃ ॥ ೪೨

೪೩. ಗಾಳಿಯು ಎಬ್ಬಿಸಿದ ದೊಡ್ಡ ಅಲೆಗಳು, ತಮ್ಮ ಆಸರೆಗೆ ಉಂಟಾದ ಅಪಮಾನದಿಂದ ಕೋಪಿಸಿಕೊಂಡು ಮೇಲೆದ್ದ ರೆಕ್ಕೆಗಳುಳ್ಳ ಬೆಟ್ಟಗಳಂತೆ ಎದ್ದೆದ್ದು ಬಂದುವು.

೪೪. ಆ ಹಡಗು ಒಂದು ಕ್ಷಣ ಮೇಲಕ್ಕೆ ಒಂದು ಕ್ಷಣ ಕೆಳಕ್ಕೆ ಹೋಗುತ್ತಿತ್ತು. ಹಣವಂತರಿಗೆ ಸರದಿಯ ಪ್ರಕಾರ ಉಂಟಾಗುವ ಏಳುಬೀಳುಗಳನ್ನು ಅದು ತೋರಿಸುತ್ತಿರುವಂತಿತ್ತು.

೪೫. ಮತ್ತೊಂದು ಕ್ಷಣದಲ್ಲಿ ಆ ಹಡಗು ವ್ಯಾಪಾರಿಗಳ ಅಳುವಿನ ಕೂಗುಗಳಿಂದ ಪೂರ್ಣವಾಗಿ ತುಂಬಿ ಅದರ ಭಾರದಿಂದಲೋ ಎಂಬಂತೆ ಎಗರಿ ಒಡೆದು ಹೋಯಿತು.

೪೬. ಹಡಗು ಒಡೆದು ಹೋದಾಗ ಅದರ ಒಡೆಯ ವ್ಯಾಪಾರಿಯು ಕಡಲಿನೊಳಗೆ ಬಿದ್ದನು. ಅವನು ಒಂದು ಹಲಗೆಯನ್ನು ಹತ್ತಿ ತುಂಬ ಸಮಯದ ನಂತರ ಇನ್ನೊಂದು ದೋಣಿಯನ್ನು ಹಿಡಿದುಕೊಂಡು ದಾಟಿಕೊಂಡನು.

೪೭. ಸಮುದ್ರದೊಳಕ್ಕೆ ಬೀಳುತ್ತಿದ್ದ ಶಕ್ತಿದೇವನನ್ನಾದರೋ ಒಂದು ದೊಡ್ಡ ಮೀನು ಗುಹೆಯಂತಿದ್ದ ತನ್ನ ಬಾಯಿಯನ್ನು ತೆರೆದು ಅವನ ಯಾವ ಅವಯವಕ್ಕೂ ಗಾಯವಾಗದಂತೆ ನುಂಗಿಬಿಟ್ಟಿತು.

೪೮. ಆ ದೊಡ್ಡಮೀನು ಸಮುದ್ರದ ಮಧ್ಯದಲ್ಲಿ ಸಂಚರಿಸುತ್ತಾ ವಿಧಿವಶದಿಂದ ಉತ್ಪಲದ್ವೀಪದ ಸಮೀಪಕ್ಕೆ ಹೋಯಿತು.

---

ವಾತಾಹತಾಶ್ಚ ಜಲಧೇರುದತಿಷ್ಠನ್ ಮಹೋರ್ಮಯಃ ।
ಆಶ್ರಯಾಭಿಭವಕ್ರೋಧಾದಿವ ಶೈಲಾಃ ಸಪಕ್ಷಕಾಃ ॥ ೪೩
ಯಯೌ ಚ ತತ್ ಪ್ರವಹಣಂ ಕ್ಷಣಮೂರ್ಧ್ವಮಧಃ ಕ್ಷಣಮ್ ।
ಉಚ್ಛ್ರಾಯಪಾತಪರ್ಯಾಯಂ ದರ್ಶಯದ್ ಧನಿನಾಮಿವ ॥ ೪೪
ಕ್ಷಣಾಂತರೇ ಚ ವಣಿಜಾಮಾಕ್ರಂದೈಸ್ತೀವ್ರಪೂರಿತಮ್ ।
ಭರಾದಿವ ತದುತ್ಪತ್ಯ ವಹನಂ ಸಮಭಜ್ಯತ ॥ ೪೫
ಭಗ್ನೇ ಚ ತಸ್ಮಿಂಸ್ತತ್‌ಸ್ವಾಮೀ ಸ ವಣಿಕ್ ಪತಿತೋಽಂಬುಧೌ ।
ತೀರ್ಣಶ್ಚ ಫಲಕಾರೂಢಃ ಪ್ರಾಪ್ಯಾನ್ಯದ್ವಹನಂ ಚಿರಾತ್ ॥ ೪೬
ಶಕ್ತಿದೇವಂ ಪತಂತಂ ತು ತಂ ವ್ಯಾತ್ತಮುಖಕಂದರಃ ।
ಅಪರಿಕ್ಷತಸರ್ವಾಂಗಂ ಮಹಾಮತ್ಸ್ಯೋ ನಿಗೀರ್ಣವಾನ್ ॥ ೪೭
ಸ ಚ ಮತ್ಸ್ಯೋಽಬ್ಧಿಮಧ್ಯೇನ ತತ್ಕಾಲಂ ಸ್ವೇಚ್ಛಯಾ ಚರನ್ ।
ಉತ್ಪಲದ್ವೀಪನಿಕಟಂ ಜಗಾಮ ವಿಧಿಯೋಗತಃ ॥ ೪೮

೪೯. ಅಲ್ಲಿ ಸುದೈವದಿಂದ ಆ ಮೀನನ್ನು ಅಲ್ಲಿನ ಬೆಸ್ತರ ಒಡೆಯನಾಗಿದ್ದ ಸತ್ಯವ್ರತನ (ಆಳುಗಳಾಗಿದ್ದ) ಮೀನುಗಾರರು ಹಿಡಿದರು.

೫೦. ತುಂಬದೊಡ್ಡ ಶರೀರದ ಆ ಮೀನನ್ನು ಆ ಮೀನುಗಾರರು ಕುತೂಹಲದಿಂದ ಎಳೆದುಕೊಂಡು ಕೂಡಲೇ ತಮ್ಮ ಒಡೆಯನ ಬಳಿಗೆ ಒಯ್ದರು.

೫೧. ಆ ಸತ್ಯವ್ರತನೂ ಅಂಥ ಮೀನನ್ನು ನೋಡಿ ಕುತೂಹಲದಿಂದ ತನ್ನ ಸೇವಕರಿಂದಲೇ ಅದನ್ನು ಕುಯ್ಯಿಸಿದನು.

೫೨. ಕತ್ತರಿಸಿದ ಮೀನಿನ ಹೊಟ್ಟೆಯಿಂದ, ಆಗಲೇ ಇನ್ನೊಂದು ಗರ್ಭವಾಸದ ವಿಸ್ಮಯವನ್ನು ಅನುಭವಿಸಿ ಜೀವಂತನಾಗಿದ್ದ ಶಕ್ತಿದೇವನು ಹೊರಗೆ ಬಂದನು.

೫೩. ಹೊರಗೆ ಬಂದ ಕೂಡಲೇ ಸ್ವಸ್ತಿಮಂತ್ರಗಳನ್ನು ಹೇಳಿದ ಯುವಕನನ್ನು ನೋಡಿ ಅಚ್ಚರಿಗೊಂಡ ಬೆಸ್ತರ (ರಾಜ) ಸತ್ಯವ್ರತನು ಕೇಳಿದನು.

೫೪. "ನೀನು ಯಾರು ? ಮೀನಿನ ಹೊಟ್ಟೆಯೊಳಗೆ ಮಲಗಿದ್ದುದು ಹೇಗೆ ? ಈ ಸ್ಥಿತಿ ನಿನಗೇಕೆ ಬಂತು ? ಬ್ರಹ್ಮನ್, ಅತ್ಯಂತ ಅದ್ಭುತವಾದ ನಿನ್ನ ಈ ವೃತ್ತಾಂತ ಯಾವುದು ?"

೫೫. ಅದನ್ನು ಕೇಳಿ ಶಕ್ತಿದೇವನು ಬೆಸ್ತರ ರಾಜನಿಗಿಂತೆಂದನು '"ವರ್ಧಮಾನಪುರದಿಂದ ಬಂದಿರುವ ನಾನು ಸತ್ಯದೇವನೆಂಬ ಬ್ರಾಹ್ಮಣ.

---

ತತ್ರ ತಸ್ಯೈವ ಕೈವರ್ತಪತೇಃ ಸತ್ಯವ್ರತಸ್ಯ ಸಃ ।
ಶಫರಗ್ರಾಹಿಭಿರ್ಭೃತ್ಯೈಃ ಪ್ರಾಪ್ಯ ದೈವಾದಗೃಹ್ಯತ ॥ ೪೯
ತೇ ಚ ತಂ ಸುಮಹಾಕಾಯಂ ನಿನ್ಯುರಾಕೃಷ್ಯ ಕೌತುಕಾತ್ ।
ತದೈವ ಧೀವರಾಸ್ತಸ್ಯ ನಿಜಸ್ಯ ಸ್ವಾಮಿನೋಽಂತಿಕಮ್ ॥ ೫೦
ಸೋಽಪಿ ತಂ ತಾದೃಶಂ ದೃಷ್ಟ್ವಾ ತೈರೇವ ಸಕುತೂಹಲಃ ।
ಪಾಠೀನಂ ಪಾಟಯಾಮಾಸ ಭೃತ್ಯೈಃ ಸತ್ಯವ್ರತೋ ನಿಜೈಃ ॥ ೫೧
ಪಾಟಿತಸ್ಯೋದರಾಜ್ಜೀವನ್ ಶಕ್ತಿದೇವೋಽಥ ತಸ್ಯ ಸಃ ।
ಅನುಭೂತಾಪರಾಶ್ಚರ್ಯಗರ್ಭವಾಸೋ ವಿನಿರ್ಯಯೌ ॥ ೫೨
ನಿರ್ಗತಂ ಚ ಕೃತಸ್ವಸ್ತಿಕಾರಂ ತಂ ಚ ಸವಿಸ್ಮಯಃ ।
ಯುವಾನಂ ವೀಕ್ಷ್ಯ ಪಪ್ರಚ್ಛ ದಾಶಃ ಸತ್ಯವ್ರತಸ್ತತಃ ॥ ೫೩
ಕಸ್ತ್ವಂ ಕಥಂ ಕುತಶ್ಚೈಷಾ ಶಫರೋದರಶಾಯಿತಾ ।
ಬ್ರಹ್ಮಂಸ್ತ್ವಯಾಪ್ತಾ ಕೋಽಯಂ ತೇ ವೃತ್ತಾಂತೋಽತ್ಯಂತಮದ್ಭುತಃ ॥ ೫೪
ತಚ್ಛ್ರುತ್ವಾ ಶಕ್ತಿದೇವಸ್ತು ದಾಶೇಂದ್ರು ಪ್ರತ್ಯಭಾಷತ ।
ಬ್ರಾಹ್ಮಣಃ ಶಕ್ತಿದೇವಾಖ್ಯೋ ವರ್ಧಮಾನಪುರಾದಹಮ್ ॥ ೫೫

೫೬. ನಾನು ಅವಶ್ಯವಾಗಿ ಕನಕಪುರೀ ಎಂಬ ನಗರಕ್ಕೆ ಹೋಗಬೇಕು. ಅದು ಎಲ್ಲಿದೆಯೆಂದು ತಿಳಿಯದೆ ದೂರದಿಂದ ಬಂದ ನಾನು ಬಹುಕಾಲ ಭೂಮಿಯನ್ನು ಸುತ್ತಿದ್ದೇನೆ.

೫೭–೫೮. ಆಮೇಲೆ ದೀರ್ಘತಪಸ್ ಎಂಬ ಋಷಿಯ ಮಾತಿನಿಂದ ಅದು ಯಾವುದೋ ದ್ವೀಪದಲ್ಲಿದೆಯೆಂದು ತಿಳಿದು, ಅದರ ಬಗೆಗೆ ಅರಿತುಕೊಳ್ಳಲು ಉತ್ಸಲ ದ್ವೀಪದಲ್ಲಿರುವ ಬೆಸ್ತರ ರಾಜ ಸತ್ಯವ್ರತನ ಬಳಿಗೆ ಹೋಗುತ್ತಿದ್ದೆನು. ಹಡಗು ಒಡೆದುಹೋದುದರಿಂದ ಸಮುದ್ರದಲ್ಲಿ ಮುಳುಗಿದೆನು. ಮೀನು ನನ್ನನ್ನು ನುಂಗಿ ಈಗ ಇಲ್ಲಿಗೆ ನನ್ನನ್ನು ತಲುಪಿಸಿದೆ."

೫೯. ಹೀಗೆ ಹೇಳಿದ ಶಕ್ತಿದೇವನಿಗೆ ಸತ್ಯವ್ರತನಿಂತೆಂದನು "ನಾನೇ ಸತ್ಯವ್ರತನು. ನಿನಗೆ ಬೇಕಾದ ದ್ವೀಪವೂ ಇದೇ.

೬೦. ಆದರೆ ಅನೇಕ ದ್ವೀಪಗಳನ್ನು ನೋಡಿರುವ ನಾನೂ ನಿನಗೆ ಬೇಕಾದ ಆ ನಗರವನ್ನು ಯಾವ ದ್ವೀಪದಲ್ಲೂ ನೋಡಿಲ್ಲ. ಆದರೆ ಅದರ ಬಗೆಗೆ ಕೇಳಿದ್ದೇನೆ.'

೬೧. ಇಷ್ಟು ಹೇಳಿದಾಗ ಶಕ್ತಿದೇವನು ವಿಷಾದದಿಂದ ತುಂಬಿದುದನ್ನು ನೋಡಿ, ಅತಿಥಿಯಲ್ಲಿ ತನಗಿದ್ದ ಪ್ರೀತಿಯಿಂದ ಸತ್ಯವ್ರತನು ಆ ಕ್ಷಣದಲ್ಲಿ ಅವನಿಗೆ ಹೀಗೆ ಹೇಳಿದನು.

---

ಅವಶ್ಯಗಮ್ಯಾ ಕನಕಪುರೀ ಚ ನಗರೀ ಮಯಾ ।
ಅಜಾನಾನಶ್ಚ ತಾಂ ದೂರಾದ್ ಭ್ರಾಂತೋಽಸ್ಮಿ ಸುಚಿರಂ ಭುವಮ್ ॥ ೫೬
ತತೋ ದೀರ್ಘತಪೋವಾಕ್ಯಾತ್ ಸಂಭಾವ್ಯ ದ್ವೀಪಗಾಂ ಚ ತಾಮ್ ।
ತಜ್ಜ್ಞಪ್ತಯೇ ದಾಶಪತೇರುತ್ಸಲದ್ವೀಪವಾಸಿನಃ ॥ ೫೭
ಪಾರ್ಶ್ವಂ ಸತ್ಯವ್ರತಸ್ಯಾಹಂ ಗಚ್ಛನ್ ವಹನಭಂಗತಃ
ಮಗ್ನೋಽಂಬುಧೌ ನಿಗೀರ್ಣೋಽಹಂ ಮತ್ಸ್ಯೇನ ಪ್ರಾಪಿತೋಽಧುನಾ ॥ ೫೮
ಇತ್ಯುಕ್ತವಂತಂ ತಂ ಶಕ್ತಿದೇವಂ ಸತ್ಯವ್ರತೋಽಬ್ರವೀತ್ ।
ಸತ್ಯವ್ರತೋಽಹಮೇವೈತದ್ ದ್ವೀಪಂ ತಚ್ಚೇದಮೇವ ತೇ ॥ ೫೯
ಕಿಂತು ದೃಷ್ಟಾ ಬಹುದ್ವೀಪದೃಶ್ವನಾಪಿ ನ ಸಾ ಮಯಾ ।
ನಗರೀ ತ್ವದಭಿಪ್ರೇತಾ ದ್ವೀಪಾಂತೇಷು ಶ್ರುತಾ ಪುನಃ ॥ ೬೦
ಇತ್ಯುಕ್ತ್ವಾ ಶಕ್ತಿದೇವಂ ಚ ವಿಷಣ್ಣಂ ವೀಕ್ಷ್ಯ ತತ್ಕ್ಷಣಮ್ ।
ಪುನರಭ್ಯಾಗತಪ್ರೀತ್ಯಾ ತಂ ಸ ಸತ್ಯವ್ರತೋಽಭ್ಯಧಾತ್ ॥ ೬೧

೬೨. “ಬ್ರಹ್ಮನ್, ನೀನು ವಿಷಾದ ಪಡಬೇಡ. ಈ ರಾತ್ರಿ ಇಲ್ಲೇ ಇದ್ದುಬಿಡು. ಬೆಳಗ್ಗೆ ನಿನ್ನ ಇಷ್ಟಾರ್ಥದ ಸಿದ್ಧಿಗಾಗಿ ಯಾವುದಾದರೊಂದು ಉಪಾಯವನ್ನು ಮಾಡುತ್ತೇನೆ”

೬೩. ಹೀಗೆ ಆಶ್ವಾಸನೆಯನ್ನು ಕೊಟ್ಟು ಬೆಸ್ತನು ಶಕ್ತಿದೇವನನ್ನು ಕಳುಹಿಸಿಕೊಡಲು, ಆ ಬ್ರಾಹ್ಮಣನು ಅತಿಥಿಸತ್ಕಾರವು ಧಾರಾಳವಾಗಿ ಸಿಗುತ್ತಿದ್ದ ವಿಪ್ರರ ಮಠಕ್ಕೆ ಹೋದನು.

೬೪. ಆ ಮಠದಲ್ಲಿ ವಾಸಿಸುತ್ತಿದ್ದ ವಿಷ್ಣುದತ್ತನೆಂಬ ಬ್ರಾಹ್ಮಣನೊಡನೆ ಊಟಮಾಡಿದ ಶಕ್ತಿದೇವನು ಅವನ ಜೊತೆಗೆ ಮಾತುಕಥೆಯನ್ನು ಆರಂಭಿಸಿದನು.

೬೫. ಆ ಪ್ರಸಂಗದಲ್ಲಿ ಅವನು ಕೇಳಿದಾಗ ಶಕ್ತಿದೇವನು ತನ್ನ ದೇಶವನ್ನೂ ಕುಲವನ್ನೂ ಸಮಸ್ತ ವೃತ್ತಾಂತವನ್ನೂ ಅವನಿಗೆ ಹೇಳಿದನು.

೬೬. ಅದನ್ನೆಲ್ಲ ಅರಿತು ವಿಷ್ಣುದತ್ತನು ಆ ಕ್ಷಣದಲ್ಲೇ ಅವನನ್ನು ತಬ್ಬಿಕೊಂಡು ಆನಂದ ಬಾಷ್ಪಗಳ ಮಳೆಯಿಂದ ಗದ್ಗದವಾದ ಅಕ್ಷರಗಳಿಂದ ಅಸ್ಪಷ್ಟವಾದ ಮಾತುಗಳನ್ನಾಡಿದನು.

೬೭. ""ಸುದೈವದಿಂದ ನೀನು ನನ್ನ ತಾಯಿಯ ಸೋದರನ ಮಗ. ನಾನೂ ನೀನೂ ಒಂದೇ ದೇಶದಲ್ಲಿ ಹುಟ್ಟಿದವರು. ನಾನು ಚಿಕ್ಕಂದಿನಲ್ಲೇ ಹಿಂದೆ ಆ ದೇಶದಿಂದ ಇಲ್ಲಿಗೆ ಬಂದುಬಿಟ್ಟೆನು.

೬೮. ಆದ್ದರಿಂದ ನೀನೂ ಇಲ್ಲೇ ಇರು. ಬೇರೆ ದ್ವೀಪಗಳಿಂದ ಇಲ್ಲಿಗೆ ಬರುವ ವ್ಯಾಪಾರಿಗಳ ಕರ್ಣಪರಂಪರೆ ಬಹುಬೇಗನೆ ಇಲ್ಲೇ ನಿನ್ನ ಇಷ್ಟಾರ್ಥವನ್ನು ಸಾಧಿಸುತ್ತದೆ.”

---

ಬ್ರಹ್ಮನ್ ಮಾ ಗಾ ವಿಷಾದಂ ತ್ವಮಿಹೈವಾದ್ಯ ನಿಶಾಂ ವಸ ।
ಪ್ರಾತಃ ಕಂಚಿದುಪಾಯಂ ತೇ ವಿಧಾಸ್ಯಾಮೀಷ್ಟಸಿದ್ಧಯೇ ॥ ೬೨
ಇತ್ಯಾಶ್ವಾಸ್ಯ ಸ ತೇನೈವ ದಾಶೇನ ಪ್ರಹಿತಸ್ತತಃ ।
ಸುಲಭಾತಿಥಿಸತ್ಕಾರಂ ದ್ವಿಜೋ ವಿಪ್ರಮಠಂ ಯಯೌ ॥ ೬೩
ತತ್ರ ತದ್ವಾಸಿನೈಕೇನ ಕೃತಾಹಾರೋ ದ್ವಿಜನ್ಮನಾ ।
ವಿಷ್ಣುದತ್ತಾಭಿಧಾನೇನ ಸಹ ಚಕ್ರೇ ಕಥಾಕ್ರಮಮ್ ॥ ೬೪
ತತ್ಪ್ರಸಂಗಾಚ್ಚ ತೇನೈವ ಪೃಷ್ಟಸ್ತಸ್ಮೈ ಸಮಾಸತಃ ।
ನಿಜಂ ದೇಶಂ ಕುಲಂ ಕೃತ್ಸ್ನಂ ವೃತ್ತಾಂತಂ ಚ ಶಶಂಸ ಸಃ ॥ ೬೫
ತದ್ಬುದ್ಧ್ವಾ ಪರಿರಭ್ಯೈನಂ ವಿಷ್ಣುದತ್ತಃ ಸ ತತ್ಕ್ಷಣಮ್ ।
ಬಭಾಷೇ ಹರ್ಷಬಾಷ್ಪಾಂಬುಘರ್ಘರಾಕ್ಷರಜರ್ಜರಮ್ ॥ ೬೬
ದಿಷ್ಟ್ಯಾ ಮಾತುಲಪುತ್ರಸ್ತ್ವಮೇಕದೇಶಭವಶ್ಚ ಮೇ ।
ಅಹಂ ಚ ಬಾಲ್ಯ ಏವ ಪ್ರಾಕ್ ತಸ್ಮಾದ್ದೇಶಾದಿಹಾಗತಃ ॥ ೬೭
ತದಿಹೈವಾಸ್ವ ನ ಚಿರಾತ್ ಸಾಧಯಿಷ್ಯತಿ ಚಾತ್ರ ತೇ ।
ಇಷ್ಟಂ ದ್ವೀಪಾಂತರಾಗಚ್ಛದ್ವಣಿಕ್ಕರ್ಣಪರಂಪರಾ ॥ ೬೮

೧೯. ಹೀಗೆ ತನ್ನ ವಂಶವನ್ನೆಲ್ಲ ಹೇಳಿ ವಿಷ್ಣುದತ್ತನು ಶಕ್ತಿದೇವನಿಗೆ ಆ ಸಮಯಕ್ಕೆ ಯೋಗ್ಯವಾದ ಉಪಚಾರಗಳಿಂದ ಸತ್ಕಾರವನ್ನು ಮಾಡಿದನು.

೨೦. ಶಕ್ತಿದೇವನೂ ತನ್ನ ಪ್ರಯಾಣದ ಬಳಲಿಕೆಯನ್ನೆಲ್ಲ ಮರೆತು ಸಂತುಷ್ಟನಾದನು. ವಿದೇಶದಲ್ಲಿ ಬಂಧುಗಳ ನೋಟವು ಮರುಭೂಮಿಯಲ್ಲಿ (ಕಾಣಿಸುವ) ಅಮೃತದ ಚಿಲುಮೆಯೇ ಅಲ್ಲವೆ ?

೨೧. ತನ್ನ ಬಯಕೆಯು ಸಿದ್ಧಿಯು ಹತ್ತಿರದಲ್ಲೇ ಇದೆ ಎಂದೂ ಅವನು ಅಂದುಕೊಂಡನು. ಮಧ್ಯದಲ್ಲಿ ಬಂದೊದಗುವ ಒಳಿತು ಕಾರ್ಯದ ಸಫಲತೆಯ ಸೂಚಕ ತಾನೆ ?

೨೨–೨೩. ಶಕ್ತಿದೇವನಿಗೆ ರಾತ್ರಿಯಲ್ಲಿ ನಿದ್ದೆ ಹತ್ತಲಿಲ್ಲ. ಅವನು ಹಾಸಿಗೆಯಲ್ಲೇ ಕುಳಿತಿದ್ದನು. ಅವನ ಮನಸ್ಸು ಇಷ್ಟಾರ್ಥದ ಪ್ರಾಪ್ತಿಯನ್ನೇ ನೆನೆಸುತ್ತಿತ್ತು. ಪಕ್ಕದಲ್ಲಿದ್ದ ವಿಷ್ಣುದತ್ತನು ವಿನೋದಪೂರ್ವಕವಾಗಿ ಅವನ ಇಷ್ಟವನ್ನು ಸಮರ್ಥಿಸುವುದಕ್ಕಾಗಿ ಈ ಕಥೆಯನ್ನು ಹೇಳಿದನು.

## ಅಶೋಕದತ್ತನ ಕಥೆ

೨೪. ಯಮುನಾನದಿಯ ತೀರದಲ್ಲಿದ್ದ ದೊಡ್ಡ ಅಗ್ರಹಾರದಲ್ಲಿ ಬ್ರಾಹ್ಮಣಶ್ರೇಷ್ಠನಾಗಿದ್ದ ಗೋವಿಂದಸ್ವಾಮಿಯೆಂಬವನು ವಾಸಿಸುತ್ತಿದ್ದನು.

---

ಇತ್ಯುಕ್ತ್ವಾನ್ವಯಮಾವೇದ್ಯ ವಿಷ್ಣುದತ್ತೋ ಯಥೋಚಿತೈಃ ।
ತಂ ಶಕ್ತಿದೇವಂ ತತ್ಕಾಲಮುಪಚಾರೈರುಪಾಚರತ್ ॥ ೧೯
ಶಕ್ತಿದೇವೋಽಪಿ ಸಂಪ್ರಾಪ ವಿಸ್ಮೃತಾಧ್ವಕ್ಲಮೋ ಮುದಮ್ ।
ವಿದೇಶೇ ಬಂಧುಲಾಭೋ ಹಿ ಮರಾವಮೃತನಿರ್ಝರಃ ॥ ೨೦
ಅಮಂಸ್ತ ಚ ನಿಜಾಭೀಷ್ಟಸಿದ್ಧಿಮಭ್ಯರ್ಣವರ್ತಿನೀಮ್ ।
ಅಂತರಾಪಾತಿ ಹಿ ಶ್ರೇಯಃ ಕಾರ್ಯಸಂಪತ್ತಿಸೂಚಕಮ್ ॥ ೨೧
ತತೋ ರಾತ್ರಾವನಿದ್ರಸ್ಯ ಶಯನೀಯೇ ನಿಷೇದುಷಃ ।
ಅಭಿವಾಂಛಿತಸಂಪ್ರಾಪ್ತಿಗತಚಿತ್ತಸ್ಯ ತಸ್ಯ ಸಃ ॥ ೨೨
ಶಕ್ತಿದೇವಸ್ಯ ಪಾರ್ಶ್ವಸ್ಥೋ ವಿಷ್ಣುದತ್ತಃ ಸಮರ್ಥನಮ್ ।
ವಿನೋದಪೂರ್ವಕಂ ಕುರ್ವನ್ ಕಥಾಂ ಕಥಿತವಾನಿಮಾಮ್ ॥ ೨೩
ಪುರಾಭೂತ್ ಸುಮಹಾವಿಪ್ರೋ ಗೋವಿಂದಸ್ವಾಮಿಸಂಜ್ಞಕಃ ।
ಮಹಾಗ್ರಹಾರೇ ಕಾಲಿಂದ್ಯಾ ಉಪಕಂಠನಿವೇಶಿನಿ ॥ ೨೪

೭೫. ಗುಣಶಾಲಿಯಾಗಿದ್ದ ಅವನಿಗೆ ಸಮಾನರಾದ ಅಶೋಕದತ್ತ ವಿಜಯದತ್ತ ಎಂಬ ಇಬ್ಬರು ಮಕ್ಕಳು ಹುಟ್ಟಿದರು.

೭೬. ಅಲ್ಲಿ ಅವರು ವಾಸ ಮಾಡುತ್ತಿರಲು ಕಾಲಾನುಕ್ರಮದಲ್ಲಿ ಭಯಂಕರವಾದ ದುರ್ಭಿಕ್ಷ ಉಂಟಾಯಿತು. ಆಗ ಗೋವಿಂದಸ್ವಾಮಿಯು ತನ್ನ ಹೆಂಡತಿಗೆ ಹೇಳಿದನು.

೭೭. "ಬರ ಎಂಬ ದೋಷದಿಂದ ಈ ದೇಶ ನಾಶಕ್ಕೆ ಈಡಾಗಿದೆ. ಸ್ನೇಹಿತರ ಮತ್ತು ನೆಂಟರ ದುರ್ಗತಿಯನ್ನು ನಾನು ನೋಡಲಾರೆನು.

೭೮. ಯಾರಿಗೆ ಎಷ್ಟು ಕೊಡುವುದು ? ಆದ್ದರಿಂದ ನಮ್ಮಲ್ಲಿ ಎಷ್ಟು ಆಹಾರವಿದೆಯೋ ಅದನ್ನು ಗೆಳೆಯರಿಗೂ ನೆಂಟರಿಗೂ ಕೊಟ್ಟು ನಾವು ಈ ದೇಶದಿಂದ ಹೊರಟುಹೋಗೋಣ.

೭೯. ಕುಟುಂಬಸಹಿತವಾಗಿ ನಾವು ವಾಸಕ್ಕಾಗಿ ವಾರಾಣಸಿಯನ್ನು ಆಶ್ರಯಿಸೋಣ" ಹೀಗೆ ಅವನು ಹೇಳಿದುದನ್ನು ಅವನ ಮಡದಿಯೂ ಒಪ್ಪಿದಳು. ಗೋವಿಂದಸ್ವಾಮಿ ತನ್ನ ಬಳಿಯಿದ್ದ ಆಹಾರವನ್ನೆಲ್ಲ ಕೊಟ್ಟುಬಿಟ್ಟನು.

೮೦. ಹೆಂಡತಿ, ಮಕ್ಕಳು ಮತ್ತು ಸೇವಕರ ಜೊತೆಯಲ್ಲಿ ಅವನು ಆ ದೇಶದಿಂದ ಹೊರಟನು. ಉತ್ತಮ ಜನರು ತಮ್ಮವರ ಆಪತ್ತನ್ನು ನೋಡಲು ಎಂದೂ ಇಷ್ಟ ಪಡುವುದಿಲ್ಲ.

---

ಜಾಯೇತೇ ಸ್ಮ ಚ ತಸ್ಯ ದ್ವೌ ಸದೃಶೌ ಗುಣಶಾಲಿನಃ ।
ಅಶೋಕದತ್ತೋ ವಿಜಯದತ್ತಶ್ಚೇತಿ ಸುತೌ ಕ್ರಮಾತ್ ॥ ೭೫
ಕಾಲೇನ ತತ್ರ ವಸತಾಂ ತೇಷಾಮಜನಿ ದಾರುಣಮ್ ।
ದುರ್ಭಿಕ್ಷಂ ತೇನ ಗೋವಿಂದಸ್ವಾಮೀ ಭಾರ್ಯಾಮುವಾಚ ಸಃ ॥ ೭೬
ಅಯಂ ದುರ್ಭಿಕ್ಷದೋಷೇಣ ದೇಶಸ್ತಾವದ್ ವಿನಾಶಿತಃ ।
ತನ್ನ ಶಕ್ನೋಮ್ಯಹಂ ದ್ರಷ್ಟುಂ ಸುಹೃದ್ಬಾಂಧವದುರ್ಗತಿಮ್ ॥ ೭೭
ದೀಯತೇ ಚ ಕಿಯತ್ ಕಸ್ಯ ತಸ್ಮಾದನ್ನಂ ಯದಸ್ತಿ ನಃ ।
ತದ್ದತ್ವಾ ಮಿತ್ರಬಂಧುಭ್ಯೋ ವ್ರಜಾಮೋ ವಿಷಯಾದಿತಃ ॥ ೭೮
ವಾರಾಣಸೀಂ ಚ ವಾಸಾಯ ಸಕುಟುಂಬಾಃ ಶ್ರಯಾಮಹೇ ।
ಇತ್ಯುಕ್ತಯಾ ಸೋಽನುಮತೋ ಭಾರ್ಯಯಾನ್ನಮದಾನ್ನಿಜಮ್ ॥ ೭೯
ಸದಾರಸುತಭೃತ್ಯಶ್ಚ ಸ ದೇಶಾತ್ ಪ್ರಯಯೌ ತತಃ ।
ಉತ್ಸಹಂತೇ ನಹಿ ದ್ರಷ್ಟುಮುತ್ತಮಾಃ ಸ್ವಜನಾಪದಮ್ ॥ ೮೦

೮೧. ದಾರಿಯಲ್ಲಿ ಹೋಗುತ್ತಿದ್ದಾಗ ಅವನು ಒಬ್ಬ ಮಹಾವ್ರತಿ ಕಾಪಾಲಿಕನನ್ನು ಕಂಡನು. ಆ ಕಾಪಾಲಿಕನು ಜಟೆಗಳಿಂದ ಕೂಡಿ, ಬೂದಿಯಿಂದ ಬಿಳುಪಾಗಿದ್ದ ತಲೆಬುರುಡೆಯನ್ನು ಹಿಡಿದಿದ್ದುದರಿಂದ ಅರ್ಧಚಂದ್ರನೊಡನಿದ್ದ ಶಿವನಂತೆ ಶೋಭಿಸುತ್ತಿದ್ದನು.

೮೨. ಆ ಜ್ಞಾನಿಯ ಬಳಿಗೆ ಹೋಗಿ, ಅಡಿಗಳಿಗೆರಗಿ ಸ್ನೇಹದಿಂದ ಮಕ್ಕಳ ಶುಭ,ಅಶುಭಗಳ ಬಗೆಗೆ ಕೇಳಿದನು. ಆ ಯೋಗಿಯು ಅವನಿಗಿಂತೆಂದನು.

೮೩. 'ನಿನ್ನಿಬ್ಬರು ಮಕ್ಕಳಿಗೂ ಮುಂದೆ ಶುಭವಾಗಲಿದೆ. ವಿಪ್ರನೆ, ಆದರೆ ನಿನಗೆ ನಿನ್ನ ಚಿಕ್ಕ ಮಗ ವಿಜಯದತ್ತನಿಂದ ವಿಯೋಗ ಉಂಟಾಗುವುದು.

೮೪. ಆಮೇಲೆ ನಿನ್ನ ಇನ್ನೊಬ್ಬ ಮಗ ಅಶೋಕದತ್ತನ ಪ್ರಭಾವದಿಂದ ನಿಮಗೆ ಚಿಕ್ಕಮಗನೊಡನೆ ಮತ್ತೆ ಸಮಾಗಮ ಉಂಟಾಗುವುದು.'

೮೫. ಹೀಗೆ ಆ ಜ್ಞಾನಿಯು ಹೇಳಿದಾಗ ಗೋವಿಂದಸ್ವಾಮಿಯ ಮನಸ್ಸು ಸುಖ, ದುಃಖ, ಅದ್ಭುತಗಳಿಂದ ಆಕ್ರಾಂತವಾಗಲು, ಆ ಜ್ಞಾನಿಗೆ ಬೀಳ್ಕೊಡುಗೆಯನ್ನು ಹೇಳಿ ಅವನು ಅಲ್ಲಿಂದ ಹೊರಟನು.

೮೬. ವಾರಾಣಸೀ ನಗರವನ್ನು ಸೇರಿ ಅದರ ಆಚೆಯಲ್ಲಿದ್ದ ಚಂಡಿಕಾದೇವಾಲಯದಲ್ಲಿ ದೇವಿಯ ಪೂಜೆ ಇತ್ಯಾದಿಗಳಿಂದ ಒಂದು ದಿನವನ್ನು ಕಳೆದನು.

---

ಗಚ್ಛಂಶ್ಚ ಮಾರ್ಗೇ ಜಟಿಲಂ ಭಸ್ಮಪಾಂಡುಂ ಕಪಾಲಿನಮ್ ।
ಸಾರ್ಧಚಂದ್ರಮಿವೇಶಾನಂ ಮಹಾವ್ರತಿನಮೈಕ್ಷತ ॥ ೮೧
ಉಪೇತ್ಯ ಜ್ಞಾನಿನಂ ತಂ ಚ ನತ್ವಾ ಸ್ನೇಹೇನ ಪುತ್ರಯೋಃ ।
ಶುಭಾಶುಭಂ ಸ ಪಪ್ರಚ್ಛ ಸೋಽಥ ಯೋಗೀ ಜಗಾದ ತಮ್ ॥ ೮೨
ಪುತ್ರೌ ತೇ ಭಾವಿಕಲ್ಯಾಣೌ ಕಿಂ ತ್ವೇತೇನ ಕನೀಯಸಾ ।
ಬ್ರಹ್ಮನ್ ವಿಜಯದತ್ತೇನ ವಿಯೋಗಸ್ತೇ ಭವಿಷ್ಯತಿ ॥ ೮೩
ತತೋಽಸ್ಯಾಶೋಕದತ್ತಸ್ಯ ದ್ವಿತೀಯಸ್ಯ ಪ್ರಭಾವತಃ ।
ಏತೇನ ಸಹ ಯುಷ್ಮಾಕಂ ಭೂಯೋ ಭಾವೀ ಸಮಾಗಮಃ ॥ ೮೪
ಇತ್ಯುಕ್ತಸ್ತೇನ ಗೋವಿಂದಸ್ವಾಮೀ ಸ ಜ್ಞಾನಿನಾ ತದಾ ।
ಸುಃಖದುಃಖಾದ್ಭುತಾಕ್ರಾಂತಸ್ತಮಾಮಂತ್ರ್ಯ ತತೋ ಯಯೌ ॥ ೮೫
ಪ್ರಾಪ್ಯ ವಾರಾಣಸೀಂ ತಾಂ ಚ ತದ್‌ಬಾಹ್ಯೇ ಚಂಡಿಕಾಗೃಹೇ ।
ದಿನಂ ತತ್ರಾತಿಚಕ್ರಾಮ ದೇವೀಪೂಜಾದಿಕರ್ಮಣಾ ॥ ೮೬

೮೭ ಸಾಯಂಕಾಲವಾದಾಗ ಅಲ್ಲೇ ಹೊರಗೆ ಕುಟುಂಬಸಮೇತನಾಗಿ ಮರದ ಕೆಳಗೆ ಬೇರೆ ದೇಶದಿಂದ ಬಂದಿದ್ದ ಕಾರ್ಪಟಿಕರ ಜೊತೆಯಲ್ಲಿ ವಾಸಮಾಡಿದನು.

೮೮–೮೯. ದಾರಿಯನ್ನು ನಡೆದು ಬಳಲಿದ್ದ ಎಲ್ಲರೂ ರಾತ್ರಿಯಲ್ಲಿ ದಾರಿಹೋಕರಂತೆ ಎಲೆ ಮುಂತಾದುವನ್ನೇ ಹಾಸಿಕೊಂಡು ಮಲಗಿದರು. ಆದರೆ ಅಕಸ್ಮಾತ್ತಾಗಿ ಗೋವಿಂದಸ್ವಾಮಿಯ ಚಿಕ್ಕಮಗ ವಿಜಯದತ್ತನು ಎಚ್ಚರವಾಗಿದ್ದನು. ಅವನಿಗೆ ತೀವ್ರವಾದ ಶೀತಜ್ವರ ಬಂದಿತ್ತು.

೯೦. ಸದ್ಯನೆ ಮುಂದೆ ಉಂಟಾಗಲಿದ್ದ ಬಂಧುವಿಯೋಗಕ್ಕೆ ಕಾರಣವಾದ ಭಯದಿಂದಲೋ ಎಂಬಂತೆ ಜ್ವರದಿಂದ ಅವನಿಗೆ ನಡುಕ ಉಂಟಾಯಿತು. ಅವನ ಮೈಗೂದಲುಗಳು ನಿಮಿರಿ ನಿಂತುವು.

೯೧. ಚಳಿಯಿಂದ ಕಂಗೆಟ್ಟು ಅವನು ತಂದೆಯನ್ನು ಎಬ್ಬಿಸಿ ಹೀಗೆ ಹೇಳಿದನು. "ಅಪ್ಪ ತೀವ್ರವಾದ ಚಳಿಜ್ವರವು ಈಗ ನನ್ನನ್ನು ಪೀಡಿಸುತ್ತಿದೆ.

೯೨. ಆದ್ದರಿಂದ ಈಗ ಸಮಿತ್ತು (ಸೌದೆಯ ಚೂರು)ಗಳನ್ನು ತಂದು ಚಳಿಯನ್ನು ತೊಲಗಿಸುವ ಬೆಂಕಿಯನ್ನು ಹೊತ್ತಿಸು. ಇಲ್ಲದಿದ್ದರೆ ನನಗೆ ಶಾಂತಿ ಇಲ್ಲ. ಈ ರಾತ್ರಿಯನ್ನು ನಾನು ಕಳೆಯಲಾರೆನು."

---

ಸಾಯಂ ಚ ತತ್ರೈವ ಬಹಿಃ ಸಕುಟುಂಬಸ್ತರೋಸ್ತಲೇ ।
ಸಮಾವಸತ್ ಕಾರ್ಪಟಿಕೈಃ ಸೋನ್ಯದೇಶಾಗತೈಃ ಸಹ ॥ ೮೭
ರಾತ್ರೌ ಚ ತತ್ರ ಸುಪ್ತೇಷು ಸರ್ವೇಷ್ವಧ್ವಗತಾಧ್ವಸು ।
ಶ್ರಾಂತೇಷ್ವಾಸ್ತೀರ್ಣಪರ್ಣಾದಿಪಾಂಥಶಯ್ಯಾನಿಷಾದಿಷು ॥ ೮೮
ತದೀಯಸ್ಯ ವಿಬುದ್ಧಸ್ಯ ತಸ್ಯಾಕಸ್ಮಾತ್ ಕನೀಯಸಃ ।
ಸೂನೋರ್ವಿಜಯದತ್ತಸ್ಯ ಮಹಾನ್ ಶೀತಜ್ವರೋಽಜನಿ ॥ ೮೯
ಸ ತೇನ ಸಹಸಾ ಭಾವಿಬಂಧುವಿಶ್ಲೇಷಹೇತುನಾ ।
ಭಯೇನೇವ ಜ್ವರೇಣಾಭೂದೂರ್ಧ್ವರೋಮಾ ಸವೇಪಥುಃ ॥ ೯೦
ಶೀತಾರ್ತಶ್ಚ ಪ್ರಬೋಧ್ಯೈವ ಪಿತರಂ ಸ್ವಮುವಾಚ ತಮ್ ।
ಬಾಧತೇ ತಾತ ತೀವ್ರೋ ಮಾಮಿಹ ಶೀತಜ್ವರೋಽಧುನಾ ॥ ೯೧
ತನ್ಮೇ ಸಮಿಧಮಾನೀಯ ಶೀತಘ್ನಂ ಜ್ವಲಯಾನಲಮ್ ।
ನಾನ್ಯಥಾ ಮಮ ಶಾಂತಿಃ ಸ್ಯಾನ್ನಯೇಯಂ ನ ಚ ಯಾಮಿನೀಮ್ ॥ ೯೨

೯೩. ಅದನ್ನು ಕೇಳಿ ಅವನ ನೋವಿನಿಂದ ತಾನೂ ವ್ಯಾಕುಲನಾಗಿ ಗೋವಿಂದಸ್ವಾಮಿಯು "ಮಗು, ಈಗ ಎಲ್ಲಿಂದ ಬೆಂಕಿಯನ್ನು ತರಲಿ ?" ಎಂದು ಅವನಿಗೆ ಹೇಳಿದನು.

೯೪. "ಅಪ್ಪ , ಇಲ್ಲಿ ಹತ್ತಿರದಲ್ಲೇ ಜೋರಾಗಿ ಉರಿಯುತ್ತಿರುವ ಬೆಂಕಿ ಕಾಣುತ್ತಿದೆಯಲ್ಲ, ಅಲ್ಲಿಗೆ ಹೋಗಿ ನಾನೇಕೆ ಶರೀರವನ್ನು ಕಾಸಿಕೊಳ್ಳಬಾರದು ?

೯೫. ಆದ್ದರಿಂದ ನಡುಗುತ್ತಿರುವ ನನ್ನನ್ನು ಕೈಹಿಡಿದು ಬೇಗ ಅಲ್ಲಿಗೆ ಕರೆದುಕೊಂಡು ಹೋಗು" ಎಂದು ಅವನು ಹೇಳಿದಾಗ ಮತ್ತೆ ಆ ಬ್ರಾಹ್ಮಣ ಗೋವಿಂದಸ್ವಾಮಿಯು ಹೀಗೆಂದನು.

೯೬. "ಅದೊಂದು ಸ್ಮಶಾನ. ಅಲ್ಲಿ ಉರಿಯುತ್ತಿರುವುದು ಚಿತೆ. ಪಿಶಾಚಾದಿಗಳಿಂದ ಘೋರವಾದ ಅದರೊಳಕ್ಕೆ ಹೋಗುವುದು ಹೇಗೆ ? ನೀನಿನ್ನೂ ಪುಟ್ಟ ಹುಡುಗ.'

೯೭. ಮಕ್ಕಳಲ್ಲಿ ಅಕ್ಕರೆಯನ್ನಿಟ್ಟಿದ್ದ ತಂದೆಯ ಆ ಮಾತನ್ನು ಕೇಳಿ ವೀರ ವಿಜಯದತ್ತನು ನಿರ್ಲಕ್ಷ್ಯದಿಂದ ನಕ್ಕು ಹೀಗೆ ನುಡಿದನು.

೯೮. "ಅಪ್ಪ, ಆ ಬಡಪಾಯಿ ಪಿಶಾಚ ಮುಂತಾದುವು ನನಗೆ ಏನು ಮಾಡುತ್ತವೆ ? ನಾನೇನು ಕಡಿಮೆ ಕಸುವಿನವನೆ ? ಯಾವ ಸಂಶಯವನ್ನೂ ಪಡದೆ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು."

---

ತಚ್ಛ್ರುತ್ವಾ ತಂ ಸ ಗೋವಿಂದಸ್ವಾಮೀ ತದ್ವೇದನಾಕುಲಃ ।
ತಾವತ್ ಕುತೋಽಧುನಾ ವಹ್ನಿರ್ವತ್ಸೇತಿ ಚ ಸಮಭ್ಯಧಾತ್ ॥ ೯೩
ನನ್ವಯಂ ನಿಕಟೇ ತಾತ ದೃಶ್ಯತೇಽಗ್ನಿರ್ಜ್ವಲನ್ನಿತಃ ।
ಭೂಯಿಷ್ಠೋಽತ್ರೈವ ತದ್ಗತ್ವಾ ಕಿಂ ನಾಂಗಂ ತಾಪಯಾಮ್ಯಹಮ್ ॥ ೯೪
ತಸ್ಮಾತ್ಸಕಂಪಂ ಹಸ್ತೇ ಮಾಂ ಗೃಹೀತ್ವಾ ಪ್ರಾಪಯ ದ್ರುತಮ್ ।
ಇತ್ಯುಕ್ತಸ್ತೇನ ಪುತ್ರೇಣ ಪುನರ್ವಿಪ್ರೋಽಪಿ ಸೋಽಬ್ರವೀತ್ ॥ ೯೫
ಶ್ಮಶಾನಮೇತದೇಷಾ ಚ ಚಿತಾ ಜ್ವಲತಿ ತತ್ಕಥಮ್ ।
ಗಮ್ಯತೇಽತ್ರ ಪಿಶಾಚಾದಿಭೀಷಣೇ ತ್ವಂ ಹಿ ಬಾಲಕಃ ॥ ೯೬
ಏತಚ್ಛ್ರುತ್ವಾ ಪಿತುರ್ವಾಕ್ಯಂ ವತ್ಸಲಸ್ಯ ವಿಹಸ್ಯ ಸಃ ।
ವೀರೋ ವಿಜಯದತ್ತಸ್ತಂ ಸಾವಷ್ಟಂಭಮಭಾಷತ ॥ ೯೭
ಕಿಂ ಪಿಶಾಚಾದಿಭಿಸ್ತಾತ ವರಾಕೈಃ ಕ್ರಿಯತೇ ಮಮ ।
ಕಿಮಲ್ಪಸತ್ತ್ವಃ ಕೋಽಪ್ಯಸ್ಮಿ ತದಶಂಕಂ ನಯಾತ್ರ ಮಾಮ್ ॥ ೯೮

೯೯. ಹೀಗೆ ಒತ್ತಾಯ ಮಾಡಿ ಮಾತನಾಡಿದ ವಿಜಯದತ್ತನನ್ನು ತಂದೆಯು ಅಲ್ಲಿಗೆ ಒಯ್ದನು. ಆ ಹುಡುಗನು ಮೈಯನ್ನು ಕಾಸಿಕೊಳ್ಳುತ್ತಾ ಆ ಚಿತೆಯ ಬಳಿಗೆ ನಡೆದನು.

೧೦೦. ಆ ಚಿತೆ ಉರಿಯುತ್ತಿತ್ತು. ಬೆಂಕಿಯ ಜ್ವಾಲೆಗಳ ಹೊಗೆಯೇ ಅದರ ಏರುಪೇರಾಗುತ್ತಿದ್ದ ಕೂದಲುಗಳಾಗಿದ್ದು ಮನುಷ್ಯಮಾಂಸವನ್ನು ತಿನ್ನುವ ರಾಕ್ಷಸರ ಅಧಿದೇವತೆಯೋ ಎಂಬಂತೆ (ಅದು ಕಾಣಿಸುತ್ತಿತ್ತು ).

೧೦೧. ಒಂದು ಕ್ಷಣಕಾಲ ಅಲ್ಲಿ ಸಮಾಧಾನ ಹೊಂದಿದ ಬಾಲಕನು ತಂದೆಯನ್ನು “ಚಿತೆಯ ಒಳಗಡೆ ಗುಂಡಾಗಿ ಕಾಣಿಸುತ್ತಿದೆಯಲ್ಲ ಅದೇನು ?” ಎಂದು ಪ್ರಶ್ನಿಸಿದನು.

೧೦೨. “ಮಗನೆ, ಮನುಷ್ಯನ ತಲೆಬುರುಡೆ ಚಿತೆಯಲ್ಲಿ ಉರಿಯುತ್ತಿದೆ” ಎಂದು ಪಕ್ಕದಲ್ಲಿದ್ದ ತಂದೆಯು ಅವನಿಗೆ ಉತ್ತರವನ್ನಿತ್ತನು.

೧೦೩. ಆಮೇಲೆ ಆ ಬಾಲಕನು ತನ್ನ ಸಾಹಸದಿಂದಲೋ ಎಂಬಂತೆ ತುದಿಯಲ್ಲಿ ಉರಿಯುತ್ತಿದ್ದ ಒಂದು ಕೊಳ್ಳಿಯಿಂದ ಆ ತಲೆ ಬುರುಡೆಯನ್ನು ಹೊಡೆದು ಸಿಡಿಸಿದನು.

104. ಸುಡುಗಾಡಿನ ಬೆಂಕಿಯು ಅರ್ಪಿಸಿದ ರಾತ್ರಿಸಂಚಾರದ ಸಿದ್ಧಿಯಂತೆ ಆ ತಲೆಬುರುಡೆಯಿಂದ ಮೇಲಕ್ಕೆ ಹಾರಿದ ವಸೆಯು ವಿಜಯದತ್ತನ ಬಾಯೊಳಕ್ಕೆ ಬಿದ್ದಿತು.

---

ಇತ್ಯಾಗ್ರಹಾದ್ ವದಂತಂ ತಂ ಸ ಪಿತಾ ತತ್ರ ನೀತವಾನ್ ।
ಸೋಽಪ್ಯಂಗಂ ತಾಪಯನ್ ಬಾಲಶ್ಚಿತಾಮುಪಸಸರ್ಪ ತಾಮ್ ॥ ೯೯
ಜ್ವಲಂತೀಮನಲಜ್ವಾಲಾಧೂಮವ್ಯಾಕುಲಮೂರ್ಧಜಾಮ್ ।
ನೃಮಾಂಸಗ್ರಾಹಿಣೀಂ ಸಾಕ್ಷಾದಿವ ರಕ್ಷೋಽಧಿದೇವತಾಮ್ ॥ ೧೦೦
ಕ್ಷಣಾತ್ತತ್ರ ಸಮಾಶ್ವಸ್ಯ ಸೋಽರ್ಭಕಃ ಪಿತರಂ ಚ ತಮ್ ।
ಚಿತಾಂತರ್ದೃಶ್ಯತೇ ವೃತ್ತಂ ಕಿಮೇತದಿತಿ ಪೃಷ್ಟವಾನ್ ॥ ೧೦೧
ಕಪಾಲಂ ಮಾನುಷಸ್ಯೈತಚ್ಚಿತಾಯಾಂ ಪುತ್ರ ದಹ್ಯತೇ ।
ಇತಿ ತಂ ಪ್ರತ್ಯವಾದೀಚ್ಚ ಸೋಽಪಿ ಪಾರ್ಶ್ವಸ್ಥಿತಃ ಪಿತಾ ॥ ೧೦೨
ತತಃ ಸ್ವಸಾಹಸೇನೇವ ದೀಪ್ತಾಗ್ರೇಣ ನಿಹತ್ಯ ತಮ್ ।
ಕಪಾಲಂ ಸ್ಫೋಟಯಾಮಾಸ ಕಾಷ್ಠೇನೈಕೇನ ಸೋಽರ್ಭಕಃ ॥ ೧೦೩
ತೇನೋಚ್ಚೈಃ ಪ್ರಸೃತಾ ತಸ್ಮಾನ್ಮುಖೇ ತಸ್ಯಾಪತದ್ ವಸಾ ।
ಶ್ಮಶಾನವಹ್ನಿನಾ ನಕ್ತಂಚರೀಸಿದ್ಧಿರಿವಾರ್ಪಿತಾ ॥ ೧೦೪

105. ಅದನ್ನು ನುಂಗಿದುದರಿಂದ ಆ ಹುಡುಗನು ರಾಕ್ಷಸನಾಗಿಬಿಟ್ಟನು. ಅವನ ತಲೆಗೂದಲು ಎದ್ದು ನಿಂತಿತು. ಅವನ ತಲೆಜುಟ್ಟಿನಿಂದ ಖಡ್ಗವು ಹೊಮ್ಮಿತು. ಅವನು ಕೋರೆದಾಡೆಗಳು (ಅವನ ಬಾಯನ್ನು) ಹಿಗ್ಗಿಸಿದುವು.

106. ಆ ತಲೆಬುರುಡೆಯನ್ನು ಹೊರಗೆಳೆದುಕೊಂಡು ಅದರೊಳಗಿದ್ದ ವಸೆಯನ್ನು ಕುಡಿದು ಅನಂತರ ಅವನು ಎಲುಬುಗಳಿಗೆ ಅಂಟಿದ್ದ ವಸೆಯನ್ನೂ ಬೆಂಕಿಯ ಜ್ವಾಲೆಗಳಂತೆ ಆಡುತ್ತಿದ್ದ ನಾಲಿಗೆಯಿಂದ ನೆಕ್ಕಿದನು.

107. ಆಮೇಲೆ ಆ ತಲೆಬುರುಡೆಯನ್ನೆಸೆದು ತನ್ನ ತಂದೆ ಆ ಗೋವಿಂದಸ್ವಾಮಿಯನ್ನೇ ಕೊಲ್ಲಲು ಕತ್ತಿಯನ್ನೆತ್ತಿ ಬಂದನು.

108. "ಕಪಾಲವನ್ನು ಸ್ಫೋಟಿಸಿದ ಪ್ರಭುವೆ ! ನಿನ್ನ ತಂದೆಯನ್ನು ಕೊಲ್ಲಬೇಡ, ಈ ಕಡೆ ಬಾ' ಎಂದು ಆ ಕಾಲದಲ್ಲಿ ಸುಡುಗಾಡಿನಿಂದ ಮಾತು ಕೇಳಿಬಂದಿತು.

109. ಅದನ್ನು ಕೇಳಿ ಕಪಾಲಸ್ಫೋಟ ಎಂಬ ಹೆಸರನ್ನೇ ಪಡೆದು ಆ ವಟು ತಂದೆಯನ್ನು ಬಿಟ್ಟು ರಾಕ್ಷಸನಾಗಿ ಅದೃಶ್ಯನಾದನು.

110. ಅವನ ತಂದೆ ಗೋವಿಂದಸ್ವಾಮಿಯು "ಅಯ್ಯೋ ಮಗನೆ, ಅಯ್ಯೋ ಗುಣಶಾಲಿಯೆ, ಹಾಹಾ ವಿಜಯದತ್ತ' ಎಂದು ಕಿರಿಚುತ್ತಾ ಅಲ್ಲಿಂದ ನಡೆದನು.

---

ತದಾಸ್ವಾದೇನ ಬಾಲಶ್ಚ ಸಂಪನ್ನೋಽಭೂತ್ ಸ ರಾಕ್ಷಸಃ ।<br>
ಊರ್ಧ್ವಕೇಶಃ ಶಿಖೋತ್ಖಾತಖಡ್ಗೋ ದಂಷ್ಟ್ರಾವಿಶಂಕಟಃ ॥ ೧೦೫<br>
ಆಕೃಷ್ಯ ಚ ಕಪಾಲಂ ತದ್ವಸಾಂ ಪೀತ್ವಾ ಲಿಲೇಹ ಸಃ ।<br>
ಅಸ್ಥಿಲಗ್ನಾನಲಜ್ವಾಲಾಲೋಲಯಾ ನಿಜಜಿಹ್ವಯಾ ॥ ೧೦೬<br>
ತತಸ್ತ್ಯಕ್ತಕಪಾಲಃ ಸನ್ ಪಿತರಂ ನಿಜಮೇವ ತಮ್ ।<br>
ಗೋವಿಂದಸ್ವಾಮಿನಂ ಹಂತುಮುದ್ಯತಾಸಿರಿಯೇಷ ಸಃ ॥ ೧೦೭<br>
ಕಪಾಲಸ್ಫೋಟ ಭೋ ದೇವ ನ ಹಂತವ್ಯಃ ಪಿತಾ ತವ ।<br>
ಇತ ಏಹೀತಿ ತತ್ಕಾಲಂ ಶ್ಮಶಾನಾದುದಭೂದ್ ವಚಃ ॥ ೧೦೮<br>
ತಚ್ಛ್ರುತ್ವಾ ನಾಮ ಲಬ್ಧ್ವಾ ಚ ಕಪಾಲಸ್ಫೋಟ ಇತ್ಯದಃ ।<br>
ಸ ವಟುಃ ಪಿತರಂ ಮುಕ್ತ್ವಾ ರಕ್ಷೋಭೂತಸ್ತಿರೋದಧೇ ॥ ೧೦೯<br>
ತತ್ಪಿತಾ ಸೋಽಪಿ ಗೋವಿಂದಸ್ವಾಮೀ ಹಾ ಪುತ್ರ ಹಾ ಗುಣಿನ್ ।<br>
ಹಾ ಹಾ ವಿಜಯದತ್ತೇತಿ ಮುಕ್ತಾಕ್ರಂದಸ್ತತೋ ಯಯೌ ॥ ೧೧೦

111. ಚಂಡೀದೇವಾಲಯಕ್ಕೆ ಹೋಗಿ ಬೆಳಗಾದ ಮೇಲೆ ಹೆಂಡತಿಗೂ ಹಿರಿಯ ಮಗ ಅಶೋಕದತ್ತನಿಗೂ ನಡೆದುದೆಲ್ಲವನ್ನೂ ನಡೆದಂತೆ ಅವನು ಹೇಳಿದನು.

112. ಮೋಡವಿಲ್ಲದೆ ಬಡಿದ ಸಿಡಿಲಿನಂತೆ ಘೋರವಾಗಿದ್ದ ದುಃಖದ ಬೆಂಕಿಯ ಬೇಗೆಯನ್ನು ಬಡಪಾಯಿ ಗೋವಿಂದಸ್ವಾಮಿಯು ಅವರಿಬ್ಬರೊಡನೆ ಅನುಭವಿಸಿದನು.

113. ವಾರಣಾಸಿಯಲ್ಲೇ ಇರುವ ಜನರಂತೆ ದೇವಿಯ ಸಂದರ್ಶನಕ್ಕಾಗಿ ಅಲ್ಲಿಗೆ ಬಂದ ಬೇರೆ ಜನರೂ ಅವರಿಗೆ ಸಮಾನವಾದ ದುಃಖವನ್ನು ಅನುಭವಿಸಿದರು.

114. ಅಷ್ಟರಲ್ಲಿ ದೇವೀಪೂಜೆಗೋಸ್ಕರ ಬಂದಿದ್ದ ದೊಡ್ಡವ್ಯಾಪಾರಿಯೊಬ್ಬನು ಆ ಅವಸ್ಥೆಯಲ್ಲಿದ್ದ ಗೋವಿಂದಸ್ವಾಮಿಯನ್ನು ಕಂಡನು.

115. ಸಮುದ್ರದತ್ತನೆಂಬ ಹೆಸರಿನ ಆ ಒಳ್ಳೆಯ ವ್ಯಾಪಾರಿಯು ಸಮೀಪಕ್ಕೆ ಬಂದು ಆ ಬ್ರಾಹ್ಮಣನಿಗೆ ಆಶ್ವಾಸನೆಯನ್ನಿತ್ತು ಆಗಲೇ ಪರಿವಾರ ಸಮೇತವಾಗಿ ಅವನನ್ನು ತನ್ನ ಮನೆಗೆ ಕರೆದೊಯ್ದನು.

116. ಸ್ನಾನ ಮುಂತಾದ ಸೇವೆಗಳಿಂದ ಅಲ್ಲಿ ಅವನಿಗೆ ಉಪಚಾರಮಾಡಿದನು. ಆಪತ್ತಿಗೆ ಸಿಕ್ಕಿಹಾಕಿಕೊಂಡವರಿಗೆ ಅನುಕಂಪವನ್ನು ತೋರಿಸುವುದು ದೊಡ್ಡವರ ಸ್ವಭಾವವೇ ಅಲ್ಲವೆ ?

---

ಏತ್ಯ ಚಂಡೀಗೃಹಂ ತಚ್ಚ ಪ್ರಾತಃ ಪತ್ನ್ಯೈ ಸುತಾಯ ಚ ।
ಜ್ಯಾಯಸೇಽಶೋಕದತ್ತಾಯ ಯಥಾವೃತ್ತಂ ಶಶಂಸ ಸಃ ॥ ೧೧೧
ತತಸ್ತಾಭ್ಯಾಂ ಸಹಾನಭ್ರವಿದ್ಯುದಾಪಾತದಾರುಣಮ್ ।
ಯಥಾ ಶೋಕಾನಲಾವೇಶಮಾಜಗಾಮ ಸ ತಾಪಸಃ ॥ ೧೧೨
ಯಥಾ ವಾರಾಣಸೀಸಂಸ್ಥೋ ದೇವೇ ಸಂದರ್ಶನಾಗತಃ ।
ತತ್ರೋಪೇತ್ಯ ಜನೋಽಪ್ಯನ್ಯೋ ಯಯೌತತ್ಸಮದುಃಖತಾಮ್ ॥ ೧೧೩
ತಾವಚ್ಚ ದೇವೀಪೂಜಾರ್ಥಮಾಗತ್ಯೈಕೋ ಮಹಾವಣಿಕ್ ।
ಅಪಶ್ಯದತ್ರ ಗೋವಿಂದಸ್ವಾಮಿನಂ ತಂ ತಥಾವಿಧಮ್ ॥ ೧೧೪
ಸಮುದ್ರದತ್ತನಾಮಾಸಾವುಪೇತ್ಯಾಶ್ವಾಸ್ಯ ತಂ ದ್ವಿಜಮ್ ।
ತದೈವ ಸ್ವಗೃಹಂ ಸಾಧುರ್ನಿನಾಯ ಸಪರಿಚ್ಛದಮ್ ॥ ೧೧೫
ಸ್ನಾನಾದಿನೋಪಚಾರೇಣ ತತ್ರ ಚೈನಮುಪಾಚರತ್ ।
ನಿಸರ್ಗೋ ಹ್ಯೇಷ ಮಹತಾಂ ಯದಾಪನ್ನಾನುಕಂಪನಮ್ ॥ ೧೧೬

117. ಮಹಾವ್ರತಿ ಕಾಪಾಲಿಕನ ಮಾತನ್ನು ಕೇಳಿ ಮಗನು ಮತ್ತೆ ಬಂದುಸೇರುವನೆಂಬ ನಂಬಿಕೆಯನ್ನು ಹೊಂದಿದ್ದ ಗೋವಿಂದಸ್ವಾಮಿಯ ಪತ್ನಿಯೊಡನೆ ಧೈರ್ಯವನ್ನು ವಹಿಸಿದನು.

118. ಅಲ್ಲಿಂದ ಮುಂದೆ ಅವನು ಶ್ರೀಮಂತ ವ್ಯಾಪಾರಿಯು ಕೇಳಿಕೊಂಡ ಹಾಗೆ ವಾರಣಾಸಿಯಲ್ಲಿ ಆ ವ್ಯಾಪಾರಿಯ ಮನೆಯಲ್ಲೇ ವಾಸಮಾಡಿದನು.

119. ಗೋವಿಂದಸ್ವಾಮಿಯ ಇನ್ನೊಬ್ಬ ಮಗ ಅಶೋಕದತ್ತನು ಅಲ್ಲೇ ವಿದ್ಯೆಯನ್ನು ಗಳಿಸಿ, ಯೌವನಕ್ಕೆ ಬಂದು ಬಾಹುಯುದ್ಧವನ್ನು ಕಲಿತನು.

120. ಕ್ರಮವಾಗಿ ಅವನು ಅದರಲ್ಲಿ ಎಷ್ಟು ಪರಿಣತಿಯನ್ನು ಪಡೆದನೆಂದರೆ ಭೂಲೋಕದಲ್ಲಿ ಯಾರೂ ಅವನನ್ನು ಸೋಲಿಸಲು ಸಾಧ್ಯವಾಗುತ್ತಿರಲಿಲ್ಲ.

121. ಒಮ್ಮೆ ಅಲ್ಲಿ ದೇವರ ಜಾತ್ರೆಯಾದಾಗ ಕುಸ್ತಿಪಟುಗಳ ಮೇಳದಲ್ಲಿ ಅಲ್ಲಿಗೆ ದಕ್ಷಿಣಾಪಥದಿಂದ ಒಬ್ಬ ಕೀರ್ತಿಶಾಲಿಯಾಗಿದ್ದ ಮಹಾಮಲ್ಲನು ಬಂದನು.

122. ವಾರಾಣಸಿಯ ಒಡೆಯನಾಗಿದ್ದ ಪ್ರತಾಪಮುಕುಟನೆಂಬ ಮಹಾರಾಜನ ಎದುರಿನಲ್ಲೇ ಆ (ದಕ್ಷಿಣಾಪಥದ ಮಲ್ಲನು) ಇತರ ಎಲ್ಲ ಜಟ್ಟಿಗಳನ್ನೂ ಸೋಲಿಸಿಬಿಟ್ಟನು.

123. ಆಗ ಮಹಾರಾಜನು ಆ ಶ್ರೇಷ್ಠವ್ಯಾಪಾರಿ ಸಮುದ್ರದತ್ತ ಹೇಳಿದ ಅಶೋಕದತ್ತನನ್ನು ಕರೆಸಿ ಮಲ್ಲನೊಡನೆ ಕಾಳಗವನ್ನಾಡಲು ಆಜ್ಞಾಪಿಸಿದನು.

---

ಸೋಽಪಿ ಜಗ್ರಾಹ ಗೋವಿಂದಸ್ವಾಮೀ ಪತ್ನ್ಯಾ ಸಮಂ ಧೃತಿಮ್ ।
ಮಹಾವ್ರತಿವಚಃ ಶ್ರುತ್ವಾ ಜಾತಾಸ್ಥಃ ಸುತಸಂಗಮೇ ॥ ೧೧೭

ತತಃ ಪ್ರಭೃತಿ ಚೈತಸ್ಯಾಂ ವಾರಾಣಸ್ಯಾಮುವಾಸ ಸಃ ।
ಅಭ್ಯರ್ಥಿತೋ ಮಹಾಢ್ಯಸ್ಯ ತಸ್ಯೈವ ವಣಿಜೋ ಗೃಹೇ ॥ ೧೧೮

ತತ್ರೈವಾಧೀತವಿದ್ಯೋಽಸ್ಯ ಸ ಸುತಃ ಪ್ರಾಪ್ತಯೌವನಃ ।
ದ್ವಿತೀಯೋಽಶೋಕದತ್ತಾಖ್ಯೋ ಬಾಹುಯುದ್ಧಮಶಿಕ್ಷತ ॥ ೧೧೯

ಕ್ರಮೇಣ ಚ ಯಯೌ ತತ್ರ ಪ್ರಕರ್ಷಂ ಸ ತಥಾ ಯಥಾ ।
ಅಜೀಯತ ನ ಕೇನಾಪಿ ಪ್ರತಿಮಲ್ಲೇನ ಭೂತಲೇ ॥ ೧೨೦

ಏಕದಾ ದೇವಯಾತ್ರಾಯಾಂ ತತ್ರ ಮಲ್ಲಸಮಾಗಮೇ ।
ಆಗಾದೇಕೋ ಮಹಾಮಲ್ಲಃ ಖ್ಯಾತಿಮಾನ್ ದಕ್ಷಿಣಾಪಥಾತ್ ॥ ೧೨೧

ತೇನಾತ್ರ ನಿಖಿಲಾ ಮಲ್ಲಾ ರಾಜ್ಞೋ ವಾರಾಣಸೀಪತೇಃ ।
ಪ್ರತಾಪಮುಕುಟಾಖ್ಯಸ್ಯ ಪುರತೋಽನ್ಯೇ ಪರಾಜಿತಾಃ ॥ ೧೨೨

ತತಃ ಸ ರಾಜಾ ಮಲ್ಲಸ್ಯ ಯುದ್ಧೇ ತಸ್ಯ ಸಮಾದಿಶತ್ ।
ಆನಾಯ್ಯಾಶೋಕದತ್ತಂ ತಂ ಶ್ರುತಂ ತಸ್ಮಾದ್ ವಣಿಗ್ವರಾತ್ ॥ ೧೨೩

124. ಆ ಮಲ್ಲನು ಭುಜವನ್ನು ತಟ್ಟಿ ಕೈಯಿಂದ ಕಾಳಗವನ್ನು ಆರಂಭಿಸಿದನು. ಅಶೋಕದತ್ತನೋ ಭುಜವನ್ನು ತಟ್ಟಿ ಆ ಮಲ್ಲನನ್ನು ಕೆಳಕ್ಕೆ ಉರುಳಿಸಿಬಿಟ್ಟನು.

125. ಆಗ ಅಲ್ಲಿ ಆ ದೊಡ್ಡ ಮಲ್ಲನು ನೆಲಕ್ಕೆ ಬಿದ್ದಾಗ ಉಂಟಾದ ಸದ್ದಿನಿಂದ ಆ ಯುದ್ಧ ಭೂಮಿಯೂ (ಅಶೋಕದತ್ತನಿಗೆ) ಪ್ರಶಂಸೆಯನ್ನು ಹೇಳಿದಂತೆ ಇತ್ತು.

126. ಹೀಗೆ ತನ್ನ ಪರಾಕ್ರಮವನ್ನು ಮೆರೆಸಿದ ಅಶೋಕದತ್ತನನ್ನು ಸಂತುಷ್ಟನಾದ ರಾಜನು ರತ್ನಗಳಿಂದ ತುಂಬಿಸಿದ್ದಲ್ಲದೆ ತನ್ನ ಜೊತೆಯಲ್ಲೇ ಇಟ್ಟುಕೊಂಡನು.

127. ಅಶೋಕದತ್ತನು ರಾಜನಿಗೆ ಇಷ್ಟವಾದವನಾಗಿ ಕೆಲವೇ ದಿನಗಳಲ್ಲಿ ಬಹಳ ಸಂಪತ್ತನ್ನು ಪಡೆದುಕೊಂಡನು. ಗುಣಗ್ರಾಹಿಯಾದ ದೊರೆಯು ಶೂರರ ವಿದ್ಯೆಗಳನ್ನು ಕಲಿತವರಿಗೆ ದೊಡ್ಡ ನಿಧಿಯಾಗುವನಲ್ಲವೆ ?

128. ಒಮ್ಮೆ ಆ ರಾಜನು ಚತುರ್ದಶಿಯ ದಿನ ಊರಿನ ಆಚೆ ದೂರದಲ್ಲಿ ಪ್ರತಿಷ್ಠೆ ಮಾಡಲ್ಪಟ್ಟಿದ್ದ ಭಗವಾನ್ ಶಿವನನ್ನು ಪೂಜಿಸಲು ತೆರಳಿದನು.

129. ಪೂಜೆಯನ್ನು ಮಾಡಿ ಅವನು ರಾತ್ರಿಯಲ್ಲಿ ಸ್ಮಶಾನದ ಹತ್ತಿರವಿದ್ದ ದಾರಿಯಿಂದ ಬರುತ್ತಿದ್ದಾಗ ಅದರ ಮಧ್ಯದಿಂದ ಬಂದ ಈ ಮಾತನ್ನು ಆಲಿಸಿದನು.

130. "ಪ್ರಭು, ದಂಡಾಧಿಪತಿಯು ನನ್ನ ಮೇಲಿನ ದ್ವೇಷದಿಂದ ಸುಳ್ಳು ಆರೋಪವನ್ನು ಹೊರಿಸಿ, ನನ್ನನ್ನು ಶೂಲಕ್ಕೆ ಏರಿಸಿದನು.  ಇದು ಶೂಲಕ್ಕೇರಿಸಿದ ಮೂರನೆಯ ದಿನ

---

ಸೋಽಪಿ ಮಲ್ಲೋ ಭುಜಂ ಹತ್ವಾ ಹಸ್ತೇನಾರಭತಾಹ್ವಯಮ್ ।  
ಮಲ್ಲಂ ಚಾಶೋಕದತ್ತಸ್ತು ಭುಜಂ ಹತ್ವಾ ನ್ಯಪಾತಯತ್ ॥ ೧೨೪  
ತತಸ್ತತ್ರ ಮಹಾಮಲ್ಲನಿಪಾತೋತ್ಥಿತಶಬ್ದಯಾ ।  
ಯುದ್ಧಭೂಮ್ಯಾಪಿ ಸಂತುಷ್ಯ ಸಾಧುವಾದ ಇವೋದಿತೇ ॥ ೧೨೫  
ಸ ರಾಜಾಶೋಕದತ್ತಂ ತಂ ತುಷ್ಟೋ ರತ್ನೈರಪೂರಯತ್ ।  
ಚಕಾರ ಚಾತ್ಮನಃ ಪಾರ್ಶ್ವವರ್ತಿನಂ ದೃಷ್ಟವಿಕ್ರಮಮ್ ॥ ೧೨೬  
ಸೋಽಪಿ ರಾಜ್ಞಃ ಪ್ರಿಯೋ ಭೂತ್ವಾ ದಿನೈಃ ಪ್ರಾಪ ಪರಾಂ ಶ್ರಿಯಮ್ ।  
ಶೇವಧಿಃ ಶೂರವಿದ್ಯಸ್ಯ ವಿಶೇಷಜ್ಞೋ ವಿಶಾಂಪತಿಃ ॥ ೧೨೭  
ಸೋಽಥ ಜಾತು ಯಯೌ ರಾಜಾ ಚತುರ್ದಶ್ಯಾಂ ಬಹಿಃ ಪುರೇ ।  
ಸುಪ್ರತಿಷ್ಠಾಪಿತಂ ದೂರೇ ದೇವಮರ್ಚಯಿತುಂ ಶಿವಮ್ ॥ ೧೨೮  
ಕೃತಾರ್ಚನಸ್ತತೋ ನಕ್ತಂ ಶ್ಮಶಾನಸ್ಯಾಂತಿಕೇನ ಸಃ ।  
ಆಗಚ್ಛನ್ನಶೃಣೋದೇತಾಂ ತನ್ಮಧ್ಯಾದುದ್ಗತಾಂ ಗಿರಮ್ ॥ ೧೨೯  
ಅಹಂ ದಂಡಾಧಿಪೇನೇಹ ಮಿಥ್ಯಾ ವಧ್ಯಾನುಕೀರ್ತನಾತ್ ।  
ದ್ವೇಷೇಣ ವಿದ್ಧಃ ಶೂಲಾಯಾಂ ತೃತೀಯಂ ದಿವಸಂ ಪ್ರಭೋ ॥ ೧೩೦

131. ಪಾಪಕರ್ಮದ ಫಲದಿಂದ ಇಂದಿಗೂ ನನ್ನ ಪ್ರಾಣಗಳು ಹೋಗಿಲ್ಲ. ದೇವ, ನನಗೆ ತುಂಬ ಬಾಯಾರಿಕೆ. ನನಗೆ ನೀರನ್ನು ಕೊಡಿಸು."

132. ಅದನ್ನು ಕೇಳಿ ದೊರೆಯು ಮರುಕದಿಂದ ಪಕ್ಕದಲ್ಲಿದ್ದ ಅಶೋಕದತ್ತನಿಗೆ "ಇವನಿಗೆ ನೀರನ್ನು ಕಳುಹಿಸಿಕೊಡು" ಎಂದು ಹೇಳಿದನು.

133. '"ಪ್ರಭೋ, ಅಲ್ಲಿಗೆ ಈ ಇರುಳಿನಲ್ಲಿ ಯಾವನು ಹೋದಾನು, ಆದ್ದರಿಂದ ನಾನೇ ಹೋಗುತ್ತೇನೆ" ಎಂದು ಹೇಳಿ ಅಶೋಕದತ್ತನು ತಾನೇ ನೀರನ್ನು ತೆಗೆದುಕೊಂಡು ಅಲ್ಲಿಗೆ ಹೋದನು.

134–136. ದೊರೆಯು ಊರಿಗೆ ಹೊರಟುಹೋದನು. ಆ ವೀರ ಆಶೋಕದತ್ತನು ಕೃಷ್ಣಪಕ್ಷದ ಇರುಳಿನ ಕತ್ತಲೆಯ ಅರಮನೆಯಂತಿದ್ದ ಕಾಡಿನೊಳಗೆ ಇದ್ದ ಸುಡುಗಾಡಿಗೆ ಹೋದನು. ಎಲ್ಲ ಕಡೆಯೂ ದಟ್ಟವಾದ ಕತ್ತಲೆ ಕವಿದಿತ್ತು. ನರಿಗಳು ಚೆಲ್ಲಾಡಿದ್ದ ಮಾಂಸವು ಅಲ್ಲಿ ಸಂಧ್ಯೆಗೆ ಅರ್ಪಿಸಿದ ಮಹಾಬಲಿಯಂತೆ ಇತ್ತು. ಅಲ್ಲಲ್ಲಿ ಉರಿಯುತ್ತಿದ್ದ ಚಿತೆಗಳ ಬೆಂಕಿಯ ಹೊಳೆಯುವ ದೀಪಗಳು ಅದನ್ನು ಬೆಳಗಿಸುತ್ತಿದ್ದುವು. ವಿಜೃಂಭಿಸುತ್ತಿದ್ದ ಬೇತಾಳಗಳು ಅಲ್ಲಿ ತಾಳವಾದ್ಯಗಳನ್ನು ಬಾರಿಸುತ್ತಿದ್ದುವು.

137. "ರಾಜನಿಂದ ನೀರನ್ನು ಬೇಡಿದವನಾರು" ಎಂದು ಹೇಳುತ್ತಾ ಅವನು ಹೋದಾಗ "ಬೇಡಿದವನು ನಾನು" ಎಂಬ ಮಾತು ಒಂದು ಕಡೆ ಅವನಿಗೆ ಕೇಳಿಸಿತು.

---

ಅದ್ಯಾಪಿ ಚ ನ ನಿರ್ಯಾಂತಿ ಪ್ರಾಣಾ ಮೇ ಪಾಪಕರ್ಮಣಃ ।
ತದ್ದೇವ ತೃಷಿತೋಽರ್ಥಯೆಮಹಂ ದಾಪಯ ಮೇ ಜಲಮ್ ॥ ೧೩೧
ತಚ್ಛ್ರುತ್ವಾ ಕೃಪಯಾ ರಾಜಾ ಸ ಪಾರ್ಶ್ವಸ್ಥಮುವಾಚ ತಮ್ ।
ಅಶೋಕದತ್ತಮಸ್ಯಾಂಭಃ ಪ್ರಹಿಣೋತು ಭವಾನಿತಿ ॥ ೧೩೨
ಕೋಽತ್ರ ರಾತ್ರೌ ವ್ರಜೇದ್ದೇವ ತದ್ ಗಚ್ಛಾಮ್ಯಹಮಾತ್ಮನಾ ।
ಇತ್ಯುಕ್ತ್ವಾಶೋಕದತ್ತಃ ಸ ಗೃಹೀತ್ವಾಂಭಸ್ತತೋ ಯಯೌ ॥ ೧೩೩
ಯಾತೇ ಚ ಸ್ವಪುರೀಂ ರಾಜ್ಞಿ ಸ ವೀರೋ ಗಹನಾಂತರಮ್ ।
ಮಹತ್ತರೇಣ ತಮಸಾ ಸರ್ವತೋಽಂತರಧಿಷ್ಠಿತಮ್ ॥ ೧೩೪
ಶಿವಾವಿಕೀರ್ಣಪಿಶಿತ ಪ್ರತ್ತಸಂಧ್ಯಾಮಹಾಬಲಿ ।
ಕ್ವಚಿತ್ ಕ್ವಚಿಚ್ಚಿತಾಜ್ಯೋತಿರ್ದೀಪ್ರದೀಪಪ್ರಕಾಶಿತಮ್ ॥ ೧೩೫
ಲಸದುತ್ತಾಲವೇತಾಲತಾಲವಾದ್ಯಂ ವಿವೇಶ ತತ್ ।
ಶ್ಮಶಾನಂ ಕೃಷ್ಣರಜನೀನಿವಾಸಭವನೋಪಮಮ್ ॥ ೧೩೬
ಕೇನಾಂಭೋ ಯಾಚಿತಂ ಭೂಪಾದಿತ್ಯುಚ್ಚೈಸ್ತತ್ರ ಸ ಬ್ರುವನ್ ।
ಮಯಾ ಯಾಚಿತಮಿತ್ಯೇವಮಶೃಣೋದ್ವಾಚಮೇಕತಃ ॥ ೧೩೭

138. ಆ ಶಬ್ದವನ್ನನುಸರಿಸಿ ಬಳಿಯಿದ್ದ ಚಿತೆಯ ಬೆಂಕಿಯ ಹತ್ತಿರ ಹೋದ ಅಶೋಕದತ್ತನು ಅಲ್ಲಿ ಶೂಲದ ತುದಿಯಲ್ಲಿ ಚುಚ್ಚಲ್ಪಟ್ಟಿದ್ದ ಒಬ್ಬ ಮನುಷ್ಯನನ್ನು ಕಂಡನು.

139. ಆ ಶೂಲದ ಕೆಳಗೆ ಒಳ್ಳೆಯ ಒಡವೆಗಳಿಂದ ಅಲಂಕೃತಳಾದ, ಹಿಂದೆಂದೂ ಅವನು ನೋಡಿಲ್ಲದ, ಎಲ್ಲ ಅವಯವಗಳಲ್ಲೂ ಚೆಲುವೆಯಾಗಿದ್ದ, ಅಳುತ್ತಿದ್ದ ಒಬ್ಬ ಹೆಂಗಸನ್ನು ಅವನು ಕಂಡನು.

140. ಕೃಷ್ಣಪಕ್ಷದಲ್ಲಿ ಸಣ್ಣಗಾಗಿದ್ದ ಚಂದ್ರನು ಮುಳುಗಿಹೋದಾಗ ಅವನ ಕಿರಣಗಳಿಂದ ಸುಂದರವಾಗಿದ್ದ ರಾತ್ರಿಯು ಚಿತೆಯನ್ನೇರಲು ಅಲ್ಲಿಗೆ ಬಂದಿದ್ದಂತೆ ಅವಳು ಕಾಣಿಸುತ್ತಿದ್ದಳು.

141. "ಅಮ್ಮ, ನೀನು ಯಾರು ? ಏಕೆ ಇಲ್ಲಿ ಅಳುತ್ತಾ ನಿಂತಿರುವೆ ?' ಎಂದು ಅವನು ಕೇಳಿದಾಗ ಆ ಹೆಂಗಸು ಅವನಿಗಿಂತೆಂದಳು.

142. "ಇಲ್ಲಿ ಶೂಲಕ್ಕೆ ಹಾಕಿರುವ ಮನುಷ್ಯನ ಅವಲಕ್ಷಣದ ಹೆಂಡತಿ ನಾನು. ಇವನೊಡನೆ ಚಿತೆಯನ್ನೇರಲು ನಿಶ್ಚಯಿಸಿ ಇಲ್ಲಿ ನಿಂತಿದ್ದೇನೆ.

143. ಸ್ವಲ್ಪ ಹೊತ್ತಿನಲ್ಲೇ ಇವನ ಪ್ರಾಣಗಳು ಹೋಗಬಹುದೆಂದು ನನ್ನ ನಿರೀಕ್ಷೆಯಾಗಿತ್ತು ಆದರೆ ಮೂರು ದಿನಗಳು ಕಳೆದರೂ ಇವನ ಪ್ರಾಣಗಳು ಹೋಗಿಲ್ಲ.

---

ಗತ್ವಾ ತದನುಸಾರೇಣ ನಿಕಟಸ್ಥಂ ಚಿತಾನಲಮ್ ।
ದದರ್ಶ ತತ್ರ ಶೂಲಾಗ್ರೇ ವಿದ್ಧಂ ಕಂಚಿತ್ ಸ ಪೂರುಷಮ್ ॥ ೧೩೮
ಅಧಶ್ಚ ತಸ್ಯ ರುದತೀಂ ಸದಲಂಕಾರಭೂಷಿತಾಮ್ ।
ಅದೃಷ್ಟಪೂರ್ವಾಂ ಸರ್ವಾಂಗಸುಂದರೀಂ ಸ್ತ್ರಿಯಮೈಕ್ಷತ ॥ ೧೩೯
ಕೃಷ್ಣ ಪಕ್ಷಪರಿಕ್ಷೀಣೇ ಗತೇಽಸ್ತಂ ರಜನೀಪತೌ ।
ಚಿತಾರೋಹಾಯ ತದ್ರಶ್ಮಿರಮ್ಯಾಂ ರಾತ್ರಿಮಿವಾಗತಾಮ್ ॥ ೧೪೦
ಕಾ ತ್ವಮಂಬ ಕಥಂ ಚೇಹ ರುದತ್ಯೇವಮವಸ್ಥಿತಾ ।
ಇತಿ ಪೃಷ್ಟಾ ಚ ಸಾ ತೇನ ಯೋಷಿದೇವಂ ತಮಬ್ರವೀತ್ ॥ ೧೪೧
ಅಸ್ಯಾಹಂ ಶೂಲವಿದ್ಧಸ್ಯ ಭಾರ್ಯಾ ವಿಗತಲಕ್ಷಣಾ ।
ನಿಶ್ಚಿತಾಶಾ ಸ್ಥಿತಾಸ್ಮೀಹ ಚಿತಾರೋಹೇ ಸಹಾಮುನಾ ॥ ೧೪೨
ಕಂಚಿತ್ ಕಾಲಂ ಪ್ರತೀಕ್ಷೇ ಚ ಪ್ರಾಣಾನಾಮಸ್ಯ ನಿಷ್ಕ್ರಮಮ್ ।
ತೃತೀಯೇಽಹ್ನಿ ಗತೇಽಪ್ಯದ್ಯ ಯಾಂತ್ಯೇತಸ್ಯ ಹಿ ನಾಸವಃ ॥ ೧೪೩

144. ಮತ್ತೆ ಮತ್ತೆ ಇವನು ನೀರನ್ನು ಕೇಳುತ್ತಾನೆ. ನಾನು ನೀರನ್ನು ತಂದಿದ್ದೇನೆ. ಆದರೆ ಶೂಲವು ಎತ್ತರದಲ್ಲಿದೆ. ಮಿತ್ರನೆ, (ನೀರನ್ನು ಕುಡಿಸಲು) ಅವನ ಬಾಯಿ ನನಗೆ ಎಟುಕದು."

145. ಅವಳ ಮಾತನ್ನು ಕೇಳಿ ವೀರ ಅಶೋಕದತ್ತನು ಅವಳಿಗೆ ಹೀಗೆ ಹೇಳಿದನು. "ರಾಜನೂ ನನ್ನ ಕೈಯಲ್ಲಿ ಈ ನೀರನ್ನು ಕಳುಹಿಸಿದ್ದಾನೆ.

146. ಆದ್ದರಿಂದ ನನ್ನ ಬೆನ್ನಿನ ಮೇಲೆ ಹೆಜ್ಜೆಯನ್ನೂರಿ ಈ ನೀರನ್ನು ಅವನ ಬಾಯಿಗೆ ಹಾಕು. ಆಪತ್ಕಾಲದಲ್ಲಿ ಪರಪುರುಷನನ್ನು ಕೇವಲ ಮುಟ್ಟುವುದು ಹೆಂಗಸರಿಗೆ ದೋಷವಲ್ಲವಷ್ಟೆ"

147. ಇದನ್ನು ಕೇಳಿ ಆಗಲಿ ಎಂದು ಹೇಳಿ ನೀರನ್ನು ತೆಗೆದುಕೊಂಡು, ಶೂಲದ ಬುಡದಬಳಿ ಬಗ್ಗಿದ ಅಶೋಕದತ್ತನ ಬೆನ್ನಮೇಲೆ ಎರಡು ಹೆಜ್ಜೆಯನ್ನಿಟ್ಟು ಅವಳು ಏರಿ ನಿಂತಳು.

148. ಒಂದೇ ಕ್ಷಣದಲ್ಲಿ ಅವನ ಬೆನ್ನಿನ ಮೇಲೆ ಮತ್ತು ಭೂಮಿಯ ಮೇಲೆ ನೆತ್ತರಿನ ಹನಿಗಳು ಸೋರತೊಡಗಿದುವು. ಅದರಲ್ಲಿ ಸಂಶಯವೇ ಇರಲಿಲ್ಲ. ವೀರ ಅಶೋಕದತ್ತನು ಮುಖವನ್ನೆತ್ತಿ ನೋಡಿದನು.

149. ಅಷ್ಟರಲ್ಲಿ ಆ ಹೆಂಗಸು ಶೂಲದ ಮೇಲಿದ್ದ ಮನುಷ್ಯನ ಮಾಂಸಖಂಡಗಳನ್ನು ಚೂರಿಯಿಂದ ಮತ್ತೆ ಮತ್ತೆ ಕುಯ್ದು ತಿನ್ನುತ್ತಿದ್ದುದನ್ನು ಕಂಡನು.

---

ಯಾಚತೇ ಚ ಮುಹುಸ್ತೋಯಮಾನೀತಂ ಚ ಮಯೇಹ ತತ್ ।
ಕಿಂತ್ವಹಂ ನೋನ್ನತೇ ಶೂಲೇ ಪ್ರಾಪ್ನೋಮ್ಯಸ್ಯ ಮುಖಂ ಸಖೇ ॥ ೧೪೪
ಇತಿ ತಸ್ಯಾ ವಚಃ ಶ್ರುತ್ವಾ ಸ ಪ್ರವೀರೋಽಪ್ಯುವಾಚ ತಾಮ್ ।
ಇದಂ ತ್ವಸ್ಯ ನೃಪೇಣಾಪಿ ಹಸ್ತೇ ಮೇ ಪ್ರೇಷಿತಂ ಜಲಮ್ ॥ ೧೪೫
ತನ್ಮೇ ಪೃಷ್ಠೇ ಪದಂ ದತ್ತ್ವಾ ದೇಹ್ಯೇತಸ್ಯೈತದಾನನೇ ।
ನ ಪರಸ್ಪರ್ಶಮಾತ್ರಂ ಹಿ ಸ್ತ್ರೀಣಾಮಾಪದಿ ದೂಷಣಮ್ ॥ ೧೪೬
ಏತಚ್ಛ್ರುತ್ವಾ ತಥೇತ್ಯಾತ್ತಜಲಾ ದತ್ತ್ವಾ ಪದದ್ವಯಮ್ ।
ಶೂಲಮೂಲಾವನಮ್ರಸ್ಯ ಪೃಷ್ಠಂ ತಸ್ಯಾರುರೋಹ ಸಾ ॥ ೧೪೭
ಕ್ಷಣಾದ್ ಭುವಿ ಸ್ವಪೃಷ್ಠೇ ಚ ರಕ್ತಬಿಂದುಷ್ವಶಂಕಿತಮ್ ।
ಪತತ್ಸು ಮುಖಮುನ್ನಮ್ಯ ಸ ವೀರೋ ಯಾವದೀಕ್ಷತೇ ॥ ೧೪೮
ತಾವತ್ ಸ್ತ್ರೀಯಮಪಶ್ಯತ್ತಾಂ ಛಿತ್ತ್ವಾ ಛುರಿಕಯಾ ಮುಹುಃ ।
ಖಾದಂತೀ ತಸ್ಯ ಮಾಂಸಾನಿ ಪುಂಸಃ ಶೂಲಾಗ್ರವರ್ತಿನಃ ॥ ೧೪೯

150. ಅವಳು ಯಾವುದೋ ವಿಕೃತಿ ಎಂದು ಅರಿತು, ಸಿಟ್ಟಿನಿಂದ ಅವಳನ್ನು ನೆಲಕ್ಕೆ (ಕೆಡವಿ) ಎಳೆದು ಎತ್ತಿ ಒಗೆಯಲು ಅಶೋಕದತ್ತನು ನೂಪುರಗಳು ಗುಣಗುಣಿಸುತ್ತಿದ್ದ ಅವಳ ಎರಡು ಪಾದಗಳನ್ನೂ ಹಿಡಿದುಕೊಂಡನು.

151. ಅವಳು ತಟ್ಟನೆ ಬಲವಾಗಿ ತನ್ನ ಕಾಲನ್ನು ಎಳೆದುಕೊಂಡು ಮಾಯೆಯಿಂದ ಆಕಾಶಕ್ಕೆ ಹಾರಿ ಎಲ್ಲೋ ಕಣ್ಮರೆಯಾದಳು.

152. ಅವಳ ಪಾದದಲ್ಲಿದ್ದ ರತ್ನಖಚಿತವಾದ ನೂಪುರವು ಅವನು ಸೆಳೆದಾಗ ಜಾರಿಬಿದ್ದು ಅವನ ಕೈಯ ಮಧ್ಯದಲ್ಲಿ ಉಳಿಯಿತು.

153–154. ಆ ಹೆಂಗಸು ದುಷ್ಟರ ಗೆಳೆತನದಂತೆ ಮೊದಲು ಭಯಂಕರಳೂ ಮಧ್ಯದಲ್ಲಿ ಕೆಳಗೆ ತಳ್ಳುವವಳೂ ಕೊನೆಯಲ್ಲಿ ವಿಕಾರದಿಂದ ಘೋರಳೂ ಆಗಿ ಅದೃಶ್ಯಳಾದಳು ಎಂದು ಚಿಂತಿಸುತ್ತಾ, ಕೈಗೆ ಸಿಕ್ಕಿದ ದಿವ್ಯವಾದ ನೂಪುರವನ್ನು ನೋಡುತ್ತಾ ಆ ಅಶೋಕದತ್ತನು ವಿಸ್ಮಯ, ಸಂತಾಪ ಮತ್ತು ಹರ್ಷಗಳನ್ನು ಅನುಭವಿಸಿದನು.

155. ಅನಂತರ ಅವನು ನೂಪುರವನ್ನು ತೆಗೆದುಕೊಂಡು ಆ ಸುಡುಗಾಡಿನಿಂದ ಹೊರಟು ತನ್ನ ಮನೆಗೆ ಹೋದನು. ಬೆಳಗಾದ ಮೇಲೆ ಮಿಂದು ಅರಮನೆಗೆ ತೆರಳಿದನು.

156. "ಆ ಶೂಲಕ್ಕೆ ಹಾಕಿದ್ದವನಿಗೆ ನೀರನ್ನು ಕೊಟ್ಟೆಯಾ ?' ಎಂದು ಕೇಳಿದ ರಾಜನಿಗೆ ಕೊಟ್ಟೆ ಎಂದು ಹೇಳಿ ಆ ನೂಪುರವನ್ನು ಅರ್ಪಿಸಿದನು.

---

ತತಸ್ತಾಂ ವಿಕೃತಿಂ ಮತ್ವಾ ಕ್ರೋಧಾದಾಕೃಷ್ಯ ಚ ಕ್ಷಿತೌ ।
ಆಸ್ಫೋಟಯಿಷ್ಯನ್ ಜಗ್ರಾಹ ಪಾದೇ ರಣಿತನೂಪುರೇ ॥ ೧೫೦

ಸಾಪಿ ತಂ ತರಸಾ ಪಾದಾವುತ್‌ಕ್ಷಿಪ್ಯೈವ ಸ್ವಮಾಯಯಾ ।
ಕ್ಷಿಪ್ರಂ ಗಗನಮುತ್ಪತ್ಯ ಜಗಾಮ ಕ್ವಾಪ್ಯದರ್ಶನಮ್ ॥ ೧೫೧

ತಸ್ಯ ಚಾಶೋಕದತ್ತಸ್ಯ ತತ್‌ಪಾದಾನ್ಮಣಿನೂಪುರಮ್ ।
ತಸ್ಮಾದಾಕರ್ಷಣಸ್ರಸ್ತಮುವತಸ್ಥೇ ಕರಾಂತರೇ ॥ ೧೫೨

ತತಸ್ತಾಂ ಪೇಶಲಾಮಾದಾವಧಃ ಕರ್ತ್ರೀಂ ಚ ಮಧ್ಯತಃ ।
ಅಂತೇ ವಿಕಾರಘೋರಾಂ ಚ ದುರ್ಜನೈರಿವ ಸಂಗತಿಮ್ ॥ ೧೫೩

ನಷ್ಟಾಂ ವಿಚಿಂತಯನ್ ಪಶ್ಯನ್ ಹಸ್ತೇ ದಿವ್ಯಂ ಚ ನೂಪುರಮ್ ।
ಸವಿಸ್ಮಯಃ ಸಾಭಿತಾಪಃ ಸಹರ್ಷಶ್ಚ ಬಭೂವ ಸಃ ॥ ೧೫೪

ತತಃ ಶ್ಮಶಾನತಸ್ತಸ್ಮಾತ್ ಸ ಜಗಾಮಾತ್ತನೂಪುರಃ ।
ನಿಜಗೇಹಂ ಪ್ರಭಾತೇ ಚ ಸ್ನಾತೋ ರಾಜಕುಲಂ ಯಯೌ ॥ ೧೫೫

ಕಿಂ ತಸ್ಯ ಶೂಲವಿದ್ಧಸ್ಯ ದತ್ತಂ ವಾರೀತಿ ಪೃಚ್ಛತೇ ।
ರಾಜ್ಞೇ ಸ ಚ ತಥೇತ್ಯುಕ್ತ್ವಾ ತಂ ನೂಪುರಮುಪಾನಯತ್ ॥ ೧೫೬

157. "ಇದೆಲ್ಲಿಂದ ಬಂದಿತು ?' ಎಂದು ಸಹಜವಾಗಿ ರಾಜನು ಕೇಳಲು ಅವನಿಗೆ ಆ ರಾತ್ರಿಯ ಆಶ್ಚರ್ಯಕರವೂ ಭಯಂಕರವೂ ಆದ ವೃತ್ತಾಂತವನ್ನು ಹೇಳಿದನು.
158. ಬೇರೆ ಯಾರಲ್ಲೂ ಕಾಣದ ಅಶೋಕದತ್ತನ ಬಲವನ್ನು ಅರಿತುಕೊಂಡು ಸಂತೋಷಿಸಿದ ರಾಜನು ಬೇರೆಯ ಗುಣಗಳಲ್ಲೂ ಅವನ ಅಗ್ಗಳಿಕೆಯನ್ನು ಕಂಡು ಮತ್ತೂ ಹೆಚ್ಚು ಸಂತೋಷಪಟ್ಟನು.
159. ರಾಜನು ಆ ನೂಪುರವನ್ನು ತೆಗೆದುಕೊಂಡು ಹೋಗಿ ತಾನೇ ಪಟ್ಟದರಾಣಿಗೆ ಸಂತುಷ್ಟನಾಗಿ ಕೊಟ್ಟನು. ಅದು ಹೇಗೆ ಸಿಕ್ಕಿತೆಂಬ ವೃತ್ತಾಂತವನ್ನೂ ಅವಳಿಗೆ ಬಣ್ಣಿಸಿದನು.
160. ಆ ವೃತ್ತಾಂತವನ್ನು ತಿಳಿದು ಆ ದಿವ್ಯವಾದ ಮಣಿನೂಪುರವನ್ನು ನೋಡಿ, ಅಶೋಕದತ್ತನನ್ನು ಹೊಗಳುತ್ತಾ ಏಕಾಂತದಲ್ಲಿ ಅವಳು ಆನಂದಿಸಿದಳು.
161. ಆಮೇಲೆ ರಾಜನು ಅವಳಿಗೆ ಹೀಗೆ ಹೇಳಿದನು. "ದೇವಿ, ಜಾತಿಯಿಂದ ಹೇಗೋ ಹಾಗೆ ವಿದ್ಯೆಯಿಂದಲೂ, ಸತ್ವದಿಂದ ಹೇಗೋ ಹಾಗೆ ರೂಪದಿಂದಲೂ ಇವನು ದೊಡ್ಡವರಿಗಿಂತಲೂ ದೊಡ್ಡವನು.
162. ಈ ಅಶೋಕದತ್ತನು ಭವ್ಯಗುಣಗಳನ್ನು ಹೊಂದಿರುವ ನಮ್ಮ ಮಗಳಾದ ಮದನರೇಖೆಯ ಪತಿಯಾದರೆ, ಅದು ಮಂಗಳಕರ ಎಂದು ನನ್ನ ಅನಿಸಿಕೆ.

---

ಏತತ್ ಕುತ ಇತಿ ಸ್ವೈರಂ ಪೃಷ್ಟಸ್ತೇನ ಸ ಭೂಭೃತಾ ।
ತಸ್ಮೈ ಸ್ವರಾತ್ರಿವೃತ್ತಾಂತಂ ಶಶಂಸಾದ್ಭುತಭೀಷಣಮ್ ॥ ೧೫೭
ತತಶ್ಚಾನನ್ಯಸಾಮಾನ್ಯಂ ಸತ್ತ್ವಂ ತಸ್ಯಾವಧಾರ್ಯ ಸಃ ।
ತುಷ್ಟೋಽಪ್ಯನ್ಯಗುಣೋತ್ಕರ್ಷಾತ್ ತುತೋಷ ಸುತರಾಂ ನೃಪಃ ॥ ೧೫೮
ಗೃಹೀತ್ವಾ ನೂಪುರಂ ತಂ ಚ ಗತ್ವಾ ದೇವ್ಯೈ ದದೌ ಸ್ವಯಮ್ ।
ಹೃಷ್ಟಸ್ತತ್ಪ್ರಾಪ್ತಿವೃತ್ತಾಂತಂ ತಸ್ಯೈ ಚ ಸಮವರ್ಣಯತ್ ॥ ೧೫೯
ಸಾ ತದ್ ಬುದ್ಧ್ವಾ ಚ ದೃಷ್ಟ್ವಾ ಚ ತಂ ದಿವ್ಯಂ ಮಣಿನೂಪುರಮ್ ।
ಅಶೋಕದತ್ತಶ್ಲಾಘೈಕತತ್ಪರಾ ಮುಮುದೇ ರಹಃ ॥ ೧೬೦
ತತೋ ಜಗಾದ ತಾಂ ರಾಜಾ ದೇವಿ ಜಾತ್ಯೇವ ವಿದ್ಯಯಾ ।
ಸತ್ತ್ವೇನೇವ ಚ ರೂಪೇಣ ಮಹತಾಮಪ್ಯಯಂ ಮಹಾನ್ ॥ ೧೬೧
ಅಶೋಕದತ್ತೋ ಭವ್ಯಾಯಾ ಭರ್ತಾ ಚ ದುಹಿತುರ್ಯದಿ ।
ಭವೇನ್ಮದನಲೇಖಾಯಾಸ್ತದ್ ಭದ್ರಮಿತಿ ಮೇ ಮತಿಃ ॥ ೧೬೨

163. ವರನ ಗುಣಗಳನ್ನು ನೋಡಬೇಕು. ಕ್ಷಣಮಾತ್ರದಲ್ಲಿ ನಾಶ ಹೊಂದುವ ಲಕ್ಷ್ಮಿಯನ್ನು ನೋಡಬಾರದು. ಆದ್ದರಿಂದ ಈ ಶ್ರೇಷ್ಠ ವೀರನಿಗೆ ನಾನು ನನ್ನ ಮಗಳನ್ನು ಕೊಡುತ್ತೇನೆ."

164. ಗಂಡನ ಮಾತುಗಳನ್ನು ಕೇಳಿದ ರಾಣಿಯು ಆದರಪೂರ್ವಕವಾಗಿ ಹೇಳಿದಳು "ಆ ಅನುರೂಪನಾದ ಯುವಕನು ಇವಳ ಪತಿಯಾಗುವುದು ಯುಕ್ತ

165. ವಸಂತೋದ್ಯಾನದಲ್ಲಿ ಅವನನ್ನು ನೋಡಿ ಅವಳೂ ತನ್ನ ಮನಸ್ಸನ್ನು ಕಳೆದುಕೊಂಡಿದ್ದಾಳೆ. ಅವಳ ಹೃದಯವೇ ಈಗ ಶೂನ್ಯವಾಗಿರುವುದರಿಂದ ಅವಳು ಏನನ್ನೂ ಕೇಳಿಸಿಕೊಳ್ಳುತ್ತಿಲ್ಲ, ನೋಡುತ್ತಲೂ ಇಲ್ಲ.

166. ಅವಳ ಸಖಿಯರಿಂದ ಅದನ್ನು ತಿಳಿದುಕೊಂಡು ನಾನು ಚಿಂತಿಸುತ್ತಾ ಮಲಗಿದ್ದಾಗ ಇರುಳಿನ ಕೊನೆಯ ಭಾಗದಲ್ಲಿ ಸ್ವಪ್ನನಾಗಿ ಅದರಲ್ಲಿ ಯಾವಳೋ ದೇವಲೋಕದ ಹೆಣ್ಣು ನನಗೆ ಹೀಗೆ ಹೇಳಿದ ಹಾಗಾಯಿತು.

167. "ಮಗಳೆ, ಈ ಕನ್ಯೆ ಮದನಲೇಖೆಯನ್ನು ಬೇರೆ ಯಾರಿಗೂ ಕೊಡಕೂಡದು. ಇವಳು ಜನ್ಮಾಂತರದಲ್ಲಿ ಅಶೋಕದತ್ತನು ಗಳಿಸಿಕೊಂಡ ಮಡದಿ.'

168. ಅದನ್ನು ಕೇಳಿ ಎದ್ದವಳೇ ಬೆಳಗಿನ ಜಾವದಲ್ಲೇ ಹೋಗಿ ನಾನೇ ಆ ಮಾತಿನಲ್ಲಿದ್ದ ನಂಬಿಕೆಯಿಂದ ಮುದ್ದುಮಗಳನ್ನು ಸಮಾಧಾನಪಡಿಸಿದೆನು.

---

ವರಸ್ಯಾಮೀ ಗುಣಾಃ ಪ್ರೇಕ್ಷ್ಯಾ ನ ಲಕ್ಷ್ಮೀಃ ಕ್ಷಣಭಂಗಿನೀ ।
ತದೇತಸ್ಮೈ ಪ್ರವೀರಾಯ ದದಾಮ್ಯೇತಾಂ ಸುತಾಮಹಮ್ ॥ ೧೬೩
ಇತಿ ಭರ್ತುರ್ವಚಃ ಶ್ರುತ್ವಾ ದೇವೀ ಸಾ ಸಾದರಾವದತ್ ।
ಯುಕ್ತಮೇತದಸೌ ಹ್ಯಸ್ಯಾಃ ಯುವಾ ಭರ್ತಾನುರೂಪಕಃ ॥ ೧೬೪
ಸಾ ಚ ತೇನ ಮಧೂದ್ಯಾನದೃಷ್ಟೇನ ಹೃತಮಾನಸಾ ।
ಶೂನ್ಯಾಶಯಾ ದಿನೇಷ್ವೇಷು ನ ಶೃಣೋತಿ ನ ಪಶ್ಯತಿ ॥ ೧೬೫
ತತ್‌ಸಖೀಭ್ಯಶ್ಚ ತದ್‌ಬುದ್ಧ್ವಾ ಸಚಿಂತಾಹಂ ನಿಶಾಕ್ಷಯೇ ।
ಸುಪ್ತಾ ಜಾನೇ ಸ್ತ್ರಿಯಾ ಸ್ವಪ್ನೇ ಕಯಾಪ್ಯುಕ್ತಾಸ್ಮಿ ದಿವ್ಯಯಾ ॥ ೧೬೬
ವತ್ಸೇ ಮದನಲೇಖೇಯಂ ದೇಯಾನ್ಯಸ್ಮೈ ನ ಕನ್ಯಕಾ ।
ಏಷಾ ಹ್ಯಶೋಕದತ್ತಸ್ಯ ಭಾರ್ಯಾ ಜನ್ಮಾಂತರಾರ್ಜಿತಾ ॥ ೧೬೭
ತಚ್ಚ ಶ್ರುತ್ವಾ ಪ್ರಬುಧ್ಯೈವ ಗತ್ವಾ ಪ್ರತ್ಯೂಷ ಏವ ಚ ।
ಸ್ವಯಂ ತತ್‌ಪ್ರತ್ಯಯಾದ್ ವತ್ಸಾಂ ಸಮಾಶ್ವಾಸಿತವತ್ಯಹಮ್ ॥ ೧೬೮

169. ಈಗ ಆರ್ಯಪುತ್ರನೇ ಸ್ವಯಂ ನನಗೆ ಹೇಳಿದ್ದಾನೆ. ಆದ್ದರಿಂದ ಋತುಕಾಲದಲ್ಲಿರುವ ಬಳ್ಳಿ ಮರವನ್ನು ಅಪ್ಪುವಂತೆ ಅವಳು ಅವನೊಡನೆ ಸೇರಲಿ."

170. ಹೀಗೆ ರಾಣಿಯು ಹೇಳಿದಾಗ ರಾಜನು ಸಂತುಷ್ಟನಾಗಿ ಉತ್ಸವವನ್ನು ಆಚರಿಸಿ ಅಶೋಕದತ್ತನನ್ನು ಕರೆದು ಅವನಿಗೆ ತನ್ನ ಮಗಳನ್ನು ಕೊಟ್ಟನು.

171. ಆ ರಾಜೇಂದ್ರನ ಮಗಳಿಗೂ ಆ ವಿಪ್ರಶ್ರೇಷ್ಠನ ಮಗನಿಗೂ ಉಂಟಾದ ಮಿಲನವು ಸಿರಿವಂತಿಕೆ ಮತ್ತು ವಿನಯಗಳ ಸಂಗಮದಂತೆ ಪರಸ್ಪರ ಶೋಭೆಗೆ ಕಾರಣವಾಯಿತು.

172. ಆಮೇಲೆ ಒಮ್ಮೆ ರಾಣಿಯು ಅಶೋಕದತ್ತನು ತಂದುಕೊಟ್ಟಿದ್ದ ಮಣಿನೂಪುರದ ಬಗೆಗೆ ರಾಜನಿಗೆ ಹೇಳಿದಳು.

173. "ಆರ್ಯಪುತ್ರ, ಈ ಒಂಟಿ ನೂಪುರವು ಚೆನ್ನಾಗಿ ಕಾಣಿಸುವುದಿಲ್ಲ. ಇದಕ್ಕೆ ಹೊಂದಿಕೊಳ್ಳುವ ಇನ್ನೊಂದು ನೂಪುರವನ್ನು ಮಾಡಿಸು.'

174. ಅದನ್ನು ಕೇಳಿ ರಾಜನು ಅಕ್ಕಸಾಲಿಗರನ್ನು ಕರೆಸಿ "ಈ ನೂಪುರದಂಥ ಇನ್ನೊಂದು ನೂಪುರವನ್ನು ಮಾಡಿರಿ" ಎಂದು ಆದೇಶವನ್ನಿತ್ತನು.

175. ಅವರು ಅದನ್ನು ಪರೀಕ್ಷೆ ಮಾಡಿ "ದೇವ, ಈ ತರಹದ ಇನ್ನೊಂದನ್ನು ಮಾಡಲು ನಮಗೆ ಆಗದು. ಇದು ದೇವತೆಗಳು ಮಾಡಿದ ಶಿಲ್ಪ, ಮನುಷ್ಯರು ಮಾಡಿದುದಲ್ಲ" ಎಂದು ಹೇಳಿದರು.

---

ಇದಾನೀಂ ಚಾರ್ಯಪುತ್ರೇಣ ಸ್ವಯಮೇವ ಮಮೋದಿತಮ್ ।
ತಸ್ಮಾತ್ ಸಮೇತು ತೇನಾಸೌ ವೃಕ್ಷೇಣೇವಾರ್ತವೀ ಲತಾ ॥ ೧೬೯

ಇತ್ಯುಕ್ತಃ ಪ್ರಿಯಯಾ ಪ್ರೀತಃ ಸ ರಾಜಾ ರಚಿತೋತ್ಸವಃ ।
ಆರ್ಯಾಯಾಶೋಕದತ್ತಾಯ ತಸ್ಮೈ ತಾಂ ತನಯಾಂ ದದೌ ॥ ೧೭೦

ತಯೋಶ್ಚ ಸೋಽಭೂದ್ರಾಜೇಂದ್ರಪುತ್ರೀವಿಪ್ರೇಂದ್ರಪುತ್ರಯೋಃ ।
ಸಂಗಮೋಽನ್ಯೋನ್ಯಶೋಭಾಯೈ ಲಕ್ಷ್ಮೀವಿನಯಯೋರಿವ ॥ ೧೭೧

ತತಃ ಕದಾಚಿದ್ರಾಜಾನಂ ತಂ ದೇವೀ ವದತಿ ಸ್ಮ ಸಾ ।
ಅಶೋಕದತ್ತಾನೀತಂ ತದುದ್ದಿಶ್ಯ ಮಣಿನೂಪುರಮ್ ॥ ೧೭೨

ಆರ್ಯಪುತ್ರಾಯಮೇಕಾಕೀ ನೂಪುರೋ ನ ವಿರಾಜತೇ ।
ಅನುರೂಪಸ್ತದೇತಸ್ಯ ದ್ವಿತೀಯಃ ಪರಿಕಲ್ಪ್ಯತಾಮ್ ॥ ೧೭೩

ತಚ್ಛ್ರುತ್ವಾ ಹೇಮಕಾರಾದೀನ್ ಆದಿದೇಶ ಸ ಭೂಪತಿಃ ।
ನೂಪುರಸ್ಯಾಸ್ಯ ಸದೃಶೋ ದ್ವಿತೀಯಃ ಕ್ರಿಯತಾಮಿತಿ ॥ ೧೭೪

ತೇ ತನ್ನಿರೂಪ್ಯ ಜಗದುರ್ನೇದೃಶೋ ದೇವ ಶಕ್ಯತೇ ।
ಅಪರಃ ಕರ್ತುಮೇತದ್ಧಿ ದಿವ್ಯಂ ಶಿಲ್ಪಂ ನ ಮಾನುಷಮ್ ॥ ೧೭೫

176. "ಇಂಥ ರತ್ನಗಳೂ ಈ ಭೂಲೋಕದಲ್ಲಿ ಹೆಚ್ಚಾಗಿ ಸಿಕ್ಕುವುದಿಲ್ಲ. ಆದ್ದರಿಂದ ಈ ನೂಪುರ ಎಲ್ಲಿ ಸಿಕ್ಕಿತೋ ಅಲ್ಲೇ ಹುಡುಕಬೇಕು" ಎಂದೂ ನುಡಿದರು.

177. ಅದನ್ನು ಕೇಳಿ ರಾಣಿಯೂ ರಾಜನೂ ವಿಷಣ್ಣರಾದರು. ಅವರನ್ನು ನೋಡಿ ಅಲ್ಲಿದ್ದ ಅಶೋಕದತ್ತನು ಆಗಲೇ ತಟ್ಟನೆ ಹೀಗೆ ಹೇಳಿದನು.

178–179. "ನಾನೇ ಈ ನೂಪುರದ ಜೊತೆಯನ್ನು ನಿಮಗಾಗಿ ತರುತ್ತೇನೆ". ಹೀಗೆ ಅವನು ಪ್ರತಿಜ್ಞೆ ಮಾಡಿದಾಗ ಅವನೇನು ದುಡುಕಿ ಸಾಹಸ ಮಾಡಿ ಬಿಡುವನೋ ಎಂದು ರಾಜನು ಅವನಲ್ಲಿದ್ದ ಪ್ರೀತಿಯಿಂದ ತಡೆದನು. ಆದರೂ ಅಶೋಕದತ್ತನು ತನ್ನ ತೀರ್ಮಾನದಿಂದ ಹಿಂದೆ ಸರಿಯಲಿಲ್ಲ. ಆ ನೂಪುರವನ್ನು ತೆಗೆದುಕೊಂಡು ಮತ್ತೆ ಆ ಸುಡುಗಾಡಿಗೆ ಹೋದನು.

180–181–182. ಕೃಷ್ಣಪಕ್ಷದ ಚತುರ್ದಶಿಯ ಇರುಳಲ್ಲಿ ಆ ನೂಪುರವು ಎಲ್ಲಿ ಸಿಕ್ಕಿತೋ ಅಲ್ಲೇ ಅವನು ಒಳಗೆ ಹೊಕ್ಕನು. ಚಿತೆಗಳ ದಟ್ಟವಾದ ಹೊಗೆಯಿಂದ ಅಲ್ಲಿದ್ದ ಮರಗಳು ಕೊಳಕಾಗಿದ್ದುವು. ಅವುಗಳ ಕಾಂಡಗಳಲ್ಲಿ ನೇಣುಹಾಕಿದ್ದ ಮನುಷ್ಯರ ದೇಹಗಳು ನೇತಾಡುತ್ತಿದ್ದುವು. ಇದರಿಂದ ರಾಕ್ಷಸರಂತೆ ಕಾಣಿಸುತ್ತಿದ್ದ ಆ ಮರಗಳಿಂದ ಸ್ಮಶಾನ ತುಂಬಿತ್ತು. ಅಲ್ಲಿ ಅಶೋಕದತ್ತನು ತಾನು ಹಿಂದೆ ಕಂಡಿದ್ದ ಹೆಂಗಸನ್ನು ಮತ್ತೆ ಕಾಣಲಿಲ್ಲ. ಆ ನೂಪುರವು ಸಿಗುವುದಕ್ಕೆ ಮನುಷ್ಯರ ಮಾಂಸವನ್ನು ಮಾರುವುದೇ ಉಪಾಯವೆಂದು ಅವನಿಗೆ ಅನ್ನಿಸಿತು.

---

ರತ್ನಾನೀದೃಂಶಿ ಭೂಯಾಂಸಿ ನ ಭವಂತ್ಯೇವ ಭೂತಲೇ ।
ತಸ್ಮಾದೇಷ ಯತ; ಪ್ರಾಪ್ತಸ್ತತ್ರೈವಾನ್ಯೋ ಗವೇಷ್ಯತಾಮ್ ॥ ೧೭೬
ಏತಚ್ಛ್ರುತ್ವಾ ಸದೇವೀಕೇ ವಿಷಣ್ಣೇ ರಾಜ್ಞಿ ತತ್ಕ್ಷಣಮ್ ।
ಅಶೋಕದತ್ತಸ್ತತ್ರಸ್ಥಸ್ತದ್ ದೃಷ್ಟ್ವಾ ಸಹಸಾಬ್ರವೀತ್ ॥ ೧೭೭
ಅಹಮೇವಾನಯಾಮ್ಯಸ್ಯ ದ್ವಿತೀಯಂ ನೂಪುರಸ್ಯ ತೇ ।
ಏವಂ ಕೃತಪ್ರತಿಜ್ಞಶ್ಚ ರಾಜ್ಞಾ ಸಾಹಸಶಂಕಿನಾ ॥ ೧೭೮
ಸ್ನೇಹಾನ್ನಿವಾರ್ಯಮಾಣೋಽಪಿ ನಿಶ್ಚಯಾನ್ನ ಚಚಾಲ ಸಃ ।
ಗೃಹೀತ್ವಾ ನೂಪುರಂ ತಚ್ಚ ಶ್ಮಶಾನಂ ಸ ಪುನರ್ಯಯೌ ॥ ೧೭೯
ಪ್ರವಿಶ್ಯ ತತ್ರ ಚ ಪ್ರಾಜ್ಯಚಿತಾಧೂಮಮಲೀಮಸೈಃ ॥ ೧೮೦
ಪಾಶೋಪವೇಷ್ಟಿತಗಲಸ್ಕಂಧೋಲ್ಲಂಬಿತಮಾನುಷೈಃ ।
ಪಾದಪೈರಿವ ರಕ್ಷೋಭಿರಾಕೀರ್ಣೇ ಪಿತೃಕಾನನೇ ॥ ೧೮೧
ಅಪಶ್ಯನ್ ಪೂರ್ವದೃಷ್ಟಾಂ ತಾಂ ಸ್ತ್ರಿಯಂ ತನ್ನೂಪುರಾಪ್ತಯೇ ।
ಉಪಾಯಮೇಕಂ ಬುಬುಧೇ ಸ ಮಹಾಮಾಂಸವಿಕ್ರಯಮ್ ॥ ೧೮೨

183. ಮರಕ್ಕೆ ಹಾಕಿದ್ದ ನೇಣಿನಿಂದ ಒಂದು ಹೆಣವನ್ನು ತೆಗೆದುಕೊಂಡು 'ಮನುಷ್ಯ ಮಾಂಸವನ್ನು ಕೊಂಡುಕೊಳ್ಳಿರಿ' ಎಂದು ಜೋರಾಗಿ ಕೂಗುತ್ತಾ ಅದನ್ನೇ ಮಾರುವವನಾಗಿ ಅಲ್ಲಿ ಅಲೆದಾಡಿದನು.

184. "ಮಹಾನುಭಾವನೆ, ಅದನ್ನು ತೆಗೆದುಕೊಂಡು ನನ್ನ ಜೊತೆಯಲ್ಲಿ ಈ ಕಡೆಗೆ ಬಾ" ಎಂದು ಕ್ಷಣಮಾತ್ರದಲ್ಲಿ ದೂರದಿಂದ ಯಾವಳೋ ಹೆಂಗಸು ಅವನಿಗೆ ಹೇಳಿದಳು.

185. ಆ ಮಾತನ್ನು ಕೇಳಿ ಹಾಗೇ ಆಗಲಿ ಎಂದು ಅದೇ ದಾರಿಯಲ್ಲಿ ಅವಳನ್ನು ಹಿಂಬಾಲಿಸಿಕೊಂಡು ಹೋಗಿ ಅಶೋಕದತ್ತನು ಹತ್ತಿರದಲ್ಲೇ ಮರದ ಕೆಳಗೆ ಒಬ್ಬ ದಿವ್ಯರೂಪದ ಹೆಂಗಸನ್ನು ಕಂಡನು.

186. ಅನೇಕ ಸ್ತ್ರೀಯರು ಅವಳ ಸುತ್ತಲೂ ಇದ್ದರು. ಅವಳು ಪೀಠದ ಮೇಲೆ ಕುಳಿತಿದ್ದಳು. ರತ್ನಗಳ ಒಡವೆಗಳಿಂದ ಅವಳು ಕಂಗೊಳಿಸುತ್ತಿದ್ದಳು. ಮರಳುಗಾಡಿನಲ್ಲಿ ತಾವರೆಯ ಕೊಳದಂತೆ ಅಲ್ಲಿ ಅವಳು ಇರುವುದೂ ಅಸಂಭವವಾಗಿತ್ತು.

187. ಆ ಹೆಂಗಸು ಇವನನ್ನು ಅವಳ ಬಳಿಗೆ ಒಯ್ದಳು. ಅವನು "ಮನುಷ್ಯ ಮಾಂಸವನ್ನು ಮಾರುತ್ತಿದ್ದೇನೆ, ತೆಗೆದುಕೊಳ್ಳಿ" ಎಂದು ಹೇಳಿದನು.

188. ಆ ದಿವ್ಯರೂಪದ ಹೆಣ್ಣು "ಮಹಾನುಭಾವನೆ, ನೀನು ಅದನ್ನು ಯಾವ ಬೆಲೆಗೆ ಕೊಡುವೆ" ಎಂದು ಆಗ ಅವನನ್ನು ಕೇಳಿದಳು.

---

ತರುಪಾಶಾದ್ ಗೃಹೀತ್ವಾಥ ಶವಂ ಬಭ್ರಾಮ ತತ್ರ ಸಃ ।
ವಿಕ್ರೀಣಾನೋ ಮಹಾಮಾಂಸಂ ಗೃಹ್ಯತಾಮ್ ಇತಿ ಘೋಷಯನ್ ॥ ೧೮೩
ಮಹಾಸತ್ತ್ವ ಗೃಹೀತ್ವೈತದೇಹಿ ತಾವನ್ಮಯಾ ಸಹ ।
ಇತಿ ಕ್ಷಣಾಚ್ಚ ಜಗದೇ ಸ ದೂರಾದೇಕಯಾ ಸ್ತ್ರಿಯಾ ॥ ೧೮೪
ತಚ್ಛ್ರುತ್ವಾ ಸ ತಥೈವೈತಾಮುಪೇತ್ಯಾನುಸರನ್ ಸ್ತ್ರಿಯಮ್ ।
ಆರಾತ್ತರುತಲೇ ದಿವ್ಯರೂಪಾಂ ಯೋಷಿತಮೈಕ್ಷತ ॥ ೧೮೫
ಸ್ತ್ರೀಭಿರ್ವೃತಾಮಾಸನಸ್ಥಾಂ ರತ್ನಾಭರಣಭಾಸುರಾಮ್ ।
ಅಸಂಭಾವ್ಯಸ್ಥಿತಿಂ ತತ್ರ ಮರಾವಂಭೋಜಿನೀಮಿವ ॥ ೧೮೬
ಸ್ತ್ರಿಯಾ ತಯೋಪನೀತಶ್ಚ ತಾಮುಪೇತ್ಯ ತಥಾ ಸ್ಥಿತಾಮ್ ।
ನೃಮಾಂಸಮಸ್ಮಿ ವಿಕ್ರೀಣೇ ಗೃಹ್ಯತಾಮಿತ್ಯುವಾಚ ಸಃ ॥ ೧೮೭
ಭೋ ಮಹಾಸತ್ತ್ವ ಮೂಲ್ಯೇನ ಕೇನೈತದ್ದೀಯತೇ ತ್ವಯಾ ।
ಇತಿ ಸಾಪಿ ತದಾಹ ಸ್ಮ ದಿವ್ಯರೂಪಾ ಕಿಲಾಂಗನಾ ॥ ೧೮೮

189. ಹೆಗಲು ಮತ್ತು ಬೆನ್ನುಗಳ ಮೇಲೆ ಹೆಣವನ್ನು ಹೊತ್ತುಕೊಂಡಿದ್ದ ಆ ವೀರ ಅಶೋಕದತ್ತನು ಕೈಯಲ್ಲಿದ್ದ ಮಣಿನೂಪುರವನ್ನು ತೋರಿಸಿ ಅವಳಿಗೆ ಹೀಗೆ ಹೇಳಿದನು.

190. "ಯಾರು ನನಗೆ ಇದರಂತೆಯೇ ಇರುವ, ಇದರ ಜೋಡಿಯಾದ ನೂಪುರವನ್ನು ಕೊಡುವರೋ ಅವರಿಗೆ ಈ ಮಾಂಸವನ್ನು ಕೊಡುತ್ತೇನೆ. ಅದು ಇದ್ದರೆ, ಇದನ್ನು ತೆಗೆದುಕೊಳ್ಳಿ".

191. ಅದನ್ನು ಕೇಳಿ ಆ ದಿವ್ಯರೂಪದ ಹೆಣ್ಣಿತೆಂದಳು. "ನನ್ನ ಇನ್ನೊಂದು ನೂಪುರವಿದೆ ನನ್ನದೇ ಇನ್ನೊಂದು ನೂಪುರವನ್ನು ನೀನು ಎತ್ತಿಕೊಂಡು ಹೋಗಿರುವೆ.

192. ಶೂಲಕ್ಕೆ ಏರಿಸಲ್ಪಟ್ಟಿದ್ದವನ ಪಕ್ಕದಲ್ಲಿ ನೀನು ಯಾರನ್ನು ನೋಡಿದ್ದೆಯೋ ಅವಳೇ ನಾನು. ನಾನು ಬೇರೆ ರೂಪವನ್ನು ಧರಿಸಿರುವುದರಿಂದ ಈಗ ನಿನಗೆ ನನ್ನ ಗುರುತು ಸಿಕ್ಕಲಿಲ್ಲ.

193. ಅದೇಕೆ ಈಗ ? ಈ ಮಾಂಸದಿಂದ ನಾನು ಹೇಳಿದುದನ್ನು ನೀನು ಮಾಡುವೆಯಾದರೆ, ನಿನಗೆ ಇನ್ನೊಂದು ನೂಪುರವನ್ನು ಕೊಡುತ್ತೇನೆ."

194. ಹೀಗೆ ಅವಳು ಹೇಳಿದಾಗ ಅದಕ್ಕೆ ಒಪ್ಪಿಕೊಂಡು "ನೀನು ಏನನ್ನು ಹೇಳುವೆಯೋ ಅದನ್ನು ಕ್ಷಣಮಾತ್ರದಲ್ಲಿ ಮಾಡುವೆನು" ಎಂದು ಆ ವೀರ ಅಶೋಕದತ್ತನು ನುಡಿದನು.

---

ತತಃ ಸ ವೀರೋ ಹಸ್ತಸ್ಥಂ ತಮೇಕಂ ಮಣಿನೂಪುರಮ್ ।
ಸಂದರ್ಶ್ಯ ಸ್ಕಂಧಪೃಷ್ಠಪ್ರೇತಕಾಯೋ ಜಗಾದ ತಾಮ್ ॥ ೧೮೯
ಯೋ ದದಾತ್ಯಸ್ಯ ಸದೃಶಂ ದ್ವಿತೀಯಂ ನೂಪುರಸ್ಯ ಮೇ ।
ಮಾಂಸಂ ತಸ್ಯ ದದಾಮ್ಯೇತದಸ್ತ್ಯಸೌ ಯದಿ ಗೃಹ್ಯತಾಮ್ ॥ ೧೯೦
ತಚ್ಛ್ರುತ್ವಾ ಸಾಪ್ಯವಾದೀತ್ತಮಸ್ತ್ಯನ್ಯೋ ನೂಪುರೋ ಮಮ ।
ಅಸೌ ಮದೀಯ ಏವೈಕೋ ನೂಪುರೋ ಹಿ ಹೃತಸ್ತ್ವಯಾ ॥ ೧೯೧
ಸೈವಾಹಂ ಯಾ ತ್ವಯಾ ದೃಷ್ಟಾ ಶೂಲವಿದ್ಧಸ್ಯ ಪಾರ್ಶ್ವತಃ ।
ಕೃತಾನ್ಯರೂಪಾ ಭವತಾ ಪರಿಜ್ಞಾತಾಸ್ಮಿ ನಾಧುನಾ ॥ ೧೯೨
ತತ್ಕಿಂ ಮಾಂಸೇನ ಯದಹಂ ವಚ್ಮಿ ತೇ ತತ್ಕರೋಷಿ ಚೇತ್ ।
ತದ್ ದ್ವಿತೀಯಂ ದದಾಮ್ಯಸ್ಯ ತುಲ್ಯಂ ತುಭ್ಯಂ ಸ್ವನೂಪುರಮ್ ॥ ೧೯೩
ಇತ್ಯುಕ್ತೇ ಸ ತದಾ ವೀರಃ ಪ್ರತಿಪದ್ಯ ತದಬ್ರವೀತ್ ।
ಯತ್ತ್ವಂ ವದಸಿ ತತ್ಸರ್ವಂ ಕರೋಮ್ಯೇವ ಕ್ಷಣಾದಿತಿ ॥ ೧೯೪

195. ಆಗ ಅವಳು ಮೊದಲಿನಿಂದ ತನ್ನ ವಿಚಾರವನ್ನು ಹೇಳಿದಳು. ಹಿಮಾಚಲದ ಶಿಖರದಲ್ಲಿ ತ್ರಿಘಂಟವೆಂಬ ಪಟ್ಟಣವು ಇರುವುದು.

196. ಅಲ್ಲಿ ಲಂಬಜಿಹ್ವ ಎಂಬ ಹೆಸರಿನ ವೀರಶ್ರೇಷ್ಠನಾಗಿದ್ದ ರಾಕ್ಷಸರ ಒಡೆಯನು ಇದ್ದನು. ಅವನ ಹೆಂಡತಿ ವಿದ್ಯುಚ್ಛಿಖಾ ಎಂಬುವವಳೇ ನಾನು. ಯಾವ ರೂಪವನ್ನು ಬೇಕಾದರೂ ನಾನು ಧರಿಸಬಲ್ಲೆನು.

197. ನನಗೆ ಒಬ್ಬ ಮಗಳು ಹುಟ್ಟಿದ ಮೇಲೆ ದೈವವಶಾತ್ ನನ್ನ ಪತಿಯು ರಾಕ್ಷಸರ ಪ್ರಭುವಾದ ಕಪಾಲಸ್ಫೋಟನ ಮುಂದೆ ಕಾಳಗದಲ್ಲಿ ಮೃತನಾದನು.

198. ಆಗ ಸಂತೋಷಪಟ್ಟ ಪ್ರಭು ನನಗೆ ನನ್ನ ಊರನ್ನು ಕೊಟ್ಟನು. ಅದರಿಂದ ಮಗಳೊಡನೆ ನಾನು ಈಗ ಸುಖವಾಗಿದ್ದೇನೆ.

199. ಆ ನನ್ನ ಮಗಳು ಈಗ ಹೊಸ ಹರೆಯವನ್ನು ಮುಟ್ಟಿದ್ದಾಳೆ. ಅವಳಿಗೆ ಹೊಂದುವ ವೀರನಾದ ವರನನ್ನು ಹುಡುಕುವ ಚಿಂತೆ ನನ್ನ ಮನಸ್ಸನ್ನು ಆವರಿಸಿದೆ.

200. ಆದ್ದರಿಂದ ಆ ದಿನ ಈ ದಾರಿಯಲ್ಲಿ ರಾಜನೊಡನೆ ಹೋಗುತ್ತಿದ್ದ ನಿನ್ನನ್ನು ನೋಡಿ ಚತುರ್ದಶಿಯ ರಾತ್ರಿಯಲ್ಲಿ ಇಲ್ಲಿದ್ದ ನಾನು ಚಿಂತಿಸಲು ತೊಡಗಿದೆನು.

201. ಈ ಭವ್ಯ ಯುವಕನು ನನ್ನ ಮಗಳಿಗೆ ಹೊಂದುವ ಗಂಡನು. ಆದ್ದರಿಂದ ಇವನನ್ನು ಪಡೆದುಕೊಳ್ಳಲು ಯಾವುದಾದರೊಂದು ಉಪಾಯವನ್ನು ನಾನೇಕೆ ಹೂಡಬಾರದು ?

---

ತತಸ್ತೃಷ್ಟೇ ಜಗಾದೈವಮಾ ಮೂಲಾತ್ ಸಾ ಮನೀಷಿತಮ್ ।
ಅಸ್ತಿ ಭದ್ರ ತ್ರಿಘಂಟಾಖ್ಯಂ ಹಿಮವಚ್ಛಿಖರೇ ಪುರಮ್ ॥ ೧೯೫
ತತ್ರಾಸೀಲ್ಲಂಬಜಿಹ್ವಾಖ್ಯಃ ಪ್ರವೀರೋ ರಾಕ್ಷಸಾಧಿಪಃ ।
ತಸ್ಯ ವಿದ್ಯುಚ್ಛಿಖಾ ನಾಮ ಭಾರ್ಯಾಹಂ ಕಾಮರೂಪಿಣೀ ॥ ೧೯೬
ಸ ಚೈಕಸ್ಯಾಂ ಸುತಾಯಾಂ ಮೇ ಜಾತಾಯಾಂ ದೈವತಃ ಪತಿಃ ।
ಪ್ರಭೋಃ ಕಪಾಲಸ್ಫೋಟಸ್ಯ ಪುರತೋ ನಿಹತೋ ರಣೇ ॥ ೧೯೭
ತತೋ ನಿಜಪುರಂ ತನ್ಮೇ ಪ್ರಭುಣಾ ತೇನ ತುಷ್ಯತಾ ।
ಪ್ರದತ್ತಂ ತೇನ ಚ ಸುಖಂ ಸ್ಥಿತಾಸ್ಮಿ ಸಸುತಾಧುನಾ ॥ ೧೯೮
ಸಾ ಚ ಮದ್ದುಹಿತೇದಾನೀಮಾರೂಢಾ ನವಯೌವನಮ್ ।
ತತ್ಪ್ರವೀರವರಪ್ರಾಪ್ತಿಚಿಂತಾ ಚ ಮಮ ಮಾನಸಮ್ ॥ ೧೯೯
ಅತಸ್ತದಾ ಸಮಂ ರಾಜ್ಞಾ ಯಾಂತಂ ತ್ವಾಮಮುನಾ ಪಥಾ ।
ದೃಷ್ಟ್ವಾ ನಕ್ತಂ ಚತುರ್ದಶ್ಯಾಮಿಹಸ್ಥಾಹಮಚಿಂತಯಮ್ ॥ ೨೦೦
ಅಯಂ ಭವ್ಯೋ ಯುವಾ ವೀರೋ ಯೋಗ್ಯೋ ಮೇ ದುಹಿತುಃ ಪತಿಃ ।
ತದೇತತ್ಪ್ರಾಪ್ತಯೇ ಕಂಚಿದುಪಾಯಂ ಕಿಂ ನ ಕಲ್ಪಯೇ ॥ ೨೦೧

202. ಹಾಗೆ ಸಂಕಲ್ಪ ಮಾಡಿ ಸುಳ್ಳು ಸುಳ್ಳೇ ಶೂಲದಲ್ಲಿ ಹಾಕಿದ್ದವನ ಮಾತಿನ ನೆವದಿಂದ ನೀರನ್ನು ಬೇಡಿ ನಿನ್ನನ್ನು ನಾನು ಸ್ಮಶಾನದ ಮಧ್ಯಕ್ಕೆ ಕರೆಸಿಕೊಂಡೆನು.

203. ನನ್ನ ಮಾಯೆಯಿಂದ ನಿನಗೆ ರೂಪ ಮುಂತಾದುವುಗಳ ಒಂದು ಪ್ರಪಂಚವನ್ನೇ ತೋರಿಸಿ, ಸುಳ್ಳುಗಳನ್ನು ಹೇಳಿ ಒಂದು ಕ್ಷಣಕಾಲದವರೆಗೆ ನಿನ್ನನ್ನು ಮೋಸಗೊಳಿಸಿದ್ದೇನೆ.

204. ಮತ್ತೆ ನಿನ್ನನ್ನು ಸೆಳೆದುಕೊಳ್ಳುವುದಕ್ಕಾಗಿ ಜಾಣತನದಿಂದ ನನ್ನ ಒಂದು ನೂಪುರವನ್ನು ಸಂಕೋಲೆಯ ಪಾಶದಂತೆ ಬಿಟ್ಟು ಹೋದೆನು.

205. ಹೀಗೆ ನೀನು ನನಗೆ ಮತ್ತೆ ಸಿಕ್ಕಿದೆ. ಆದ್ದರಿಂದ ನನ್ನ ಮನೆಗೆ ಬಂದು ನನ್ನ ಮಗಳನ್ನು ಪಡೆದುಕೋ. ಅಲ್ಲದೆ ಆ ಇನ್ನೊಂದು ನೂಪುರವನ್ನೂ ತೆಗೆದುಕೋ."

206. ಹೀಗೆ ಅವಳು ಹೇಳಿದಾಗ ಆ ವೀರ ಅಶೋಕದತ್ತನು 'ಆಗಬಹುದು' ಎಂದು ಹೇಳಿ ಅವಳ ಸಿದ್ಧಿಯ ಬಲದಿಂದ ಅವಳೊಡನೆ ಆ ನಗರಕ್ಕೆ ಹೋದನು.

207. ಹಿಮಾಲಯದ ಶಿಖರದ ಮೇಲಿದ್ದ ಬಾನಿನ ದಾರಿಯನ್ನು ಸವೆಸಿ ಬಳಲಿ ನಿಂತುಬಿಟ್ಟ ನೇಸರಿನ ಬಿಂಬವೋ ಎಂಬಂತಿದ್ದ ಆ ಚಿನ್ನದ (ಬಣ್ಣದ) ನಗರವನ್ನು ಅಶೋಕದತ್ತನು ನೋಡಿದನು.

---

ಇತಿ ಸಂಕಲ್ಪ್ಯ ಯಾಚಿತ್ವಾ ಶೂಲವಿದ್ಧವಚೋಮಿಷಾತ್ ।
ಜಲಂ ಮಧ್ಯೇಶ್ಮಶಾನಂ ತ್ವಮಾನೀತೋಽಭೂರ್ಮಯಾ ಮೃಷಾ ॥ ೨೦೨
ಮಾಯಾದರ್ಶಿತರೂಪಾದಿಪ್ರಪಂಚಾಲೀಕವಾದಿನೀ ।
ವಿಪ್ರಲಬ್ಧವತೀ ಚಾಸ್ಮಿ ತತ್ರ ತ್ವಾಂ ಕ್ಷಣಮಾತ್ರಕಮ್ ॥ ೨೦೩
ಆಕರ್ಷಣಾಯ ಭೂಯಸ್ತೇ ಯುಕ್ತ್ಯಾ ಚೈಕಂ ಸ್ವನೂಪುರಮ್ ।
ಸಂತ್ಯಜ್ಯ ಶೃಂಖಲಾಪಾಶಮಿನ ಯಾತಾ ತತೋಽಪ್ಯಹಮ್ ॥ ೨೦೪
ಅದ್ಯ ಚೇತ್ಥಂ ಮಯಾ ಪ್ರಾಪ್ತೋ ಭವಾಂಸ್ತದ್ಗೃಹಮೇತ್ಯ ನಃ ।
ಭಜಸ್ವ ಮೇ ಸುತಾಂ ಕಿಂ ಚ ಗೃಹಾಣಾಪರನೂಪುರಮ್ ॥ ೨೦೫
ಇತ್ಯುಕ್ತಃ ಸ ನಿಶಾಚರ್ಯಾ ತಥೇತ್ಯುಕ್ತ್ವಾ ತಯಾ ಸಹ ।
ವೀರೋ ಗಗನಮಾರ್ಗೇಣ ತತ್ಸಿದ್ಧ್ಯಾ ತತ್ಪುರಂ ಯಯೌ ॥ ೨೦೬
ಸೌವರ್ಣಂ ತದಪಶ್ಯಚ್ಚ ಶೃಂಗೇ ಹಿಮವತಃ ಪುರಮ್ ।
ನಭೋಽಧ್ವಖೇದವಿಶ್ರಾಂತಮರ್ಕಬಿಂಬಮಿವಾಚಲಮ್ ॥ ೨೦೭

208. ಅಲ್ಲಿ ಶರೀರವನ್ನು ಪಡೆದ ಅವನ ಸಾಹಸದ ಮಹಾಸಿದ್ಧಿಯೋ ಎಂಬಂತಿದ್ದ ವಿದ್ಯುತ್ ಪ್ರಭಾ ಎಂಬ ಹೆಸರಿನ ರಾಕ್ಷಸಾಧಿಪನ ಮಗಳನ್ನು ಪಡೆದುಕೊಂಡನು.

209. ಅತ್ತೆಯ ಐಶ್ವರ್ಯದಿಂದ ಸುಖಿಯಾಗಿ ಅಶೋಕದತ್ತನು ತನ್ನ ಪ್ರಿಯೆ ವಿದ್ಯುತ್ಪ್ರಭೆಯೊಡನೆ ಸ್ವಲ್ಪಕಾಲ ಅಲ್ಲೇ ವಾಸಿಸಿದನು.

210–211. ಆಮೇಲೆ ಅವನು ಅತ್ತೆಗೆ "ನಾನೀಗ ವಾರಾಣಸೀನಗರಕ್ಕೆ ಹೋಗಬೇಕು. ಆದ್ದರಿಂದ ನನಗೆ ಆ ನೂಪುರವನ್ನು ಕೊಡು. ಅಲ್ಲಿ ನಾನು ರಾಜನ ಮುಂದೆ ನಿನ್ನ ಒಂದು ನೂಪುರಕ್ಕೆ ಸಮಾನವಾದ ಇನ್ನೊಂದು ನೂಪುರವನ್ನು ತಂದು ಕೊಡುವೆನೆಂದು ಪ್ರತಿಜ್ಞೆ ಮಾಡಿದ್ದೇನೆ" ಎಂದು ಹೇಳಿದನು.

212. ಹೀಗೆ ಅವನು ಹೇಳಿದಾಗ ಅತ್ತೆಯು ಅವನಿಗೆ ತನ್ನ ಎರಡನೆಯ ನೂಪುರವನ್ನು ಕೊಟ್ಟದ್ದಲ್ಲದೆ ಮತ್ತೆ ಒಂದು ಚಿನ್ನದ ಕಮಲವನ್ನೂ ಕೊಟ್ಟಳು.

213. ಹೀಗೆ ಕಮಲವನ್ನೂ ನೂಪುರವನ್ನೂ ಪಡೆದುಕೊಂಡು ಮತ್ತೆ ಅಲ್ಲಿಗೆ ಬರುವೆನೆಂಬ ಮಾತನ್ನು ಕೊಟ್ಟು ಅಶೋಕದತ್ತನು ಆ ಊರಿನಿಂದ ಹೊರಟನು.

214. ಅವನ ಅತ್ತೆಯೇ ತನ್ನ ಸಿದ್ಧಿಯ ಪ್ರಭಾವದಿಂದ ಅವನನ್ನು ಬಾನಿನ ಹಾದಿಯಿಂದ ಅದೇ ಶ್ಮಶಾನಕ್ಕೆ ತಲುಪಿಸಿದಳು.

---

ರಕ್ಷೋಽಧಿಪಸುತಾಂ ತತ್ರ ನಾಮ್ನಾ ವಿದ್ಯುತ್ಪ್ರಭಾಂ ಸ ತಾಮ್ ।
ಸ್ವಸಾಹಸಮಹಾಸಿದ್ಧಿಮಿವ ಮೂರ್ತಾಮವಾಪ್ತವಾನ್ ॥ ೨೦೮

ತಯಾ ಚ ಸಹ ತತ್ರೈವ ಕಂಚಿತ್ಕಾಲಮುವಾಸ ಸಃ ।
ಅಶೋಕದತ್ತಃ ಪ್ರಿಯಯಾ ಶ್ವಶ್ರೂವಿಭವನಿರ್ವೃತಃ ॥ ೨೦೯

ತತೋ ಜಗಾದ ತಾಂ ಶ್ವಶ್ರೂಂ ಮಹ್ಯಂ ತದ್ದೇಹಿ ನೂಪುರಮ್ ।
ಯತಃ ಸಂಪ್ರತಿ ಗಂತವ್ಯಾ ಪುರೀ ವಾರಾಣಸೀ ಮಯಾ ॥ ೨೧೦

ತತ್ರ ಹ್ಯೇತತ್ ಪ್ರತಿಜ್ಞಾತಂ ಸ್ವಯಂ ನರಪತೇಃ ಪುರಃ ।
ಏಕತ್ವನ್ನೂಪುರಸ್ಪರ್ಧಿ ದ್ವಿತೀಯಾನಯನಂ ಮಯಾ ॥ ೨೧೧

ಇತ್ಯುಕ್ತಾ ತೇನ ಸಾ ಶ್ವಶ್ರೂರ್ದ್ವಿತೀಯಂ ತಂ ಸ್ವನೂಪುರಮ್ ।
ತಸ್ಮೈ ದತ್ತ್ವಾ ಪುನಶ್ಚೈಕಂ ಸುವರ್ಣಕಮಲಂ ದದೌ ॥ ೨೧೨

ಪ್ರಾಪ್ತಾಬ್ಜನೂಪುರಸ್ತಸ್ಮಾತ್ ಸ ಪುರಾನ್ನಿರ್ಯಯೌ ತತಃ ।
ಅಶೋಕದತ್ತೋ ವಚಸಾ ನಿಯಮ್ಯಾಗಮನಂ ಪುನಃ ॥ ೨೧೩

ತಯಾ ಶ್ವಶ್ರ್ವೈವ ಚಾಕಾಶಪಥೇನ ಪುನರೇವ ತಮ್ ।
ಶ್ಮಶಾನಂ ಪ್ರಾಪಿತಃ ಸೋಽಭೂನ್ನಿಜಸಿದ್ಧಿಪ್ರಭಾವತಃ ॥ ೨೧೪

215–216. ಅಲ್ಲೇ ಮರದ ಕೆಳಗೆ ನಿಂತು ಅವಳು "ಯಾವಾಗಲೂ ಕೃಷ್ಣಪಕ್ಷದ ಚತುರ್ದಶಿಯ ರಾತ್ರಿಯಲ್ಲಿ ನಾನಿಲ್ಲಿಗೆ ಬರುತ್ತೇನೆ. ಆದ್ದರಿಂದ ಅಂಥ ರಾತ್ರಿಯಲ್ಲಿ ನೀನು ಅಲ್ಲಿಗೆ ಬಂದಾಗಲೆಲ್ಲ ನಾನು ಆ ಆಲದ ಮರದ ಬುಡದಲ್ಲಿ ನಿನಗೆ ಕಾಣಿಸುತ್ತೇನೆ" ಎಂದು ಹೇಳಿದಳು.

217. ಅದನ್ನು ಕೇಳಿ ಹಾಗೆಯೇ ಆಗಬಹುದು ಎಂದು ಹೇಳಿ ಆ ರಾಕ್ಷಸಿಗೆ ಹೋಗಿಬರುವೆನೆಂದು ತಿಳಿಸಿ ಅಶೋಕದತ್ತನು ಅಲ್ಲಿಂದ ತಂದೆಯ ಮನೆಗೆ ಹೋದನು.

218. ಕಿರಿಯ ಮಗನ ವಿಯೋಗದಿಂದ ಉಂಟಾಗಿದ್ದ ದುಃಖದ ಇಮ್ಮಡಿ ದುಃಖವನ್ನು ತಂದಿದ್ದ ಅವನ ಅಂಥ ಪ್ರವಾಸದಿಂದ ತಂದೆತಾಯಿಗಳು ಅಲ್ಲಿ ಕಂಗೆಟ್ಟಿದ್ದರು.

219. ಅನಿರೀಕ್ಷಿತವಾಗಿ ಬಂದ ಮಗನು ಅವರಿಗೆ ಆನಂದವನ್ನು ಉಂಟುಮಾಡುತ್ತಿರುವಾಗಲೇ ಅವನ ಮಾವ ಮಹಾರಾಜನೂ ಆ ವಿಷಯವನ್ನು ತಿಳಿದು ಅಲ್ಲಿಗೆ ಬಂದನು.

220. ನಮಸ್ಕರಿಸಿದ ಅಶೋಕದತ್ತನ್ನು ಮಹಾರಾಜನು ಸಾಹಸಿಕನ ಸ್ಪರ್ಶಕ್ಕೆ ಹೆದರಿದವೋ ಎಂಬಂತೆ ರೋಮಾಂಚನಗೊಂಡಿದ್ದ ತನ್ನ ಅಂಗಗಳಿಂದ ದೀರ್ಘಕಾಲದವರೆಗೆ ತಬ್ಬಿಕೊಂಡು ಹರ್ಷಿಸಿದನು.

---

ತರುಮೂಲೇ ಚ ತತ್ರೈವ ಸ್ಥಿತ್ವಾ ಸಾ ತಂ ತತೋಽಬ್ರವೀತ್ ।
ಸದಾ ಕೃಷ್ಣಚತುರ್ದಶ್ಯಾಮಿಹ ರಾತ್ರಾವುಪೈಮ್ಯಹಮ್ ॥ ೨೧೫
ತಸ್ಮಾನ್ನಿಶಿ ಚ ಭೂಯೋಽಪಿ ತ್ವಮೇಷ್ಯಸಿ ಯದಾಯದಾ ।
ತದಾತದಾ ವಟತರೋರ್ಮೂಲಾತ್ ಪ್ರಾಪ್ಸ್ಯಸಿ ಮಾಮಿತಃ ॥ ೨೧೬
ಏತಚ್ಛ್ರುತ್ವಾ ತಥೇತ್ಯುಕ್ತ್ವಾ ತಾಮಾಮಂತ್ರ್ಯ ನಿಶಾಚರೀಮ್ ।
ಅಶೋಕದತ್ತಃ ಸ ತತೋ ಯಯೌ ತಾವತ್ ಪಿತುರ್ಗೃಹಮ್ ॥ ೨೧೭
ಕನೀಯಃ ಸುತವಿಶ್ಲೇಷದುಃಖದ್ವೈಗುಣ್ಯದಾಯಿನಾ ।
ತಾದೃಶಾ ತತ್ಪ್ರವಾಸೇನ ಪಿತರೌ ತತ್ರ ದುಃಖಿತೌ ॥ ೨೧೮
ಅತರ್ಕಿತಾಗತೋ ಯಾವದಾನಂದಯತಿ ತತ್ಕ್ಷಣಾತ್ ।
ತಾವತ್ ಸ ಬುದ್ಧ್ವಾ ಶ್ವಶುರಸ್ತತ್ರೈವಾಸ್ಯಾಯಯೌ ನೃಪಃ ॥ ೨೧೯
ಸ ತಂ ಸಾಹಸಿಕಸ್ಪರ್ಶಭೀತೈರಿವ ಸಕಂಟಕೈಃ ।
ಅಂಗೈಃ ಪ್ರಣತಮಾಲಿಂಗ್ಯ ಮುಮುದೇ ಭೂಪತಿಶ್ಚಿರಮ್ ॥ ೨೨೦

221. ಅನಂತರ ರಾಜನೊಂದಿಗೆ ಅಶೋಕದತ್ತನು ಶರೀರವನ್ನು ಧರಿಸಿದ ಆನಂದವೋ ಎಂಬಂತೆ ರಾಜನ ಅರಮನೆಯೊಳಗೆ ಪ್ರವೇಶಿಸಿದನು.

222. ಕಿಣಿಕಿಣಿಸದ್ದಿನಿಂದ ಅಶೋಕದತ್ತನ ಶೌರ್ಯವನ್ನು ಹೊಗಳುತ್ತಿವೆಯೋ ಎಂಬಂತಿದ್ದ ಆ ದಿವ್ಯವಾದ ನೂಪುರಗಳ ಜೋಡಿಯನ್ನು ಅವನು ದೊರೆಗೆ ಕೊಟ್ಟನು.

223. ರಾಕ್ಷಸರ ಖಜಾನೆಯ ಲಕ್ಷ್ಮಿಯ ಕೈಯಿಂದ ಕಿತ್ತುಕೊಂಡು ತಂದಿದ್ದ ಆಟದ ತಾವರೆಯೋ ಎಂಬಂತಿದ್ದ ಥಳಥಳಿಸುತ್ತಿದ್ದ ಚಿನ್ನದ ಕಮಲವನ್ನೂ ರಾಜನಿಗೆ ಅರ್ಪಿಸಿದನು.

224–225. ಅನಂತರ ರಾಣಿಯ ಜೊತೆಯಲ್ಲಿದ್ದ ರಾಜನು ಕುತೂಹಲದಿಂದ ಕೇಳಿದಾಗ ಅಶೋಕದತ್ತನು ಕಿವಿಗಳಿಗೆ ಆನಂದವನ್ನು ನೀಡುವ ಹಾಗೂ ಅಚ್ಚರಿಯನ್ನು ಮೂಡಿಸುವ ಘಟನೆಗಳ ಉಲ್ಲೇಖದಿಂದ ಮನಸ್ಸಿಗೆ ಚಮತ್ಕಾರವನ್ನು ತರುವ ತನ್ನ ವೃತ್ತಾಂತವನ್ನು ಯಥಾವತ್ತಾಗಿ ಹೇಳಿದನು. 'ನಿರ್ಮಲವಾದ ಕೀರ್ತಿಯು ಸಾಹಸವನ್ನೇ ಮಾಡದಿದ್ದರೆ ಸಿಕ್ಕುವುದು ಹೇಗೆ ?'

226. ಹೀಗೆ ಹೇಳುತ್ತಾ ರಾಜನೂ, ನೂಪುರಗಳ ಜೋಡಿಯನ್ನು ಪಡೆದ ರಾಣಿಯೂ ಅಂಥ ಅಳಿಯನಿಂದ ತಾವೂ ಧನ್ಯರಾದೆವು ಎಂದುಕೊಂಡರು.

---

ತತಸ್ತೇನ ಸಮಂ ರಾಜ್ಞಾ ವಿವೇಶ ನೃಪಮಂದಿರಮ್ ।
ಅಶೋಕದತ್ತಃ ಸ ತದಾ ಪ್ರಮೋದೋ ಮೂರ್ತಿಮಾನಿವ ॥ ೨೨೧
ದದೌ ರಾಜ್ಞೇ ಸ ಸಂಯುಕ್ತಂ ತದ್ದಿವ್ಯಂ ನೂಪುರದ್ವಯಮ್ ।
ಕುರ್ವಾಣಮಿವ ತದ್ವೀರ್ಯಸ್ತುತಿಂ ಝುಣಝುಣಾರವೈಃ ॥ ೨೨೨
ಅರ್ಪಯಾಮಾಸ ತಚ್ಚಾಸ್ಮೈ ಕಾಂತಂ ಕನಕಪಂಕಜಮ್ ।
ರಕ್ಷಃಕೋಷಶ್ರಿಯೋ ಹಸ್ತಾಲ್ಲೀಲಾಂಬುಜಮಿವಾಹೃತಮ್ ॥ ೨೨೩
ಪೃಷ್ಟೋಽಥ ಕೌತುಕಾತ್ತೇನ ರಾಜ್ಞಾ ದೇವೀಯುತೇನ ಸಃ ।
ಅವರ್ಣಯದ್ ಯಥಾವೃತ್ತಂ ಸ್ವಂ ಕರ್ಣಾನಂದದಾಯಿ ತತ್ ॥ ೨೨೪
ವಿಚಿತ್ರಚರಿತೋಲ್ಲೇಖಚಮತ್ಕಾರಿತಚೇತನಮ್ ।
ಪ್ರಾಪ್ಯತೇ ಕಿಂ ಯಶಃ ಶುಭ್ರಮನಂಗೀಕೃತ್ಯ ಸಾಹಸಮ್ ॥ ೨೨೫
ಏವಂ ವದಂಸ್ತತಸ್ತೇನ ಜಾಮಾತ್ರಾ ಕೃತಕೃತ್ಯತಾಮ್ ।
ಮೇನೇ ಸ ರಾಜಾ ದೇವೀ ಚ ಪ್ರಾಪ್ತನೂಪುರಯುಗ್ಮಕಾ ॥ ೨೨೬

227. ರಾಜನ ಅರಮನೆಯಲ್ಲಿ ಉತ್ಸವವನ್ನು ಆಚರಿಸಲು ವಾದ್ಯಗಳು ಅಶೋಕದತ್ತನ ಗುಣಗಳನ್ನು ಅಬ್ಬರದಿಂದ ಹಾಡುತ್ತಿರುವಂತೆ ಮೊಳಗಿದುವು.

228. ಇನ್ನೊಂದು ದಿನ ದೊರೆಯು ಆ ಚಿನ್ನದ ಕಮಲವನ್ನು ತಾನೇ ಕಟ್ಟಿಸಿದ ದೇವಾಲಯದಲ್ಲಿ ಬೆಳ್ಳಿಯ ಕಲಶದ ಮೇಲೆ ಪ್ರತಿಷ್ಠಾಪಿಸಿದನು.

229. ಆ ಕಲಶ,ಕಮಲಗಳು ಬೆಳ್ಳಗೆ ಮತ್ತು ಕೆಂಪಗೆ ಇದ್ದು ರಾಜ ಹಾಗೂ ಅಶೋಕದತ್ತರ ಕೀರ್ತಿ ಮತ್ತು ಪ್ರತಾಪಗಳಂತೆ ಶೋಭಿಸಿದುವು.

230. ಹಾಗಿದ್ದ ಬೆಳ್ಳಿಯ ಕಲಶವನ್ನೂ ಚಿನ್ನದ ಕಮಲವನ್ನೂ ನೋಡಿ ದೊರೆಯ ಕಣ್ಣುಗಳು ಹರ್ಷದಿಂದ ಅರಳಿದುವು. ಮಹೇಶ್ವರನ ಭಕ್ತನಾಗಿದ್ದ ದೊರೆ ಭಕ್ತಿರಸದ ಆವೇಶದಿಂದ ಹೀಗೆ ನುಡಿದನು.

231. "ಆಹಾ ! ವಿಭೂತಿಯನ್ನು ಧರಿಸಿದ ಶಿವನು ಹೊಂಬಣ್ಣದ ಜಟಾಜೂಟದಿಂದ ಶೋಭಿಸುವಂತೆ ಎತ್ತರವಾದ ಈ ಬೆಳ್ಳಿಯ ಕಲಶವು ಪದ್ಮದಿಂದ ಶೋಭಿಸುತ್ತದೆ.

232. ಇಂಥ ಇನ್ನೊಂದು ಚಿನ್ನದ ಪದ್ಮವೂ ಇದ್ದಿದ್ದರೆ, ಅಲ್ಲಿರುವ ಇನ್ನೊಂದು ಕಲಶದ ಮೇಲೂ ಇಡಬಹುದಾಗಿತ್ತು"

233. ರಾಜನ ಈ ಮಾತನ್ನು ಕೇಳಿ ಅಶೋಕದತ್ತನು "ದೇವ, ನಿನಗಾಗಿ ನಾನು ಇಂಥ ಇನ್ನೊಂದು ಕಮಲವನ್ನೂ ತಂದು ಕೊಡುವೆನು" ಎಂದು ನುಡಿದನು.

---

ಉತ್ಸವಾತೋದ್ಯನಿರ್ಹ್ರಾದಿ ತದಾ ರಾಜಗೃಹಂ ಚ ತತ್ ।
ಅಶೋಕದತ್ತಸ್ಯ ಗುಣಾನ್ ಉದ್ಗಾಯನ್ನಿವ ನಿರ್ಬಭೌ ॥ ೨೨೭
ಅನ್ಯೇದ್ಯುಶ್ಚ ಸ ರಾಜಾ ತತ್ ಸ್ವಕೃತೇ ಸುರಸದ್ಮನಿ ।
ಹೇಮಾಬ್ಜಂ ಸ್ಥಾಪಯಾಮಾಸ ಸದ್ರೌಪ್ಯಕಲಶೋಪರಿ ॥ ೨೨೮
ಉಭೌ ಕಲಶಪದ್ಮೌ ಚ ಶುಶುಭಾತೇ ಸಿತಾರುಣೌ ।
ಯಶಃಪ್ರತಾಪಾವಿವ ತೌ ಭೂಪಾಲಾಶೋಕದತ್ತಯೋಃ ॥ ೨೨೯
ತಾದೃಶೌ ಚ ವಿಲೋಕ್ಯೈತೌ ಸ ಹರ್ಷೋತ್ಫುಲ್ಲಲೋಚನಃ ।
ರಾಜಾ ಮಹೇಶ್ವರೋ ಭಕ್ತರಸಾವೇಶಾದಭಾಷತ ॥ ೨೩೦
ಅಹೋ ವಿಭಾತಿ ಪದ್ಮೇನ ತುಂಗೋऽಯಂ ಕಲಶೋऽಮುನಾ ।
ಭೂತಿಶುಭ್ರಃ ಕಪರ್ದೀವ ಜಟಾಜೂಟೇನ ಬಭ್ರುಣಾ ॥ ೨೩೧
ಅಭವಿಷ್ಯದ್ ದ್ವಿತೀಯಂ ಚೇದೀದೃಶಂ ಕನಕಾಂಬುಜಮ್ ।
ಅಸ್ಥಾಪಯಿಷ್ಯತಾಮುಷ್ಮಿನ್ ದ್ವಿತೀಯೇ ಕಲಶೇऽಪಿ ತತ್ ॥ ೨೩೨
ಇತಿ ರಾಜವಚಃ ಶ್ರುತ್ವಾಶೋಕದತ್ತಸ್ತತೋऽಬ್ರವೀತ್ ।
ಆನೇಷ್ಯಾಮ್ಯಹಮಂಭೋಜಂ ದ್ವಿತೀಯಮಪಿ ದೇವ ತೇ ॥ ೨೩೩

234. ಆ ನುಡಿಯನ್ನು ಕೇಳಿ ರಾಜನು "ನನಗೆ ಇನ್ನೊಂದು ಪದ್ಮದಿಂದ ಪ್ರಯೋಜನವೇನಿಲ್ಲ. ನೀನು ಮತ್ತೆ ಸಾಹಸ ಮಾಡುವುದು ಬೇಡ" ಎಂದು ಅವನಿಗೆ ಹೇಳಿದನು.

235. ದಿವಸಗಳು ಕಳೆದುವು. ಅಶೋಕದತ್ತನು ಚಿನ್ನದ ಕಮಲವನ್ನು ತರಲು ಅಪೇಕ್ಷಿಸುತ್ತಿರಲು ಮತ್ತ ಕೃಷ್ಣಪಕ್ಷದ ಚತುರ್ದಶಿ ಬಂದಿತು.

236. ಅಶೋಕದತ್ತನಿಗೆ ಚಿನ್ನದ ಕಮಲದ ಮೇಲೆ ಆಸೆಯಿದೆ ಎಂಬುದನ್ನರಿತು ಭಯದಿಂದಲೋ ಎಂಬಂತೆ ಆಕಾಶವೆಂಬ ಸರೋವರದ ಹೊಂದಾವರೆಯಾದ ಸೂರ್ಯನು ಪಡುವಣ ಬೆಟ್ಟದ ಶಿಖರದಲ್ಲಿ ಕಣ್ಮರೆಯಾದನು.

237. ಸಂಜೆಯ ಕೆಂಪು ಮೋಡಗಳೆಂಬ ಮಾಂಸವನ್ನು ನುಂಗಿದ ಹೆಮ್ಮೆಯಿಂದಲೋ ಎಂಬಂತೆ ಹೊಗೆಯಂತೆ ಕಪ್ಪಾಗಿದ್ದ ಕತ್ತಲೆಗಳೆಂಬ ರಕ್ಕಸರು ಎಲ್ಲ ಕಡೆಗಳಲ್ಲೂ ಓಡಾಡುತ್ತಿದ್ದರು.

238. ಉರಿಯುತ್ತಿದ್ದ ದೀವಿಗೆಗಳ ಸಾಲೆಂಬ ಹಲ್ಲುಗಳ ಪಂಕ್ತಿಯಿಂದ ಹೊಳೆಯುತ್ತಿದ್ದೂ ಭಯಂಕರವಾಗಿದ್ದ ಇರುಳೆಂಬ ರಕ್ಕಸಿಯ ಬಾಯಿ ಅತಿಭಯಾನಕವಾಗಿ ವಿಜೃಂಭಿಸುತ್ತಿತ್ತು.

239. ರಾಜಪುತ್ರಿಯು ಅರಮನೆಯಲ್ಲಿ ಗಾಢನಿದ್ರೆಯಲ್ಲಿ ಮುಳುಗಿರಲು, ಅಶೋಕದತ್ತನು ಅಲ್ಲಿಂದ ತನ್ನ ಇಷ್ಟಾನುಸಾರವಾಗಿ ಮತ್ತೆ ಅದೇ ಸ್ಮಶಾನಕ್ಕೆ ಹೋದನು.

---

ತಚ್ಛ್ರುತ್ವಾ ನ ಮಮಾನ್ಯೇನ ಪಂಕಜೇನ ಪ್ರಯೋಜನಮ್ ।
ಅಲಂ ತೇ ಸಾಹಸೇನೇತಿ ರಾಜಾಪಿ ಪ್ರತ್ಯುವಾಚ ತಮ್ ॥ ೨೩೪

ದಿವಸೇಷ್ವಥ ಯಾತೇಷು ಹೇಮಾಬ್ಜಹರಣೈಷಿಣಿ ।
ಅಶೋಕದತ್ತೇ ಸಾ ಭೂಯೋಽಪ್ಯಾಗಾತ್ ಕೃಷ್ಣಚತುರ್ದಶೀ ॥ ೨೩೫

ತಸ್ಯಾಂ ಚಾಸ್ಯ ಸುವರ್ಣಾಬ್ಜವಾಂಛಾಂ ಬುದ್ಧ್ವಾ ಭಯಾದಿವ ।
ದ್ಯುಸರಃಸ್ವರ್ಣಕಮಲೇ ಯಾತೇಽಸ್ತಶಿಖರಂ ರವೌ ॥ ೨೩೬

ಸಂಧ್ಯಾರುಣಾಭ್ರಪಿಶಿತಗ್ರಾಸಗರ್ವಾದಿವ ಕ್ಷಣಾತ್ ।
ತಮೋರಕ್ಷಸ್ಸು ಧಾವತ್ಸು ಧೂಮಧೂಮ್ರೇಷು ಸರ್ವತಃ ॥ ೨೩೭

ಸ್ಫುರದ್ದೀಪಾವಲೀದಂತಮಾಲಾಭಾಸ್ವರಭೀಷಣೇ ।
ಜೃಂಭಮಾಣೇ ಮಹಾರೌದ್ರೇ ನಿಶಾನಕ್ತಂಚರೀಮುಖೇ ॥ ೨೩೮

ಪ್ರಸುಪ್ತರಾಜಪುತ್ರೀಕಾತ್ ಸ್ವೈರಂ ನಿರ್ಗತ್ಯ ಮಂದಿರಾತ್ ।
ಅಶೋಕದತ್ತಃ ಸ ಯಯೌ ಶ್ಮಶಾನಂ ಪುನರೇವ ತತ್ ॥ ೨೩೯

240. ಅಲ್ಲಿ ಆ ಆಲದುಮರದ ಕೆಳಗೆ ಅವನ ಅತ್ತೆ ರಾಕ್ಷಸಿಯು ಮತ್ತೆ ಬಂದಿದ್ದು ಸ್ವಾಗತವನ್ನು ಕೋರಿದಳು.

241. ಅವಳ ಜೊತೆಯಲ್ಲಿ ಇನ್ನೊಮ್ಮೆ ಹಿಮಾಲಯದ ಶಿಖರದ ಮೇಲೆ ಇದ್ದ ಮನೆಗೆ ತರುಣ ಅಶೋಕದತ್ತನು ಹೋದನು. ಅವನ ಪತ್ನಿಯು ಅವನ ದಾರಿಯನ್ನೇ ಕಾಯುತ್ತಿದ್ದಳು.

242. ಸ್ವಲ್ಪ ಕಾಲವನ್ನು ಹೆಂಡತಿಯೊಡನೆ ಅಲ್ಲಿ ಕಳೆದು, ಆಮೇಲೆ ಅವನು "ಎಲ್ಲಿಂದಲಾದರೂ ತಂದು ನನಗೆ ಇನ್ನೊಂದು ಅಂತಹ ಚಿನ್ನದ ಕಮಲವನ್ನು ಕೊಡು" ಎಂದು ಅತ್ತೆಗೆ ಹೇಳಿದನು.

243–244. ಅದನ್ನು ಕೇಳಿದ ಅವಳು "ಇನ್ನೊಂದು ಅಂಥ ಕಮಲ ನನಗೆ ಎಲ್ಲಿ ಸಿಕ್ಕುವುದು ? ನಮ್ಮ ಪ್ರಭು ಕಪಾಲಸ್ಫೋಟನ ಒಂದು ಸರೋವರವು ಇದೆ. ಅದರಲ್ಲಿ ಇಂಥ ಚಿನ್ನದ ಕಮಲಗಳು ಬೇಕಾದಷ್ಟು ಹುಟ್ಟುತ್ತವೆ. ಆ ಸರೋವರದಿಂದ ತಂದ ಒಂದು ಕಮಲವನ್ನು ಪ್ರಭು ನನ್ನ ಗಂಡನಿಗೆ ಪ್ರೀತಿಯಿಂದ ಕೊಟ್ಟಿದ್ದನು." ಎಂದು ಹೇಳಿದಳು.

245. ಹೀಗೆ ಅವಳು ಹೇಳಿದಾಗ ಅವನು "ಹಾಗಾದರೆ ನನ್ನನ್ನು ಆ ಸರೋವರದ ಬಳಿಗೆ ಕರೆದುಕೊಂಡು ಹೋಗು. ಅಲ್ಲಿ ನಾನೇ ಚಿನ್ನದ ಕಮಲವನ್ನು ಸರೋವರದಿಂದ ತೆಗೆದುಕೊಳ್ಳುತ್ತೇನೆ" ಎಂದನು.

---

ತತ್ರ ತಸ್ಮಿನ್ ವಟತರೋರ್ಮೂಲೇ ತಾಂ ಪುನರಾಗತಾಮ್ ।
ದದರ್ಶ ರಾಕ್ಷಸೀಂ ಶ್ವಶ್ರೂಂ ವಿಹಿತಸ್ವಾಗತಾದರಾಮ್ ॥ ೨೪೦
ತಯಾ ಚ ಸಹ ಭೂಯಸ್ತದಗಮತ್ತನ್ನಿಕೇತನಮ್ ।
ಸ ಯುವಾ ಹಿಮವಚ್ಛೃಂಗಂ ಮಾರ್ಗೋನ್ಮುಖವಧೂಜನಮ್ ॥ ೨೪೧
ಕಂಚಿತ್ಕಾಲಂ ಸಮಂ ವಧ್ವಾ ತತ್ರ ಸ್ಥಿತ್ವಾಬ್ರವೀಚ್ಚ ತಾಮ್ ।
ಶ್ವಶ್ರೂಂ ದೇಹಿ ದ್ವಿತೀಯಂ ಮೇ ಕುತಶ್ಚಿತ್ ಕನಕಾಂಬುಜಮ್ ॥ ೨೪೨
ತಚ್ಛ್ರುತ್ವಾ ಸಾಪ್ಯವಾದೀತ್ತಂ ಕುತೋಽನ್ಯತ್ ಪಂಕಜಂ ಮಮ ।
ಏತತ್ ಕಪಾಲಸ್ಫೋಟಸ್ಯ ವಿದ್ಯತೇಽಸ್ಮತ್ಪ್ರಭೋಃ ಸರಃ ॥ ೨೪೩
ಯತ್ರೇದೃಶಾನಿ ಜಾಯಂತೇ ಹೇಮಾಬ್ಜಾನಿ ಸಮಂತತಃ ।
ತಸ್ಮಾತ್ತದೇಕಂ ಮದ್ಭರ್ತ್ರೇ ಪ್ರೀತ್ಯಾ ಪದ್ಮಂ ಸ ದತ್ತವಾನ್ ॥ ೨೪೪
ಏವಂ ತಯೋಕ್ತೇ ಸೋಽವಾದೀತ್ತರ್ಹಿ ತನ್ಮಾಂ ಸರೋವರಮ್ ।
ನಯ ಯಾವತ್ ಸ್ವಯಂ ತಸ್ಮಾದಾದಾಸ್ಯೇ ಕನಕಾಂಬುಜಮ್ ॥ ೨೪೫

246. "ಅದು ಸಾಧ್ಯವಿಲ್ಲ. ಭಯಂಕರ ರಾಕ್ಷಸರು ಆ ಸರೋವರವನ್ನು ಕಾವಲು ಕಾಯುತ್ತಿರುತ್ತಾರೆ' ಎಂದು ಅವಳು ತಡೆದರೂ ಅವನು ತನ್ನ ಒತ್ತಾಯವನ್ನು ಬಿಡಲಿಲ್ಲ

247. ಆಮೇಲೆ ಹೇಗೋ ಆ ಅತ್ತೆಯು ಅವನನ್ನು ಅಲ್ಲಿಗೆ ಒಯ್ದಳು. ಉನ್ನತವಾದ ಬೆಟ್ಟದ ಮೇಲೆ ಇದ್ದ ಆ ದಿವ್ಯವಾದ ಸರೋವರವನ್ನು ಅಶೋಕದತ್ತನು ದೂರದಿಂದ ನೋಡಿದನು.

248. ಆ ಸರೋವರದಲ್ಲಿ ಯಾವಾಗಲೂ ಹೊಂದಾವರೆಗಳು ಅರಳಿ ನಿಂತು ಅದನ್ನು ಮುಚ್ಚಿದ್ದುವು. ಎಡೆಬಿಡದೆ ಸೂರ್ಯನ ಕಡೆ ತಿರುಗಿ ಅವನ ಬೆಳಕನ್ನು ಅವು ಕುಡಿಯುತ್ತಿರುವುದರಿಂದ ಆ ಪ್ರಭೆಯು ಅವುಗಳಲ್ಲಿ ಸಂಕ್ರಮಿಸಿದಂತೆ ತೋರುತ್ತಿತ್ತು.

249. ಅಲ್ಲಿಗೆ ಹೋಗಿ ಅವನು ತಾವರೆಗಳನ್ನು ಕೊಯ್ದುಕೊಳ್ಳುವಷ್ಟರಲ್ಲಿ ಸರೋವರವನ್ನು ಕಾವಲು ಕಾಯುತ್ತಿದ್ದ ಘೋರ ರಾಕ್ಷಸರು ಅವನನ್ನು ತಡೆದರು.

250. ಶಸ್ತ್ರವನ್ನು ಹಿಡಿದ ಅಶೋಕದತ್ತನು ಅವರಲ್ಲಿ ಕೆಲವರನ್ನು ಕೊಂದು ಹಾಕಿದನು. ಉಳಿದವರು ಓಡಿಹೋಗಿ ಅವರ ರಾಜನಾದ ಕಪಾಲಸ್ಫೋಟನಿಗೆ ಅದನ್ನೆಲ್ಲ ಅರುಹಿದರು.

251. ಅದನ್ನು ತಿಳಿದು ಕನಲಿದ ರಾಕ್ಷಸರಾಜ ಕಪಾಲಸ್ಫೋಟನು ತಾನೇ ಬಂದು ಕಮಲಗಳನ್ನು ಲೂಟಿ ಹೊಡೆಯುತ್ತಿದ್ದ ಅಶೋಕದತ್ತನನ್ನು ಕಂಡನು.

---

ನ ಶಕ್ಯಮೇತದ್ ರಕ್ಷೋಭಿರ್ದಾರುಣೈಸ್ತದ್ಧಿ ರಕ್ಷ್ಯತೇ ।
ಏವಂ ನಿಷಿದ್ಧೋಽಪಿ ತಯಾ ನಿರ್ಬಂಧು ನ ಸ ತಂ ಜಹೌ ॥ ೨೪೬
ತತಃ ಕಥಂಚಿನ್ನೀತಶ್ಚ ತಯಾ ಶ್ವಶ್ರ್ವಾ ದದರ್ಶ ತಮ್ ।
ದೂರಾತ್ ಸರೋವರಂ ದಿವ್ಯಂ ತುಂಗಾದ್ರಿಕಟಕಾಶ್ರಿತಮ್ ॥ ೨೪೭
ಛನ್ನಂ ನಿರಂತರೋದ್ದಂಡದೀಪ್ತ ಹೇಮಸರೋರುಹೈಃ ।
ಸತತೋನ್ಮುಖತಾಪೀತಸಂಕ್ರಾಂತಾರ್ಕಪ್ರಭೈರಿವ ॥ ೨೪೮
ಗತ್ವೈವ ತತ್ರ ಯಾವಚ್ಚ ಪದ್ಮಾನ್ಯವಚಿನೋತಿ ಸಃ ।
ತಾವತ್ತದ್ರಕ್ಷಿಣೋ ಘೋರಾ ರುರುಧುಸ್ತಂ ನಿಶಾಚರಾಃ ॥ ೨೪೯
ಸಶಸ್ತ್ರಃ ಸೋಽವಧೀಚ್ಚೈನಾನನ್ಯಾನನ್ಯೇ ಪಲಾಯ್ಯ ಚ ।
ಗತ್ವಾ ಕಪಾಲಸ್ಫೋಟಾಯ ಸ್ವಾಮಿನೇ ತನ್ನ್ಯವೇದಯನ್ ॥ ೨೫೦
ಸ ತದ್ ಬುದ್ಧ್ವೈವ ಕುಪಿತಸ್ತತ್ರ ರಕ್ಷಪತಿಃ ಸ್ವಯಮ್ ।
ಆಗತ್ಯಾಶೋಕದತ್ತಂ ತಮಪಶ್ಯಲ್ಲುಂಠಿತಾಂಬುಜಮ್ ॥ ೨೫೧

252. ಆ ಕ್ಷಣದಲ್ಲೇ ಅಣ್ಣನನ್ನು ಗುರುತಿಸಿ ವಿಸ್ಮಿತನಾದ ಕಪಾಲಸ್ಫೋಟನು 'ನನ್ನ ಸೋದರ ಅಶೋಕದತ್ತನು ಇಲ್ಲಿಗೆ ಹೇಗೆ ಬಂದನು ?' ಎಂದುಕೊಂಡನು.

253. ಅನಂತರ ಆನಂದಬಾಷ್ಪಗಳಿಂದ ಕಣ್ಣುಗಳು ಒದ್ದೆಯಾಗುತ್ತಿರಲು ಶಸ್ತ್ರಗಳನ್ನು ಬಿಸುಟು ಓಡುತ್ತಾ ಬಂದು ಅಣ್ಣನ ಅಡಿಗಳ ಮೇಲೆ ಬಿದ್ದು ಅವನಿಗಿಂತೆಂದನು.

254. "ನಾನು ನಿನ್ನ ಒಡಹುಟ್ಟಿದ ತಮ್ಮ ವಿಜಯದತ್ತನೆಂಬವನು. ನಾವಿಬ್ಬರೂ ಬ್ರಾಹ್ಮಣಶ್ರೇಷ್ಠ ಗೋವಿಂದಸ್ವಾಮಿಯ ಮಕ್ಕಳು.

255. ಇಷ್ಟು ದೀರ್ಘಕಾಲದವರೆಗೆ ಹಣೆಯ ಬರೆಹದಂತೆ ನಾನು ಇಂಥ ರಾಕ್ಷಸನಾಗಿದ್ದೆನು. ಚಿತೆಯಲ್ಲಿದ್ದ ತಲೆಬುರುಡೆಯನ್ನು ಸಿಡಿಸಿದ್ದರಿಂದ ಕಪಾಲಸ್ಫೋಟ ಎಂಬುದು ನನ್ನ ಹೆಸರಾಯಿತು.

256. ನಿನ್ನನ್ನು ಕಂಡುದರಿಂದ ಈಗ ನನಗೆ ಬ್ರಾಹ್ಮಣತ್ವದ ನೆನಪು ಬಂದಿತು. ಮೋಹದಿಂದ ಚೈತನ್ಯವನ್ನು ಮುಚ್ಚಿ ಹಾಕಿದ್ದ ರಾಕ್ಷಸತ್ವವು ತೊಲಗಿತು."

257–258. ರಾಕ್ಷಸಭಾವದಿಂದ ದೋಷಕ್ಕೆ ಈಡಾಗಿದ್ದ ವಿಜಯದತ್ತನ ಶರೀರವನ್ನು ಹಾಗೆ ಅವನು ಮಾತನಾಡುತ್ತಿದ್ದಂತೆಯೇ ತಬ್ಬಿಕೊಂಡು ಅಶೋಕದತ್ತನು ಕಂಬನಿಗಳ ಹೊಳೆಗಳಿಂದ ತೊಳೆಯುತ್ತಿರುವಾಗಲೇ ಅಲ್ಲಿಗೆ ಪ್ರಜ್ಞಪ್ತಿಕೌಶಿಕನೆಂಬ ವಿದ್ಯಾಧರಗುರು ಬಾನಿನಿಂದ ಕೆಳಗೆ ಇಳಿದುಬಂದನು.

---

ಕಥಂ ಭ್ರಾತಾ ಮಮಾಶೋಕದತ್ತಃ ಸೋಽಯಮಿಹಾಗತಃ ।
ಇತಿ ಪ್ರತ್ಯಭ್ಯಜಾನಾಚ್ಚ ತತ್ಕ್ಷಣಂ ತಂ ಸವಿಸ್ಮಯಃ ॥ ೨೫೨
ತತಃ ಶಸ್ತ್ರಂ ಸಮುತ್ಸೃಜ್ಯ ಹರ್ಷಬಾಷ್ಪಾಪ್ಲುತೇಕ್ಷಣಃ ।
ಧಾವಿತ್ವಾ ಪಾದಯೋಃ ಸದ್ಯಃ ಪತಿತ್ವಾ ಚ ಜಗಾದ ತಮ್ ॥ ೨೫೩
ಅಹಂ ವಿಜಯದತ್ತಾಖ್ಯಃ ಸೋದರ್ಯಃ ಸ ತವಾನುಜಃ ।
ಆವಾಂ ದ್ವಿಜವರಸ್ಯೋಭೌ ಗೋವಿಂದಸ್ವಾಮಿನಃ ಸುತೌ ॥ ೨೫೪
ಇಯಚ್ಚಿರಂ ಚ ಜಾತೋಽಹಂ ದೈವಾದೀದೃಕ್ನಿಶಾಚರಃ ।
ಚಿತಾಕಪಾಲದಲನಾತ್ ಕಪಾಲಸ್ಫೋಟನಾಮಕಃ ॥ ೨೫೫
ತ್ವದ್ದರ್ಶನಾದಿದಾನೀಂ ಚ ಬ್ರಾಹ್ಮಣ್ಯಂ ತತ್ ಸ್ಮೃತಂ ಮಯಾ ।
ಗತಂ ಚ ರಾಕ್ಷಸತ್ವಂ ಮೇ ಮೋಹಾಚ್ಛಾದಿತಚೇತನಮ್ ॥ ೨೫೬
ಏವಂ ವಿಜಯದತ್ತಸ್ಯ ವದತಃ ಪರಿರಭ್ಯ ಸಃ ।
ಯಾವತ್ ಕ್ಷಾಲಯತೀವಾಂಗಂ ರಾಕ್ಷಸೀಭಾವದೂಷಿತಮ್ ॥ ೨೫೭
ಅಶೋಕದತ್ತೋ ಬಾಷ್ಪಾಂಬುಪೂರೈಸ್ತಾವದವಾತರತ್ ।
ಪ್ರಜ್ಞಪ್ತಿಕೌಶಿಕೋ ನಾಮ ವಿದ್ಯಾಧರಗುರುರ್ದಿವಃ ॥ ೨೫೮

259. ಆ ಗುರು ಇಬ್ಬರು ಸೋದರರ ಬಳಿಗೆ ಬಂದು ಹೇಳಿದನು. "ನೀವೆಲ್ಲರೂ ವಿದ್ಯಾಧರರು. ಶಾಪದಿಂದ ಈ ಸ್ಥಿತಿಗೆ ಸೇರಿದ್ದಿರಿ.

260. ಈಗ ನಿಮ್ಮೆಲ್ಲರಿಗೂ ಆ ಶಾಪವು ಶಾಂತವಾಗಿದೆ. ಆದ್ದರಿಂದ ನಿಮ್ಮ ಬಂಧುಗಳಿಗೆಲ್ಲ ಸಮಾನವಾದ ಈ ವಿದ್ಯೆಗಳನ್ನು ಗ್ರಹಿಸಿಕೊಳ್ಳಿರಿ.

261. ಆಮೇಲೆ ನಿಮ್ಮದೇ ಆದ ಸ್ಥಾನಕ್ಕೆ ನೀವಿಬ್ಬರೂ ನಿಮ್ಮವರನ್ನೆಲ್ಲ ಕರೆದುಕೊಂಡು ತೆರಳಿರಿ." ಹೀಗೆ ಹೇಳಿ ಅವರಿಗೆ ವಿದ್ಯೆಗಳನ್ನಿತ್ತು ಆ ಗುರು ಆಕಾಶಕ್ಕೆ ಹಾರಿಹೋದನು.

262. ಅವರಿಬ್ಬರೂ ವಿದ್ಯಾಧರರಾಗಿ ತಮ್ಮ ಸ್ವರೂಪವನ್ನರಿತುಕೊಂಡು ಚಿನ್ನದ ಕಮಲಗಳನ್ನೆತ್ತಿಕೊಂಡು ಅಲ್ಲಿಂದ ಆಕಾಶದ ಹಾದಿಯನ್ನು ಹಿಡಿದು ಹಿಮಾಚಲದ ಶಿಖರಕ್ಕೆ ಹೋದರು.

263. ಅಲ್ಲಿ ಅಶೋಕದತ್ತನು ತನ್ನ ಪ್ರಿಯೆ ರಾಕ್ಷಸರೊಡೆಯನ ಮಗಳು ವಿದ್ಯುತ್ ಪ್ರಭೆಯನ್ನು ಸಮೀಪಿಸಿದನು. ಪಾಪವು ಕಳೆಯಿತಾದುದರಿಂದ ಅವಳೂ ವಿದ್ಯಾಧರಿಯೇ ಆದಳು.

264. ಆ ಚೆಲುವೆಯೊಡನೆ ಇಬ್ಬರು ಸೋದರರೂ ಮುಗಿಲಿನ ದಾರಿಯಿಂದ ಕ್ಷಣಮಾತ್ರದಲ್ಲಿ ವಾರಾಣಸಿಗೆ ಹೋದರು.

---

ಸ ತೌ ದ್ವಾವಪ್ಯುಪೇತ್ಯೈವ ಭ್ರಾತರೌ ಗುರುರಬ್ರವೀತ್ ।
ಯೂಯಂ ವಿದ್ಯಾಧರಾಃ ಸರ್ವೇ ಶಾಪಾದೇತಾಂ ದಶಾಂ ಗತಾಃ ॥ ೨೫೯
ಅಧುನಾ ಚ ಸ ಶಾಪೋ ವಃ ಸರ್ವೇಷಾಂ ಶಾಂತಿಮಾಗತಃ ।
ತದ್‌ಗೃಹ್ಣೀತ ನಿಜಾ ವಿದ್ಯಾ ಬಂಧುಸಾಧಾರಣೀರಿಮಾಃ ॥ ೨೬೦
ವ್ರಜತಂ ಚ ನಿಜಂ ಧಾಮ ಸ್ವೀಕೃತಸ್ವಜನೌ ಯುವಾಮ್ ।
ಇತ್ಯುಕ್ತ್ವಾ ದತ್ತವಿದ್ಯೋಽಸೌ ತಯೋರ್ದ್ಯಾಮುದ್ಯಯೌ ಗುರುಃ ॥ ೨೬೧
ತೌ ಚ ವಿದ್ಯಾಧರೀಭೂತೌ ಪ್ರಬುದ್ಧೌ ಜಗ್ಮತುಸ್ತತಃ ।
ವ್ಯೋಮ್ನಾ ತದ್ಧಿಮವಚ್ಛೃಂಗಂ ಗೃಹೀತಕನಕಾಂಬುಜೌ ॥ ೨೬೨
ತತ್ರ ಚಾಶೋಕದತ್ತಸ್ತಾಂ ರಕ್ಷಃಪತಿಸುತಾಂ ಪ್ರಿಯಾಮ್ ।
ಉಪಾಗಾತ್ ಸಾಪ್ಯಭೂತ್ ಕ್ಷೀಣಶಾಪಾ ವಿದ್ಯಾಧರೀ ತದಾ ॥ ೨೬೩
ತಯಾ ಚ ಸಾಕಂ ಸುದೃಶಾ ಭ್ರಾತರೌ ತಾವುಭಾವಪಿ ।
ವಾರಾಣಸೀಂ ಪ್ರಯಯತುಃ ಕ್ಷಣಾದ್ ಗಗನಗಾಮಿನೌ ॥ ೨೬೪

265. ವಿಯೋಗದ ಬೆಂಕಿಯಿಂದ ಬೆಂದುಹೋಗುತ್ತಿದ್ದ ತಂದೆತಾಯಿಯರ ಬಳಿಗೆ ಹೋಗಿ ತಮ್ಮ ದರ್ಶನವೆಂಬ ಅಮೃತವನ್ನು ಸುರಿಸಿ ಅವರ ಬೇಗೆಯನ್ನು ಹೋಗಲಾಡಿಸಿದರು.

266. ದೇಹಗಳು ಅವೇ ಇದ್ದರೂ ವಿಚಿತ್ರವಾದ ಬೇರೆ ಜನ್ಮವನ್ನು ಪಡೆದುಕೊಂಡಿದ್ದ ಅವರಿಬ್ಬರೂ ತಂದೆತಾಯಿಗಳಿಗೆ ಮಾತ್ರವಲ್ಲ, ಜನರಿಗೂ ಸಂತೋಷಕ್ಕೆ ಕಾರಣರಾದರು.

267. ಬಹುಕಾಲಾನಂತರ ಬಂದಿದ್ದ ವಿಜಯದತ್ತನನ್ನು ತಂದೆ ಬಿಗಿಯಾಗಿ ತಬ್ಬಿಕೊಂಡಾಗ ಅವನು ತಂದೆಯ ಹೆಗಲುಗಳ ಮಧ್ಯದ ಭಾಗವನ್ನು ತುಂಬಿದಂತೆ ಮನೋರಥವನ್ನೂ ಪೂರ್ಣವಾಗಿ ತುಂಬಿದನು.

268. ಆ ವಿಷಯವನ್ನೆಲ್ಲ ತಿಳಿದುಕೊಂಡು ಅಶೋಕದತ್ತನ ಮಾವ ದೊರೆ ಪ್ರತಾಪಮುಕುಟನೂ ಸಂತೋಷದಿಂದ ಅಲ್ಲಿಗೆ ಬಂದುಸೇರಿದನು.

269. ಅವನ ಸತ್ಕಾರವನ್ನು ಸ್ವೀಕರಿಸಿದ ಅಶೋಕದತ್ತನು ತನ್ನ ಜನರೊಡನೆ ಉತ್ಸವವನ್ನಾಚರಿಸುತ್ತಿದ್ದ ರಾಜಧಾನಿಗೆ ಹೋದನು. ಅಲ್ಲಿ ಅವನ ನಲ್ಲೆಯು ಅವನಿಗಾಗಿ ಉತ್ಕಂಠಿತಳಾಗಿ ಕಾದುಕೊಂಡಿದ್ದಳು.

270. ಅಲ್ಲಿ ಅವನು ರಾಜನಿಗೆ ಅನೇಕ ಚಿನ್ನದ ಕಮಲಗಳನ್ನು ಕೊಟ್ಟನು. ತಾನು ಕೇಳಿದುದಕ್ಕಿಂತ ಹೆಚ್ಚು ಸಿಕ್ಕಿದುದರಿಂದ ರಾಜನೂ ಸಂತುಷ್ಟನಾದನು.

---

ತತ್ರ ಚೋಪೇತ್ಯ ಪಿತರೌ ವಿಪ್ರಯೋಗಾಗ್ನಿತಾಪಿತೌ ।
ನಿರವಾಪಯತಾಂ ಸದ್ಯೋ ದರ್ಶನಾಮೃತವರ್ಷಿಣೌ ॥ ೨೬೫

ಅದೇಹಭೇದೇಽಪ್ಯಾಕ್ರಾಂತಚಿತ್ರಜನ್ಮಾಂತರೌ ಚ ತೌ ।
ನ ಪಿತ್ರೋರೇವ ಲೋಕಸ್ಯಾಪ್ಯುತ್ಸವಾಯ ಬಭೂವತುಃ ॥ ೨೬೬

ಚಿರಾದ್ ವಿಜಯದತ್ತಶ್ಚ ಗಾಢಮಾಶ್ಲಿಷ್ಯತಃ ಪಿತುಃ ।
ಭುಜಮಧ್ಯಮಿವಾತ್ಯರ್ಥಂ ಮನೋರಥಮಪೂರಯತ್ ॥ ೨೬೭

ತತಸ್ತತ್ರೈವ ತದ್‌ಬುದ್ಧ್ವಾ ಪ್ರತಾಪಮುಕುಟೋಽಪಿ ಸಃ ।
ಅಶೋಕದತ್ತಶ್ವಶುರೋ ರಾಜಾ ಹರ್ಷಾದುಪಾಯಯೌ ॥ ೨೬೮

ತತ್‌ಸತ್ಕೃತಶ್ಚ ತದ್ರಾಜಧಾನೀಂ ಸೋತ್ಕಸ್ಥಿತಪ್ರಿಯಾಮ್ ।
ಅಶೋಕದತ್ತಃ ಸ್ವಜನೈಃ ಸಾರ್ಧಂ ಬದ್ಧೋತ್ಸವಾಮಗಾತ್ ॥ ೨೬೯

ದದೌ ಚ ಕನಕಾಬ್ಜಾನಿ ರಾಜ್ಞೇ ತಸ್ಮೈ ಬಹೂನಿ ಸಃ ।
ಅಭ್ಯರ್ಥಿತಾಧಿಕಪ್ರಾಪ್ತಿಹೃಷ್ಟಃ ಸೋಽಪ್ಯಭವನ್ನೃಪಃ ॥ ೨೭೦

271. ಎಲ್ಲರೂ ಅಲ್ಲಿ ಸೇರಿದ್ದಾಗ ತಂದೆ ಗೋವಿಂದಸ್ವಾಮಿಯು ಆಶ್ಚರ್ಯ ಕುತೂಹಲಗಳಿಂದ ವಿಜಯದತ್ತನನ್ನು ಹೀಗೆ ಪ್ರಶ್ನಿಸಿದನು.

272. "ಮಗನೆ, ಅಂದು ಇರುಳಿನಲ್ಲಿ ಸುಡುಗಾಡಿನಲ್ಲಿ ನೀನು ರಾಕ್ಷಸನಾಗಿಬಿಟ್ಟಿದ್ದೆ. ಆಮೇಲೆ ನಿನ್ನ ವೃತ್ತಾಂತವೇನಾಯಿತು, ಬಣ್ಣಿಸು."

273–274. ಆಗ ವಿಜಯದತ್ತನು ಇಂತೆಂದನು. "ಅಪ್ಪ ನಾನು ಚಪಲತೆಯಿಂದ ಚಿತೆಯಲ್ಲಿ ಉರಿಯುತ್ತಿದ್ದ ತಲೆಬುರುಡೆಯನ್ನು ಸಿಡಿಸಿದೆನು. ವಿಧಿವಶದಿಂದ ಅದರಲ್ಲಿದ್ದ ವಸೆಯ ರಾಶಿಯು ನನ್ನ ಬಾಯಿನೊಳಗೆ ತೂರಿತು. ಆಗ ನಾನು ರಾಕ್ಷಸನಾದದ್ದನ್ನೂ ಮಾಯೆಯಿಂದ ಮೋಹಕ್ಕೆ ಸಿಕ್ಕಿದುದನ್ನೂ ನೀನು ನೋಡಿದೆಯಷ್ಟೆ

275. ರಾಕ್ಷಸರು ನನಗೆ 'ಕಪಾಲಸ್ಫೋಟ' ಎಂಬ ಹೆಸರನ್ನಿಟ್ಟು ಅವರ ಜೊತೆಗೆ ಕರೆದರು. ನಾನು ಅವರ ಮಧ್ಯದಲ್ಲಿ ಸೇರಿಕೊಂಡೆನು.

276. ಅವರು ಕ್ರಮವಾಗಿ ನನ್ನನ್ನು ರಾಕ್ಷಸರ ರಾಜನ ಬಳಿಗೆ ಒಯ್ದರು. ಅವನು ನನ್ನನ್ನು ನೋಡಿ ಪ್ರಸನ್ನನಾಗಿ ನನ್ನನ್ನು ಸೇನಾಪತಿಯನ್ನಾಗಿ ನಿಯೋಜಿಸಿದನು.

277. ಆಮೇಲೆ ಯಾವಾಗಲೋ ಒಮ್ಮೆ ರಾಕ್ಷಸರಾಜನು ಜಂಭದಿಂದ ಗಂಧರ್ವರ ಮೇಲೆ ಯುದ್ಧಕ್ಕೆ ಹೋಗಿ ಕಾಳಗದಲ್ಲಿ ಶತ್ರುಗಳಿಂದ ಹತನಾದನು.

---

ತತೋ ವಿಜಯದತ್ತಂ ತಂ ಸರ್ವೇಷ್ವತ್ರ ಸ್ಥಿತೇಷು ಸಃ ।
ಪಿತಾ ಪಪ್ರಚ್ಛ ಗೋವಿಂದಸ್ವಾಮೀ ಸಾಶ್ಚರ್ಯಕೌತುಕಃ ॥ ೨೭೧
ತದಾ ಶ್ಮಶಾನೇ ಯಾಮಿನ್ಯಾಂ ರಾಕ್ಷಸತ್ವಂ ಗತಸ್ಯ ತೇ ।
ಅಭವತ್ ಕೀದೃಶೋ ವತ್ಸ ವೃತ್ತಾಂತೋ ವರ್ಣ್ಯತಾಮಿತಿ ॥ ೨೭೨
ತತೋ ವಿಜಯದತ್ತಸ್ತು ಬಭಾಷೇ ತಾತ ಚಾಪಲಾತ್ ।
ಪ್ರಸ್ಫೋಟಿತಚಿತಾದೀಪ್ತಕಪಾಲೋಽಹಂ ವಿಧೇರ್ವಶಾತ್ ॥ ೨೭೩
ಮುಖಪ್ರವಿಷ್ಟಯಾ ಸದ್ಯಸ್ತದ್ವಸಾಛಟಯಾ ತದಾ ।
ರಕ್ಷೋಭೂತಸ್ತ್ವಯಾ ತಾವದ್ ದೃಷ್ಟೋ ಮಾಯಾವಿಮೋಹಿತಃ ॥ ೨೭೪
ಕಪಾಲಸ್ಫೋಟ ಇತ್ಯೇವಂ ನಾಮ ಕೃತ್ವಾ ಹಿ ರಾಕ್ಷಸೈಃ ।
ತತೋಽನ್ಯೈರಹಮಾಹೂತಸ್ತನ್ಮಧ್ಯೇ ಮಿಲಿತೋಽಭವಮ್ ॥ ೨೭೫
ತೈಶ್ಚ ನೀತೋ ನಿಜಸ್ಯಾಸ್ಮಿ ಪಾರ್ಶ್ವಂ ರಕ್ಷಪತೇಃ ಕ್ರಮಾತ್ ।
ಸೋಽಪಿ ದೃಷ್ಟ್ವೈವ ಮಾಂ ಪ್ರೀತಃ ಸೇನಾಪತ್ಯೇ ನಿಯೋಜಿತಃ ॥ ೨೭೬
ತತಃ ಕದಾಚಿದ್ ಗಂಧರ್ವಾನ್ ಅಭಿಯೋಕ್ತುಂ ಮದೇನ ಸಃ ।
ಗತೋ ರಕ್ಷಪತಿಸ್ತತ್ರ ಸಂಗ್ರಾಮೇ ನಿಹತೋಽರಿಭಿಃ ॥ ೨೭೭

279. ಆ ಕ್ಷಣದಲ್ಲೇ ನನ್ನ ಸೇವಕರು ನನ್ನನ್ನು ರಾಜನನ್ನಾಗಿ ಮಾಡಿದರು. ಅಂದಿನಿಂದ ನಾನು ಆ ಪಟ್ಟಣದಲ್ಲೇ ತಂಗಿ ರಾಜ್ಯವನ್ನಾಳುತ್ತ ಬಂದೆ. ಅಲ್ಲಿ ಆಕಸ್ಮಿಕವಾಗಿ ಚಿನ್ನದ ಕಮಲಗಳಿಗಾಗಿ ಬಂದ ಅಣ್ಣ ಅಶೋಕದತ್ತನ ದರ್ಶನದಿಂದ ನನ್ನ ಆ ರಾಕ್ಷಸಾವಸ್ಥೆ ಕಳೆದುಹೋಯಿತು.

280. ಆಮೇಲೆ ಶಾಪಮುಕ್ತಿಯ ಕಾರಣದಿಂದ ನಾವು ನಮ್ಮ ವಿದ್ಯೆಗಳನ್ನೆಲ್ಲ ಹೇಗೆ ಪಡೆದುಕೊಂಡೆವು ಎಂಬುದನ್ನು ಅಣ್ಣನು ಸಂಪೂರ್ಣವಾಗಿ ನಿಮಗೆ ತಿಳಿಸುವನು."

281. ಹೀಗೆ ವಿಜಯದತ್ತನು ತನ್ನ ವೃತ್ತಾಂತವನ್ನು ಹೇಳಿದ ಮೇಲೆ ಅಶೋಕದತ್ತನು ಆ ವಿಷಯವನ್ನೆಲ್ಲ ಮೊದಲಿನಿಂದ ಬಣ್ಣಿಸಿದನು.

282. ಹಿಂದೆ ನಾವಿಬ್ಬರೂ ವಿದ್ಯಾಧರರಾಗಿದ್ದಾಗ ಮುಗಿಲಿನಿಂದ (ಪ್ರಯಾಣ ಮಾಡುತ್ತಾ) ಗಾಲವನ ಆಶ್ರಮದ ಬಳಿ ಗಂಗೆಯಲ್ಲಿ ಮೀಯುತ್ತಿದ್ದ ಮುನಿಕನ್ಯೆಯರನ್ನು ನೋಡಿದೆವು.

283. ನಮ್ಮಂತೆಯೇ ಅವರಿಗೂ ನಮ್ಮಲ್ಲಿ ಆಸೆಯು ಹುಟ್ಟಿದಾಗ ಅವರೊಡನೆ ನಾವು ಏಕಾಂತವನ್ನು ಬಯಸಿದೆವು. ಕೂಡಲೇ ದಿವ್ಯದೃಷ್ಟಿಯಿಂದ ಅದನ್ನು ಅರಿತ ಅವರ ಬಂಧುಗಳು ಸಿಟ್ಟಿನಿಂದ ನಮಗೆ ಶಾಪವನ್ನಿತ್ತರು.

---

ತದೈವ ಪ್ರತಿಪನ್ನಂ ಚ ಮದ್ಭೃತ್ಯೈರ್ಮಮ ಶಾಸನಮ್ ।
ತತೋಽಹಂ ರಕ್ಷಸಾಂ ರಾಜ್ಯಮಕಾರ್ಷಂ ತತ್ಪುರೇ ಸ್ಥಿತಃ ॥ ೨೭೮
ತತ್ರಾಕಸ್ಮಾಚ್ಚ ಹೇಮಾಬ್ಜಹೇತೋಃ ಪ್ರಾಪ್ತಸ್ಯ ದರ್ಶನಾತ್ ।
ಆರ್ಯಸ್ಯಾಶೋಕದತ್ತಸ್ಯ ಪ್ರಶಾಂತಾ ಸಾ ದಶಾ ಮಮ ॥ ೨೭೯
ಅನಂತರಂ ಯಥಾಸ್ಮಾಭಿಃ ಶಾಪಮೋಕ್ಷವಶಾನ್ನಿಜಾಃ ।
ವಿದ್ಯಾಃ ಪ್ರಾಪ್ತಾಸ್ತಥಾರ್ಯೋ ವಃ ಕೃತ್ಸ್ನಮಾವೇದಯಿಷ್ಯತಿ ॥ ೨೮೦
ಏವಂ ವಿಜಯದತ್ತೇನ ತೇನ ತತ್ರ ನಿವೇದಿತೇ ।
ಅಶೋಕದತ್ತಃ ಸ ತದಾ ತದಾಮೂಲಾದವರ್ಣಯತ್ ॥ ೨೮೧
ಪುರಾ ವಿದ್ಯಾಧರೌ ಸಂತೌ ಗಗನಾದ್ ಗಾಲವಾಶ್ರಮೇ ।
ಆವಾಂ ಸ್ನಾಂತೀರಪಶ್ಯಾವ ಗಂಗಾಯಾಂ ಮುನಿಕನ್ಯಕಾಃ ॥ ೨೮೨
ತುಲ್ಯಾಭಿಲಾಷಾಸ್ತಾಶ್ಚಾತ್ರ ವಾಂಛಂತೌ ಸಹಸಾ ರಹಃ ।
ಬುದ್ಧ್ವಾ ತದ್ಬಂಧುಭಿಃ ಕ್ರೋಧಾಚ್ಛಪ್ತೌ ಸ್ವೋ ದಿವ್ಯದೃಷ್ಟಿಭಿಃ ॥ ೨೮೩

284. "ಪಾಪವನ್ನು ಆಚರಿಸಿದ ನೀವಿಬ್ಬರೂ ಮನುಷ್ಯಯೋನಿಯಲ್ಲಿ ಹುಟ್ಟಿರಿ. ಅಲ್ಲಿಯೂ ನಿಮ್ಮಿಬ್ಬರಿಗೂ ವಿಚಿತ್ರವಾದ ವಿಯೋಗವು ಉಂಟಾಗುವುದು.

285–286. ನಿಮ್ಮಿಬ್ಬರಲ್ಲಿ ಮನುಷ್ಯರಿಗೆ ಗೋಚರವಾಗದೆ ಅತಿದೂರದ ದೇಶಕ್ಕೆ ಬಂದ ಒಬ್ಬನನ್ನು ಇನ್ನೊಬ್ಬನು ಯಾವಾಗ ನೋಡಿ ಗುರುತು ಹಚ್ಚುವನೋ ಆಗ ವಿದ್ಯಾಧರಗುರುವಿನಿಂದ ವಿದ್ಯೆಗಳನ್ನು ಪಡೆದುಕೊಂಡು ಶಾಪಮುಕ್ತರಾಗಿ ನೀವಿಬ್ಬರೂ ಮತ್ತೆ ವಿದ್ಯಾಧರರಾಗುವಿರಿ ಮತ್ತು ನಿಮ್ಮ ಬಂಧುಗಳೊಡನೆ ಮತ್ತೆ ಸೇರಿಕೊಳ್ಳುವಿರಿ."

287. ಹೀಗೆ ಆ ಋಷಿಗಳಿಂದ ಶಪ್ತರಾಗಿ ನಾವಿಬ್ಬರೂ ಇಲ್ಲಿ ಹುಟ್ಟಿದೆವು. ನಮಗೆ ಪರಸ್ಪರ ಬೇರ್ಪಡಿಕೆ ಹೇಗಾಯಿತೆಂಬುದು ಎಲ್ಲ ನಿಮಗೆ ತಿಳಿದೇ ಇದೆ.

288. ಈಗ ತಾನೆ ಕಮಲಗಳಿಗೋಸ್ಕರ ನನ್ನ ಅತ್ತೆಯ ಸಿದ್ಧಿಗಳ ಪ್ರಭಾವದಿಂದ ರಾಕ್ಷಸರ ರಾಜನ ಪಟ್ಟಣಕ್ಕೆ ನಾನು ಹೋದಾಗ ಅಲ್ಲಿ ನನಗೆ ನನ್ನ ತಮ್ಮನು ದೊರಕಿದನು.

289. ಅಲ್ಲಿಯೇ ಗುರು ಪ್ರಜ್ಞಪ್ತಿಕೌಶಿಕನಿಂದ ವಿದ್ಯೆಗಳನ್ನು ಪಡೆದುಕೊಂಡು ಕೂಡಲೇ ವಿದ್ಯಾಧರರಾಗಿ ನಾವು ಬೇಗನೆ ಇಲ್ಲಿಗೆ ಬಂದೆವು."

---

ಪಾಪಾಚಾರೌ ಪ್ರಜಾಯೇಥಾಂ ಮರ್ತ್ಯಯೋನೌ ಯುವಾಮುಭೌ ।
ತತ್ರಾಪಿ ವಿಪ್ರಯೋಗಶ್ಚ ವಿಚಿತ್ರೋ ವಾಂ ಭವಿಷ್ಯತಿ ॥ ೨೮೪
ಮಾನುಷಾಗೋಚರೇ ದೇಶೇ ವಿಪ್ರಕೃಷ್ಟೇಽಪ್ಯುಪಾಗತಮ್ ।
ಏಕಂ ದೃಷ್ಟ್ವಾ ದ್ವಿತೀಯೋ ವಾಂ ಯದಾ ಪ್ರಜ್ಞಾನಮಾಪ್ಸ್ಯತಿ ॥ ೨೮೫
ತದಾ ವಿದ್ಯಾಧರಗುರೋರ್ವಿದ್ಯಾಂ ಪ್ರಾಪ್ಯ ಭವಿಷ್ಯಥಃ ।
ಪುನರ್ವಿದ್ಯಾಧರೌ ಯುಕ್ತೌ ಶಾಪಮುಕ್ತೌ ಸ್ವಬಂಧುಭಿಃ ॥ ೨೮೬
ಏವಂ ತೈರ್ಮುನಿಭಿಃ ಶಪ್ತೌ ಜಾತಾವಾವಾಮುಭಾವಿಹ ।
ವಿಯೋಗೋಽತ್ರ ಯಥಾಭೂತಸ್ತತ್ಸರ್ವಂ ವಿದಿತಂ ಚ ವಃ ॥ ೨೮೭
ಇದಾನೀಂ ಪದ್ಮಹೇತೋಶ್ಚ ಶ್ವಶ್ರೂಸಿದ್ಧಿಪ್ರಭಾವತಃ ।
ರಕ್ಷಃಪತೇಃ ಪುರಂ ಗತ್ವಾ ಪ್ರಾಪ್ತೋಽಯಂ ಚಾನುಜೋ ಮಯಾ ॥ ೨೮೮
ತತ್ರೈವ ಚ ಗುರೋಃ ಪ್ರಾಪ್ಯ ವಿದ್ಯಾಃ ಪ್ರಜ್ಞಪ್ತಿಕೌಶಿಕಾತ್ ।
ಸದ್ಯೋ ವಿದ್ಯಾಧರೀಭೂಯ ವಯಂ ಕ್ಷಿಪ್ರಮಿಹಾಗತಾಃ ॥ ೨೮೯

290. ಹೀಗೆ ತಂದೆತಾಯಿಗಳಿಗೂ ಆ ನಲ್ಲೆಗೂ ರಾಜಪುತ್ರಿಗೂ ಹೇಳಿ ಶಾಪವೆಂಬ ಕತ್ತಲೆಯಿಂದ ಬಿಡುಗಡೆಯನ್ನು ಪಡೆದು ಸಂತುಷ್ಟನಾಗಿದ್ದ ವಿಚಿತ್ರ ಚರಿತೆಯ ಅಶೋಕದತ್ತನು ತನ್ನ ವಿಶಿಷ್ಟವಾದ ವಿದ್ಯೆಗಳನ್ನು ಅವರಿಗೂ ಆಗ ಹಂಚಿಕೊಟ್ಟನು. ಅದರಿಂದ ಅವರೆಲ್ಲರ ಮನಸ್ಸೂ ಜಾಗೃತವಾಯಿತು ಮತ್ತು ಅವರೆಲ್ಲ ವಿದ್ಯಾಧರರಾದರು.

291. ಅನಂತರ ರಾಜನಿಗೆ ಬೀಳ್ಕೊಡುಗೆಯನ್ನು ಹೇಳಿ ತಂದೆತಾಯಿಗಳೊಡನೆ ಮತ್ತು ಇಬ್ಬರು ಪತ್ನಿಯರೊಡನೆ ಆ ಧನ್ಯ ಅಶೋಕದತ್ತನು ಮೇಲೆ ಹಾರಿ ಆಕಾಶ ಮಾರ್ಗದಿಂದ ವೇಗವಾಗಿ ತನ್ನ ಚಕ್ರವರ್ತಿಯ ಲೋಕಕ್ಕೆ ತೆರಳಿದನು.

292. ಅಲ್ಲಿ ಚಕ್ರವರ್ತಿಯನ್ನು ಕಂಡು ಅವನಿಂದ ಅಪ್ಪಣೆಯನ್ನು ಪಡೆದು ಅಶೋಕವೇಗ ಎಂಬ ಹೆಸರನ್ನು ಧರಿಸಿದನು.  ಅವನ ತಮ್ಮನೂ ವಿಜಯವೇಗ ಎಂಬ ಹೆಸರನ್ನು ಪಡೆದನು.

293. ಶ್ರೇಷ್ಠ ವಿದ್ಯಾಧರತರುಣರಾಗಿ ಅವರಿಬ್ಬರೂ ತಮ್ಮ ಜನರಿಂದ ಅನುಸರಿಸಲ್ಪಡುತ್ತಾ ತಮ್ಮ ನಿವಾಸಸ್ಥಾನವಾದ ಗೋವಿಂದಕೂಟ ಎಂಬ ಶ್ರೇಷ್ಠವಾದ ಬೆಟ್ಟಕ್ಕೆ ಹೋದರು.

---

ಇತ್ಯುಕ್ತ್ವಾ ಪಿತರೌ ಚ ತೌ ಪ್ರಿಯತಮಾಂ ತಾಂ ಚಾತ್ಮಜಾಂ ಭೂಪತೇಃ
ಸದ್ಯಃ ಶಾಪತಮೋವಿಮೋಕ್ಷಮುದಿತೋ ವಿದ್ಯಾವಿಶೇಷೈರ್ನಿಜೈಃ ।
ತೈಸ್ತೈಃ ಸಂವ್ಯಭಜದ್ ವಿಚಿತ್ರಚರಿತಃ ಸೋಽಶೋಕದತ್ತಸ್ತದಾ
ಯೇನೈತೇ ಸಪದಿ ಪ್ರಬುದ್ಧಮನಸೋಽಜಾಯಂತ ವಿದ್ಯಾಧರಾಃ ॥ ೨೯೦
ತತಸ್ತಮಾಮಂತ್ರ್ಯ ನೃಪಂ ಸ ಸಾಕಂ ಮಾತಾಪಿತೃಭ್ಯಾಂ
ದಯಿತಾದ್ವಯೇನ ।
ಉತ್ಪತ್ಯ ಧನ್ಯೋ ನಿಜಚಕ್ರವರ್ತಿಧಾಮ ದ್ಯುಮಾರ್ಗೇಣ ಜವೀ ಜಗಾಮ ॥
೨೯೧
ತತ್ರಾಲೋಕ್ಯ ತಮಾಜ್ಞಾಂ ಪ್ರಾಪ್ಯ ಚ ತಸ್ಮಾದಶೋಕವೇಗ ಇತಿ ।
ನಾಮ ಸ ಬಿಭ್ರತ್ ಸೋಽಪಿ ಚ ತದ್‌ಭ್ರಾತಾ ವಿಜಯವೇಗ ಇತಿ ॥ ೨೯೨
ವಿದ್ಯಾಧರವರತರುಣೌ ಸ್ವಜನಾನುಗತಾವುಭೌ ನಿಜನಿವಾಸಮ್ ।
ಗೋವಿಂದಕೂಟಸಂಜ್ಞಕಮಚಲವರಂ ಭ್ರಾತರೌ ಯಯತುಃ ॥ ೨೯೩

294. ವಾರಾಣಸೀರಾಜ ಪ್ರತಾಪಮುಕುಟನೂ ಅಚ್ಚರಿಗೆ ಈಡಾಗಿ ತನ್ನ ದೇವಾಲಯದಲ್ಲಿ ಇನ್ನೊಂದು ಕಲಶದ ಮೇಲೆ ಒಂದು ಚಿನ್ನದ ಕಮಲವನ್ನಿಟ್ಟು, ಅಶೋಕದತ್ತನೇ ನೀಡಿದ್ದ ಬೇರೆ ಚಿನ್ನದ ಕಮಲಗಳಿಂದ ಶಿವನನ್ನು ಪೂಜಿಸಿ, ಅವನೊಡನೆ ಬೆಳೆಸಿದ್ದ ನೆಂಟತನದ ಹೆಚ್ಚುಗಾರಿಕೆಯಿಂದ ಸಂತೋಷಪಟ್ಟು ತನ್ನ ವಂಶವು ಕೃತಾರ್ಥವಾಯಿತು ಎಂದುಕೊಂಡನು.

295. ಹೀಗೆ ದಿವ್ಯ ಪುರುಷರೂ ಯಾವುದೋ ಕಾರಣದಿಂದ ಈ ಜೀವಲೋಕದಲ್ಲಿ ಇಳಿದು ಸಾಮಾನ್ಯವ್ಯಕ್ತಿಗಳಾಗಿರುತ್ತಾರೆ. ಆದರೆ ಅವರು ತಮಗೆ ಯೋಗ್ಯವಾದ ಬಲವನ್ನೂ ಉತ್ಸಾಹವನ್ನೂ ತೋರಿಸಿ ಸಿಗುವುದಕ್ಕೆ ಕಷ್ಟವಾದ ಸಿದ್ಧಿಗಳನ್ನೂ ಪಡೆದುಕೊಳ್ಳುತ್ತಾರೆ.

296. ಶಕ್ತಿಯ ಸಾಗರದಂತಿರುವ ಶಕ್ತಿದೇವನೇ, ನೀನೂ ಯಾವನೋ ದೇವಾಂಶಸಂಭೂತನೇ ಇರಬೇಕು ಎಂದುಕೊಂಡಿದ್ದೇನೆ. ನಿನ್ನ ಇಷ್ಟಾರ್ಥದ ಸಿದ್ಧಿಯೂ ಆಗುವುದು. ಪ್ರಾಯಶಃ, ಮಾಡಲು ಕಷ್ಟವಾದ ಕೆಲಸಗಳಲ್ಲೂ ದೊಡ್ಡವರಿಗಿರುವ ಉತ್ಸಾಹವು ಅವರ ಪ್ರಕೃತಿಯ ವೈಶಿಷ್ಟ್ಯವನ್ನು ತೋರಿಸುತ್ತದೆ.

---

ಸೋಽಪ್ಯಾಶ್ಚರ್ಯವಶಃ ಪ್ರತಾಪಮುಕುಟೋ ವಾರಾಣಸೀಭೂಪತಿಃ
ಸ್ವಸ್ಮಿನ್ ದೇವಕುಲೇ ದ್ವಿತೀಯಕಲಶನ್ಯಸ್ತೈಕಹೇಮಾಂಬುಜಃ ।
ತದ್ದತ್ತೈರಪರೈಃ ಸುವರ್ಣಕಮಲೈರಭ್ಯರ್ಚ್ಯತ್ರ್ಯಂಬಕ—
ಸ್ತತ್ಸಂಬಂಧಮಹತ್ತಯಾ ಪ್ರಮುದಿತೋ ಮೇನೇ ಕೃತಾರ್ಥಂ
ಕುಲಮ್ ॥ ೨೯೪

ಏವಂ ದಿವ್ಯಾಃ ಕಾರಣೇನಾವತೀರ್ಣಾಃ
ಜಾಯಂತೇಽಸ್ಮಿನ್ ಜಂತವೋ ಜೀವಲೋಕೇ ।
ಸತ್ತ್ವೋತ್ಸಾಹೌ ಸ್ವೋಚಿತೌ ತೇ ದಧಾನಾ
ದುಷ್ಪ್ರಾಪಾಮಪ್ಯರ್ಥಸಿದ್ಧಿಂ ಲಭಂತೇ ॥ ೨೯೫
ತತ್ತ್ವಸಾಗರ ಭವಾನಪಿ ಕೋಽಪಿ ಜಾನೇ
ದೇವಾಂಶ ಏವ ಭವಿತಾ ಚ ಯಥೇಷ್ಟಸಿದ್ಧಿಃ ।
ಪ್ರಾಯಃ ಕ್ರಿಯಾಸು ಮಹತಾಮಪಿ ದುಷ್ಕರಾಸು
ಸೋತ್ಸಾಹತಾ ಕಥಯತಿ ಪ್ರಕೃತೇರ್ವಿಶೇಷಮ್ ॥ ೨೯೬

297. ನಿನಗೆ ಇಷ್ಟವಾಗಿರುವ ಆ ದಿವ್ಯವಾದ ರಾಜಕುಮಾರಿ ಕನಕರೇಖೆಯು ಹಾಗಿಲ್ಲದ ಪಕ್ಷದಲ್ಲಿ ಕನಕಪುರಿಯನ್ನು ನೋಡಿದವನನ್ನೇ ಪತಿಯಾಗಿ ವರಿಸುತ್ತೇನೆ ಎಂದು ಏಕೆ ಹೇಳಬೇಕಾಗಿತ್ತು ?

298. ಹೀಗೆ ಶಕ್ತಿದೇವನು ಏಕಾಂತದಲ್ಲಿ ವಿಷ್ಣುದತ್ತನಿಂದ ಈ ರಸಮಯವಾದ ಕಥೆಗಳ ರಾಶಿಯನ್ನು ಕೇಳಿ ಮನಸ್ಸಿನಲ್ಲಿ ಕನಕಪುರಿಯನ್ನು ನೋಡುವ ಅಭಿಲಾಷೆಯನ್ನುಳ್ಳವನಾಗಿ ಧೈರ್ಯವನ್ನು ತಳೆದು ಆ ರಾತ್ರಿಯನ್ನು ಕಳೆದನು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದ ಚತುರ್ದಾರಿಕಾಲಂಬಕದಲ್ಲಿ**

**ಎರಡನೆಯ ತರಂಗ ಮುಗಿಯಿತು.**

---

ಸಾಪಿ ತ್ವದೀಪ್ಸಿತಾ ನನು ದಿವ್ಯಾ ರಾಜಾತ್ಮಜಾ ಕನಕರೇಖಾ ।
ಬಾಲಾನ್ಯಥಾ ಹಿ ವಾಂಛತಿ ಕನಕಪುರೀದರ್ಶಿನಂ ಕಥಂ ಹಿ ಪತಿಮ್ ॥ ೨೯೭
ಇತಿ ರಹಸಿ ನಿಶಮ್ಯ ವಿಷ್ಣುದತ್ತಾತ್
ಸರಸಕಥಾಪ್ರಕರಂ ಸ ಶಕ್ತಿದೇವಃ ।
ಹೃದಿ ಕನಕಪುರೀವಿಲೋಕನೈಷೀ
ಧೃತಿಮವಲಂಬ್ಯ ನಿನಾಯ ಚ ತ್ರಿಯಾಮಾಮ್ ॥ ೨೯೮

**ಇತಿ ಮಹಾಕವಿ ಶ್ರೀಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**ಚತುರ್ದಾರಿಕಾಲಂಬಕೇ ದ್ವಿತೀಯಸ್ತರಂಗಃ ।**

## ಮೂರನೆಯ ತರಂಗ

1. ಆ (ಉತ್ಪಲ) ದ್ವೀಪದಲ್ಲಿ ಬೆಳಗಾದ ಮೇಲೆ ಮಠದಲ್ಲಿದ್ದ ಶಕ್ತಿದೇವನ ಬಳಿಗೆ ಬೆಸ್ತರ ರಾಜ ಸತ್ಯವ್ರತನು ಬಂದನು.
2. ಹಿಂದೆ ಒಪ್ಪಿಕೊಂಡಿದ್ದ ಹಾಗೆ ಅವನು ಸಮೀಪಕ್ಕೆ ಬಂದು ಮಾತನಾಡಿದನು. "ಬ್ರಾಹ್ಮಣಶ್ರೇಷ್ಠನೆ, ನಿನ್ನ ಇಷ್ಟಾರ್ಥದ ಸಿದ್ಧಿಗೋಸ್ಕರ ನಾನೊಂದು ಉಪಾಯವನ್ನು ಯೋಚಿಸಿದ್ದೇನೆ
3. ಸಮುದ್ರದ ಮಧ್ಯದಲ್ಲಿ ರತ್ನಕೂಟ ಎಂಬ ಹೆಸರಿನ ಉತ್ತಮ ದ್ವೀಪವಿದೆ. ಅಲ್ಲಿ ಸಮುದ್ರರಾಜನೇ ಪ್ರತಿಷ್ಠೆಗೈದಿರುವ ಭಗವಾನ್ ಹರಿಯು ಇದ್ದಾನೆ.
4. ಆಷಾಢಮಾಸದ ಶುಕ್ಲಪಕ್ಷದ ದ್ವಾದಶಿಯಂದು ಅಲ್ಲಿ ನಡೆಯುವ ಯಾತ್ರೋತ್ಸವದಲ್ಲಿ ಪೂಜೆಯನ್ನು ನೆರವೇರಿಸಲು ಎಲ್ಲ ದ್ವೀಪಗಳಿಂದ ಜನರು ಪ್ರಯತ್ನಪಟ್ಟು ಬರುತ್ತಾರೆ.
5. ಅಲ್ಲೇನಾದರೂ ಕನಕಪುರಿಯ ಬಗೆಗೆ ಹೇಗಾದರೂ ತಿಳಿದುಕೊಳ್ಳಬಹುದೇನೋ. ಆದ್ದರಿಂದ ಬಾ, ಅಲ್ಲಿಗೆ ಹೋಗೋಣ. ಆ ದಿನವು ತುಂಬ ಹತ್ತಿರದಲ್ಲೇ ಇದೆಯಷ್ಟೆ"

---

## ತೃತೀಯಸ್ತರಂಗಃ

ತತಸ್ತತ್ರೋತ್‌ಸ್ಥಲದ್ವೀಪೇ ಪ್ರಭಾತೇ ತಂ ಮಠಸ್ಥಿತಮ್ ।
ಶಕ್ತಿದೇವಂ ಸ ದಾಶೇಂದ್ರಃ ಸತ್ಯವ್ರತ ಉಪಾಯಯೌ ॥ ೧
ಸ ಚ ಪ್ರಾಕ್ ಪ್ರತಿಪನ್ನಃ ಸನ್ನುಪೇತ್ಯೈನಮಭಾಷತ ।
ಬ್ರಹ್ಮಂಸ್ತ್ವದಿಷ್ಟಸಿದ್ಧ್ಯರ್ಥಮುಪಾಯಶ್ಚಿಂತಿತೋ ಮಯಾ ॥ ೨
ಅಸ್ತಿ ದ್ವೀಪವರಂ ಮಧ್ಯೇ ರತ್ನಕೂಟಾಖ್ಯಮಂಬುಧೇಃ ।
ಕೃತಪ್ರತಿಷ್ಠಸ್ತತ್ರಾಸ್ತೇ ಭಗವಾನ್ ಹರಿರಬ್ಧಿನಾ ॥ ೩
ಆಷಾಢಶುಕ್ಲದ್ವಾದಶ್ಯಾಂ ತತ್ರ ಯಾತ್ರೋತ್ಸವೇ ಸದಾ ।
ಆಯಾಂತಿ ಸರ್ವದ್ವೀಪೇಭ್ಯಃ ಪೂಜಾಯೈ ಯತ್ನತೋ ಜನಾಃ ॥ ೪
ತತ್ರ ಜ್ಞಾಯೇತ ಕನಕಪುರೀ ಸಾ ಜಾತುಚಿತ್ ಪುರೀ ।
ತದೇಹಿ ತತ್ರ ಗಚ್ಛಾವಃ ಪ್ರತ್ಯಾಸನ್ನಾ ಹಿ ಸಾ ತಿಥಿಃ ॥ ೫

೬ ಹೀಗೆ ಸತ್ಯವ್ರತನು ಹೇಳಿದಾಗ ಸಂತುಷ್ಟನಾದ ಶಕ್ತಿದೇವನು ಹಾಗೆಯೇ ಮಾಡೋಣ ಎಂದು ಹೇಳಿ, ವಿಷ್ಣುದತ್ತನು ತಯಾರಿಸಿಕೊಟ್ಟ ಬುತ್ತಿಯನ್ನು ಎತ್ತಿಕೊಂಡನು.

7. ಆಮೇಲೆ ಸತ್ಯವ್ರತನು ನೀರಿಗಿಳಿಸಿದ ದೋಣಿಯನ್ನೇರಿ ಶಕ್ತಿದೇವನು ಅವನೊಡನೆ ಕಡಲ ದಾರಿಯಿಂದ ಬೇಗಬೇಗನೆ ಪ್ರಯಾಣ ಮಾಡಿದನು.

8. ಅದ್ಭುತಗಳಿಗೆ ಮನೆಯಾಗಿದ್ದ, ದ್ವೀಪಗಳಂಥ ಜಲಚರಗಳನ್ನು ಹೊಂದಿದ್ದ ಆ ಸಮುದ್ರದಲ್ಲಿ ಹೋಗುತ್ತಿದ್ದಾಗ ನಾವಿಕನಾಗಿದ್ದ ಸತ್ಯವ್ರತನನ್ನು ಅವನು ಕೇಳಿದನು.

9. "ಇಲ್ಲಿಂದ ದೂರದಲ್ಲಿ ವಿಶಾಲವಾಗಿ ಸಮುದ್ರದಲ್ಲಿ ಕಾಣಿಸುತ್ತಿರುವುದೇನು ? ಅಕಸ್ಮಾತ್ತಾಗಿ ಮೇಲಕ್ಕೆ ಬಂದ ರೆಕ್ಕೆಗಳಿರುವ ಬೆಟ್ಟದಂತೆ ಅದು ಕಾಣಿಸುತ್ತದೆಯಲ್ಲ ?"

10. ಅದಕ್ಕೆ ಸತ್ಯವ್ರತನು ಹೇಳಿದನು. "ಇದು ದೇವರ ಆಲದ ಮರ. ಅದರ ಬುಡದಲ್ಲಿ ಬಹಳ ದೊಡ್ಡ ಸುಳಿ ಇರುವ ಬಡಬಾಗ್ನಿಯೆಂಬ ಕಡಲುಗಿಚ್ಚಿನ ಮೂಲವಿದೆ ಎಂದು ಹೇಳುತ್ತಾರೆ.

11. ಈ ಪ್ರದೇಶವನ್ನು ತಪ್ಪಿಸಿ ಈ ಭಾಗದಲ್ಲಿ ಎಲ್ಲರೂ ಹೋಗುತ್ತಾರೆ. ಏಕೆಂದರೆ ಈ ಸುಳಿಯೊಳಗೆ ಸಿಕ್ಕಿಹಾಕಿಕೊಂಡವರು ಹೊರಗೆ ಬರುವುದೇ ಇಲ್ಲ."

12. ಹೀಗೆ ಆ ಸತ್ಯವ್ರತನು ಹೇಳುತ್ತಿರುವಾಗಲೇ ನೀರಿನ ಸೆಳೆತದಿಂದ ಅವರ ದೋಣಿಯು ಅದೇ ದಿಕ್ಕಿನಲ್ಲಿ ಹೋಗಲು ಆರಂಭಿಸಿತು.

---

ಇತಿ ಸತ್ಯವ್ರತೇನೋಕ್ತಃ ಶಕ್ತಿದೇವಸ್ತಥೇತಿ ಸಃ ।
ಜಗ್ರಾಹ ಹೃಷ್ಟಃ ಪಾಥೇಯಂ ವಿಷ್ಣುದತ್ತೋಪಕಲ್ಪಿತಮ್ ॥ ೬
ತತೋ ವಹನಮಾರುಹ್ಯ ಸ ಸತ್ಯವ್ರತಢೌಕಿತಮ್ ।
ತೇನೈವ ಸಾಕಂ ತ್ವರಿತಃ ಪ್ರಾಯಾದ್ ವಾರಿಧಿವರ್ತ್ಮನಾ ॥ ೭
ಗಚ್ಛಂಶ್ಚ ತತ್ರ ಸ ದ್ವೀಪನಿಭನಕ್ರೇಽದ್ಭುತಾಲಯೇ ।
ಸತ್ಯವ್ರತಂ ತಂ ಪಪ್ರಚ್ಛ ಕರ್ಣಧಾರತಯಾ ಸ್ಥಿತಮ್ ॥ ೮
ಇತೋ ದೂರಂ ಮಹಾಭೋಗಂ ಕಿಮೇತದ್ ದೃಶ್ಯತೇಽಂಬುಧೌ ।
ಯದೃಚ್ಛಾಪ್ರೋದ್ಗತೋದಗ್ರಸಪಕ್ಷಗಿರಿವಿಭ್ರಮಮ್ ॥ ೯
ತತಃ ಸತ್ಯವ್ರತೋಽವಾದೀದಸೌ ದೇವೋ ವಟದ್ರುಮಃ ।
ಅಸ್ಯಾಹುಃ ಸುಮಹಾವರ್ತಮಧಸ್ತಾದ್ವಡವಾಮುಖಮ್ ॥ ೧೦
ಏತಂ ಚ ಪರಿಹೃತ್ಯೈವ ಪ್ರದೇಶಮಿಹ ಗಮ್ಯತೇ ।
ಅತ್ರಾವರ್ತೇ ಗತಾನಾಂ ಹಿ ನ ಭವತ್ಯಾಗಮಃ ಪುನಃ ॥ ೧೧
ಇತಿ ಸತ್ಯವ್ರತೇ ತಸ್ಮಿನ್ ವದತ್ಯೇವಾಂಬುವೇಗತಃ ।
ತಸ್ಯಾಮೇವ ಪ್ರವವೃತೇ ಗಂತುಂ ತದ್ವಹನಂ ದಿಶಿ ॥ ೧೨

13. ಅದನ್ನು ನೋಡಿ ಸತ್ಯವ್ರತನು ಶಕ್ತಿದೇವನಿಗಿಂತೆಂದನು. ""ಬ್ರಹ್ಮನ್, ನಿಶ್ಚಿತವಾಗಿ ನಮಗೆ ವಿನಾಶಕಾಲವು ಬಂದೊದಗಿದೆ.
14. ಏಕೆಂದರೆ ಈ ದೋಣಿಯು ಅಕಸ್ಮಾತ್ತಾಗಿ ಅಲ್ಲಿಗೇ ಹೋಗುತ್ತಿದೆ. ಏನೇ ಮಾಡಿದರೂ ಅದನ್ನು ತಡೆಯಲು ನನಗೆ ಸಾಧ್ಯವಾಗುತ್ತಿಲ್ಲ.
15. ಬಲವತ್ತರವಾದ ಕರ್ಮದಿಂದಲೋ ಎಂಬಂತೆ ನೀರಿನಿಂದ ಸೆಳೆಯಲ್ಪಟ್ಟು ನಾವು ಸಾವಿನ ಬಾಯಿನಂತೆ ಇರುವ ಆಳವಾದ ಸುಳಿಯೊಳಕ್ಕೆ ಹೋಗುತ್ತಿದ್ದೇವೆ.
16. ಇದರಿಂದ ನನಗೇನೂ ದುಃಖವಿಲ್ಲ ; ಯಾರ ಶರೀರ ತಾನೆ ಶಾಶ್ವತ ? ಆದರೆ ಇಷ್ಟು ಕಷ್ಟಪಟ್ಟರೂ ನಿನ್ನ ಆಸೆ ಈಡೇರಲಿಲ್ಲವಲ್ಲ ಎಂಬುದೇ ನನ್ನ ದುಃಖಕ್ಕೆ ಕಾರಣವಾಗಿದೆ.
17. ಆದ್ದರಿಂದ ನಾನು ಸ್ವಲ್ಪ ಈ ದೋಣಿಯನ್ನು ಹಿಡಿದುಕೊಂಡಿರುವಷ್ಟರಲ್ಲಿ ನೀನು ಸತ್ವರನೆ ಆ ಆಲದ ಮರದ ಕೊಂಬೆಯನ್ನು ಹಿಡಿದುಕೋ.
18. ಭವ್ಯವಾದ ಆಕಾರವಿರುವ ನಿನಗೆ ಹೇಗಾದರೂ ಬದುಕುವ ಉಪಾಯ ಸಿಕ್ಕಬಹುದು. ವಿಧಿಯ ಆಟಗಳನ್ನೂ ಕಡಲಿನ ಅಲೆಗಳನ್ನೂ ಯಾವನು ಊಹಿಸಲು ಸಾಧ್ಯ ?"
19. ಹೀಗೆ ಧೀರಮನಸ್ಸಿನ ಸತ್ಯವ್ರತನು ಹೇಳುತ್ತಿರುವಾಗಲೇ ದೋಣಿಯು ಆ ಮರದ ಸಮೀಪಕ್ಕೆ ತಲುಪಿತು.

---

ತದ್ದೃಷ್ಟ್ವಾ ಶಕ್ತಿದೇವಂ ಸ ಪುನಃ ಸತ್ಯವ್ರತೋಽಬ್ರವೀತ್ ।
ಬ್ರಹ್ಮನ್ ವಿನಾಶಕಾಲೋಽಯಂ ಧ್ರುವಮಸ್ಮಾಕಮಾಗತಃ ॥ ೧೩
ಯದಕಸ್ಮಾತ್ ಪ್ರವಹಣಂ ಪಶ್ಯಾತ್ರೈವ ಪ್ರಯಾತ್ಯದಃ ।
ಶಕ್ಯತೇ ನೈವ ರೋದ್ಧುಂ ಚ ಕಥಮಪ್ಯಧುನಾ ಮಯಾ ॥ ೧೪
ತದಾವರ್ತೇ ಗಭೀರೇಽತ್ರ ವಯಂ ಮೃತ್ಯೋರಿವಾನನೇ ।
ಕ್ಷಿಪ್ತಾ ಏವಾಂಬುನಾಕೃಷ್ಯ ಕರ್ಮಣೇವ ಬಲೀಯಸಾ ॥ ೧೫
ಏತಚ್ಚ ನೈವ ಮೇ ದುಃಖಂ ಶರೀರಂ ಕಸ್ಯ ಹಿ ಸ್ಥಿರಮ್ ।
ದುಃಖಂ ತು ಯನ್ನ ಸಿದ್ಧಸ್ತೇ ಕೃಚ್ಛ್ರೇಣಾಪಿ ಮನೋರಥಃ ॥ ೧೬
ತದ್ ಯಾವದ್ ಧಾರಯಾಮ್ಯೇತದಹಂ ಪ್ರವಹಣಂ ಮನಾಕ್ ।
ತಾವದಸ್ಯಾವಲಂಬೇಥಾಃ ಶಾಖಾಂ ವಟತರೋರ್ದ್ರುತಮ್ ॥ ೧೭
ಕದಾಚಿಜ್ಜೀವಿತೋಪಾಯೋ ಭವೇದ್ ಭವ್ಯಾಕೃತೇಸ್ತವ ।
ವಿಧೇರ್ವಿಲಾಸಾನ್ ಅಬ್ಧೇಶ್ಚ ತರಂಗಾನ್ ಕೋ ಹಿ ತರ್ಕಯೇತ್ ॥ ೧೮
ಇತಿ ಸತ್ಯವ್ರತಸ್ಯಾಸ್ಯ ಧೀರಸತ್ತ್ವಸ್ಯ ಜಲ್ಪತಃ ।
ಬಭೂವ ನಿಕಟೇ ತಸ್ಯ ತರೋಃ ಪ್ರವಹಣಂ ತತಃ ॥ ೧೯

20. ಆ ಕ್ಷಣದಲ್ಲೇ ಹೆದರಿಕೆಯಿಲ್ಲದೆ ಮೇಲಕ್ಕೆ ಎಗರಿದ ಶಕ್ತಿದೇವನು ಕಡಲಿನ ಆಲದ ಮರದ ದಪ್ಪವಾಗಿದ್ದ ಒಂದು ಕೊಂಬೆಯನ್ನು ಹಿಡಿದುಕೊಂಡನು.

21. ಪರೋಪಕಾರಕ್ಕಾಗಿಯೇ ಮೀಸಲಾಗಿಟ್ಟಿದ್ದ ಕೊಚ್ಚಿಹೋಗುತ್ತಿದ್ದ ದೇಹ ಹಾಗೂ ದೋಣಿಗಳೊಡನೆ ಸತ್ಯವ್ರತನಾದರೋ ಬಡಬಾನಲದ ಬಾಯಿಯೊಳಕ್ಕೆ ನುಗ್ಗಿದನು.

22. ಆ ಆಲದ ಮರವೇನೋ ಕೊಂಬೆಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿಸಿತ್ತು. ಅದರ ಕೊಂಬೆಯನ್ನು ಹಿಡಿದುಕೊಂಡಿದ್ದರೂ ನಿರಾಶನಾದ ಸತ್ಯವ್ರತನು ಹೀಗೆ ಆಲೋಚಿಸತೊಡಗಿದನು.

23. "ಕನಕಪುರಿ ಎಂಬ ನಗರವನ್ನಂತೂ ನಾನು ನೋಡಲೇ ಇಲ್ಲ. ಅಸ್ಥಾನದಲ್ಲಿ ನಾಶ ಹೊಂದುತ್ತಿರುವ ನಾನು ಈ ಬೆಸ್ತರ ರಾಜನನ್ನು ನಾಶಪಡಿಸಿದಂತಾಯಿತು.

24. ಅಥವಾ, ಎಲ್ಲರ ತಲೆಯ ಮೇಲೂ ಸತತವಾಗಿ ಕಾಲನ್ನಿಟ್ಟು ಮೆಟ್ಟಿ ನಿಂತಿರುವ ಭಗವತಿ ಭವಿತವ್ಯತೆಯನ್ನು (ಹಣೆಬರಹವನ್ನು) ಯಾರು ಬದಲಾಯಿಸಲು ಸಾಧ್ಯ ?'

25. ಹೀಗೆ ತನ್ನ ಅವಸ್ಥೆಗೆ ಅನುಸಾರವಾಗಿ ಚಿಂತಿಸುತ್ತಿದ್ದ ಆ ಬ್ರಾಹ್ಮಣತರುಣನಿಗೆ ಆ ಮರದ ಟೊಂಗೆಯಲ್ಲೇ ಹಗಲು ಕಳೆಯಿತು.

---

ತತ್ಕ್ಷಣಂ ಸ ಕೃತೋತ್ಫಾಲಃ ಶಕ್ತಿದೇವೋ ವಿಸಾಧ್ವಸಃ ।
ಪೃಥುಲಾಮಗ್ರಹೀಚ್ಛಾಖಾಂ ತಸ್ಯಾಬ್ಧಿವಟಶಾಖಿನಃ ॥ ೨೦
ಸತ್ಯವ್ರತಸ್ತು ಮಹತಾ ದೇಹೇನ ವಹನೇನ ಚ ।
ಪರಾರ್ಥಕಲ್ಪಿತೇನಾತ್ರ ವಿವೇಶ ವಡವಾಮುಖಮ್ ॥ ೨೧
ಶಕ್ತಿದೇವಶ್ಚ ಶಾಖಾಭಿಃ ಪೂರಿತಾಶಸ್ಯ ತಸ್ಯ ಸಃ ।
ಆಶ್ರಿತ್ಯಾಪಿ ತರೋಃ ಶಾಖಾಂ ನಿರಾಶಃ ಸಮಚಿಂತಯತ್ ॥ ೨೨
ನ ತಾವತ್ ಸಾ ಚ ಕನಕಪುರೀ ದೃಷ್ಟಾ ಮಯಾ ಪುರೀ ।
ಅಪದೇ ನಶ್ಯತಾ ತಾವದ್ ದಾಶೇಂದ್ರೋಽಪ್ಯೇಷ ನಾಶಿತಃ ॥ ೨೩
ಯದಿ ವಾ ಸಂತತನ್ಯಸ್ತಪದಾ ಸರ್ವಸ್ಯ ಮೂರ್ಧನಿ ।
ಕಾಮಂ ಭಗವತೀ ಕೇನ ಭಜ್ಯತೇ ಭವಿತವ್ಯತಾ ॥ ೨೪
ಇತ್ಯವಸ್ಥೋಚಿತಂ ತಸ್ಯ ತತಶ್ಚಿಂತಯತಸ್ತದಾ ।
ವಿಪ್ರಯೂನಸ್ತರುಸ್ಕಂಧೇ ದಿನಂ ತತ್ ಪರ್ಯಹೀಯತ ॥ ೨೫

26–27. ಸಾಯಂಕಾಲದಲ್ಲಿ ಎಲ್ಲ ದಿಕ್ಕುಗಳಿಂದಲೂ ಅನೇಕ ದೊಡ್ಡ ಹಕ್ಕಿಗಳು ತಮ್ಮ ಕೂಗಿನಿಂದ ದಿಗಂತಗಳನ್ನೆಲ್ಲ ತುಂಬಿಸುತ್ತಾ ಬಂದು ಆ ಆಲದ ಮರದಲ್ಲಿ ಸೇರಿಕೊಂಡುದನ್ನು ಶಕ್ತಿದೇವನು ಕಂಡನು. ದೊಡ್ಡದಾಗಿದ್ದ ಅವುಗಳ ರೆಕ್ಕೆಗಳ ಗಾಳಿಯಿಂದ ಎದ್ದ ಅಲೆಗಳು ಪರಿಚಯದಿಂದ ಉಂಟಾಗಿದ್ದ ಒಲವಿನಿಂದ ಆ ಪಕ್ಷಿಗಳನ್ನು ಎದುರುಗೊಂಡು ಸ್ವಾಗತವನ್ನು ಕೋರುವಂತಿದ್ದುವು.

28. ಆ ಪಕ್ಷಿಗಳು ಕೊಂಬೆಗಳೊಳಗೆ ಮರೆಯಾಗಿ ಮನುಷ್ಯಭಾಷೆಯಿಂದ ಪರಸ್ಪರ ಮಾತಾಡಿಕೊಳ್ಳುತ್ತಿದ್ದುದನ್ನು ಎಲೆಗಳ ರಾಶಿಯಲ್ಲಿ ಹುದುಗಿದ್ದ ಶಕ್ತಿದೇವನು ಕೇಳಿಸಿಕೊಂಡನು.

29. ಒಂದು ಪಕ್ಷಿಯು ಬೇರೆ ಒಂದು ದ್ವೀಪವನ್ನೂ, ಇನ್ನೊಂದು ಪಕ್ಷಿಯು ಯಾವುದೋ ಬೆಟ್ಟವನ್ನೂ, ಮತ್ತೊಂದು ಪಕ್ಷಿಯು ಬೇರೆ ಒಂದು ದಿಕ್ಕನ್ನೂ ವರ್ಣಿಸುತ್ತಿತ್ತು ಆ ದಿನದಲ್ಲಿ ಅವು ಕಾಲನ್ನಿಟ್ಟಿದ್ದ ಜಾಗವನ್ನು ಒಂದೊಂದು ಹಕ್ಕಿಯೂ ಬಣ್ಣಿಸುತ್ತಿತ್ತು.

30. ಅವುಗಳ ಮಧ್ಯದಲ್ಲಿ ಒಂದು ಮುದಿಹಕ್ಕಿಯು ಹೀಗೆ ನುಡಿಯಿತು. "'ಇಂದು ನಾನು ವಿಹಾರಕ್ಕಾಗಿ ಕನಕಪುರಿಗೆ ಹೋಗಿದ್ದೆನು.

31. ಬೆಳಗಾದ ಮೇಲೆ ಸುಖವಾಗಿ ಕಾಲವನ್ನು ಕಳೆಯಲು ಮತ್ತೆ ಅಲ್ಲಿಗೇ ಹೋಗುವೆನು. ಬಳಲಿಕೆಯನ್ನು ತರುವ ಅತಿದೂರದ ಪ್ರಯಾಣದಿಂದ ನನಗೇನಾಗಬೇಕು ?"

---

ಸಾಯಂ ಚ ಸರ್ವತಸ್ತಸ್ಮಿನ್ ಸ ಮಹಾವಿಹಗಾನ್ ಬಹೂನ್ ।
ವಟವೃಕ್ಷೇ ಪ್ರವಿಶತಃ ಶಬ್ದಾಪೂರಿತದಿಕ್ತಟಾನ್ ॥ ೨೬
ಅಪಶ್ಯತ್ ಪೃಥುತತ್ಪಕ್ಷವಾತಧೂತಾರ್ಣವೋರ್ಮಿಭಿಃ ।
ಗೃಧ್ರಾನ್ ಪರಿಚಯಪ್ರೀತ್ಯಾ ಕೃತಪ್ರತ್ಯುದ್ಗಮಾನಿವ ॥ ೨೭
ತತಃ ಶಾಖಾವಿಲೀನಾನಾಂ ಸ ತೇಷಾಂ ಪಕ್ಷಿಣಾಂ ಮಿಥಃ ।
ಮನುಷ್ಯವಾಚಾ ಸಂಲಾಪಂ ಪತ್ರೌಘೈಶ್ಛಾದಿತೋಽಶೃಣೋತ್ ॥ ೨೮
ಕಶ್ಚಿದ್ ದ್ವೀಪಾಂತರಂ ಕಶ್ಚಿದ್ ಗಿರಿಂ ಕಶ್ಚಿದ್ ದಿಗಂತರಮ್ ।
ತದಹಶ್ಚರಣಸ್ಥಾನಮೇಕೈಕಃ ಸಮವರ್ಣಯತ್ ॥ ೨೯
ಏಕಶ್ಚ ವೃದ್ಧವಿಹಗಸ್ತೇಷಾಂ ಮಧ್ಯಾದಭಾಷತ ।
ಅಹಂ ವಿಹರ್ತುಂ ಕನಕಪುರೀಮದ್ಯ ಗತೋಽಭವಮ್ ॥ ೩೦
ಪ್ರಾತಃ ಪುನಶ್ಚ ತತ್ರೈವ ಗಂತಾಸ್ಮಿ ಚರಿತುಂ ಸುಖಮ್ ।
ಶ್ರಮಾವಹೇನ ಕೋಽರ್ಥೋ ಮೇ ವಿದೂರಗಮನೇನ ಹಿ ॥ ೩೧

32. ಅನಿರೀಕ್ಷಿತವಾಗಿ ಆ ಪಕ್ಷಿಯು ಹೇಳಿದ ಮಾತು ಶಕ್ತಿದೇವನಿಗೆ ಅಮೃತದ ಧಾರೆಯಂತೆ ತೋರಿತು. ಅವನ ಬೇಗುದಿಯೆಲ್ಲ ತಣ್ಣಗಾಯಿತು. ಅವನಿಂತು ಆಲೋಚಿಸಿದನು.

33. 'ಸುದೈವದಿಂದ (ಕನಕಪುರಿ ಎಂಬ) ಆ ನಗರವು ಎಲ್ಲೋ ಇದೆ. ಅಲ್ಲಿಗೆ ತಲುಪಲು ದೊಡ್ಡ ಶರೀರದ ಈ ಪಕ್ಷಿಯೇ ನನಗೆ ಸಾಧನ. ಅದನ್ನೇ ನನ್ನ ವಾಹನವನ್ನಾಗಿ ಮಾಡಿಕೊಳ್ಳಬೇಕು.'

34. ಹೀಗೆ ಆಲೋಚಿಸಿ ಮೆಲ್ಲನೆ ತೆವಳಿಕೊಂಡು ಹೋಗಿ ನಿದ್ದೆ ಮಾಡುತ್ತಿದ್ದ ಆ ಪಕ್ಷಿಯ ಹಿಂಭಾಗದ ರೆಕ್ಕೆಗಳ ಮಧ್ಯದಲ್ಲಿ ಶಕ್ತಿದೇವನು ಬಚ್ಚಿಟ್ಟುಕೊಂಡನು.

35. ಬೆಳಗಾದ ಮೇಲೆ ಆ ಪಕ್ಷಿಗಳು ತಮಗೆ ಬೇಕಾದ ಸ್ಥಳಗಳಿಗೆ ಹಾರಿ ಹೋದವು. ಆ ಪಕ್ಷಿಯೂ ವಿಧಿಯಂತೆ ಅಚ್ಚರಿಯನ್ನುಂಟು ಮಾಡುವ ಪಕ್ಷಪಾತವನ್ನು (ರೆಕ್ಕೆಗಳ ಚಲನೆಯನ್ನು) ತೋರಿಸುತ್ತಾ ಹಾರಿತು.

36. ಆ ಪಕ್ಷಿಯು (ಮರದಿಂದ) ನೆಗೆದು ಬೆನ್ನಿನ ಮೇಲಿದ್ದ ಶಕ್ತಿದೇವನನ್ನು ಗಮನಿಸದೆ ಹೊತ್ತುಕೊಂಡು ತನ್ನ ಆಹಾರವನ್ನು ಪಡೆಯಲು ಕ್ಷಣಮಾತ್ರದಲ್ಲಿ ಕನಕಪುರಿಗೆ ಹೋಯಿತು.

37. ಅಲ್ಲಿ ಒಂದು ತೋಟದಲ್ಲಿ ಆ ಹಕ್ಕಿಯು ಕುಳಿತುಕೊಂಡಾಗ ಶಕ್ತಿದೇವನು ಸದ್ದು ಮಾಡದೆ ಅದರ ಬೆನ್ನಿನಿಂದ ಕೆಳಗಿಳಿದನು.

---

ಇತ್ಯಕಾಂಡಸುಧಾಸಾರಸದೃಶೇನಾಸ್ಯ ಪಕ್ಷಿಣಃ ।
ವಚಸಾ ಶಾಂತತಾಪಃ ಸನ್ ಶಕ್ತಿದೇವೋ ವ್ಯಚಿಂತಯತ್ ॥ ೩೨

ದಿಷ್ಟ್ಯಾ ಸಾಸ್ತ್ಯೇವ ನಗರೀ ತತ್ಪ್ರಾಪ್ತ್ಯೈ ಚಾಯಮೇವ ಮೇ ।
ಉಪಾಯಃ ಸುಮಹಾಕಾಯೋ ವಿಹಗೋ ವಾಹನೀಕೃತಃ ॥ ೩೩

ಇತ್ಯಾಲೋಚ್ಯ ಶನೈರೇತ್ಯ ತಸ್ಯ ಸುಪ್ತಸ್ಯ ಪಕ್ಷಿಣಃ ।
ಪೃಷ್ಠಪಕ್ಷಾಂತರೇ ಸೋಽಥ ಶಕ್ತಿದೇವೋ ವ್ಯಲೀಯತ ॥ ೩೪

ಪ್ರಾತಶ್ಚೇತಸ್ತತಸ್ತೇಷು ಗತೇಷ್ವನ್ಯೇಷು ಪಕ್ಷಿಷು ।
ಸ ಪಕ್ಷೀ ದರ್ಶಿತಾಶ್ಚರ್ಯಪಕ್ಷಪಾತೋ ವಿಧಿರ್ಯಥಾ ॥ ೩೫

ದತ್ತಸ್ಕಂದೋ ವಹನ್ ಪೃಷ್ಠೇ ಶಕ್ತಿದೇವಮಲಕ್ಷಿತಮ್ ।
ಕ್ಷಣಾದಗಚ್ಛತ್ ಕನಕಪುರೀಂ ತಾಂ ಚರಿತುಂ ಪುನಃ ॥ ೩೬

ತತ್ರೋದ್ಯಾನಾಂತರೇ ತಸ್ಮಿನ್ ಉಪವಿಷ್ಟೇ ವಿಹಂಗಮೇ ।
ಸ ಶಕ್ತಿದೇವೋ ನಿಭೃತಂ ತಸ್ಯ ಪೃಷ್ಠಾದವಾತರತ್ ॥ ೩೭

38. ಅದರ ಬಳಿಯಿಂದ ದೂರ ಸರಿದು ಅಲ್ಲಿ ಅವನು ಅಲೆದಾಡುತ್ತಿರುವಾಗ ಹೂವುಗಳನ್ನು ಬಿಡಿಸುವುದರಲ್ಲಿ ತೊಡಗಿದ್ದ ಇಬ್ಬರು ಹೆಂಗಸರನ್ನು ಕಂಡನು.

39. ಅವನನ್ನು ನೋಡಿ ಆಶ್ಚರ್ಯಪಟ್ಟ ಅವರು ಸಮೀಪಕ್ಕೆ ಬಂದಾಗ ಅವನು "ಈ ಪ್ರದೇಶವು ಯಾವುದು ? ಭದ್ರೆಯರೆ, ನೀವಿಬ್ಬರೂ ಯಾರು ?" ಎಂದು ಅವರನ್ನು ಕೇಳಿದನು.

40. "ಇದು ವಿದ್ಯಾಧರರ ನಿವಾಸವಾದ ಕನಕಪುರೀ ಎಂಬ ನಗರ. ಮಿತ್ರನೆ, ಈ ಊರಿನಲ್ಲಿ ಚಂದ್ರಪ್ರಭಾ ಎಂಬ ಹೆಸರಿನ ವಿದ್ಯಾಧರಿ ಇದ್ದಾಳೆ.

41. ಅವಳಿಗೆ ಸೇರಿದ ಈ ತೋಟದಲ್ಲಿ ನಾವಿಬ್ಬರೂ ಉದ್ಯಾನಪಾಲಿಕೆಯರು. ನಾವು ಹೂವುಗಳನ್ನು ಬಿಡಿಸಿಕೊಳ್ಳುತ್ತಿರುವುದೂ ಅವಳಿಗಾಗಿ" ಎಂದು ಅವರು ಹೇಳಿದರು.

42. ಆಗ ಆ ವಿಪ್ರ ಶಕ್ತಿದೇವನು "ನಿಮ್ಮ ಒಡತಿಯನ್ನು ನಾನೂ ಸಂಧಿಸುವಂತೆ ಮಾಡಿರಿ" ಎಂದು ಕೇಳಿಕೊಂಡನು.

43. ಅದನ್ನು ಕೇಳಿ "ಹಾಗೆಯೇ ಆಗಲಿ' ಎಂದು ಹೇಳಿ ಆ ಸ್ತ್ರೀಯರು ಆ ತರುಣನನ್ನು ನಗರದ ಒಳಗೆ ಇದ್ದ ಅರಮನೆಗೆ ಕರೆದೊಯ್ದರು.

---

ಅಪಸೃತ್ಯ ಸ ತತ್ಪಾರ್ಶ್ವಾದ್ ಯಾವದ್ ಭ್ರಾಮ್ಯತಿ ತತ್ರ ಸಃ ।
ದ್ವೇ ಪುಷ್ಪಾವಚಯವ್ಯಗ್ರೇ ತಾವದ್ದೃಕ್ಷತ ಯೋಷಿತೌ ॥ ೩೮
ಉಪಗಮ್ಯ ಶನೈಸ್ತೇ ಚ ತದ್ವಿಲೋಕನವಿಸ್ಮಿತೇ ।
ಸೋಽಪೃಚ್ಛತ್ ಕಃ ಪ್ರದೇಶೋಽಯಂ ಕೇ ಚ ಭದ್ರೇ ಯುವಾಮಿತಿ ॥ ೩೯
ಇಯಂ ಕನಕಪುರ್ಯಾಖ್ಯಾ ಪುರೀ ವಿದ್ಯಾಧರಾಸ್ಪದಮ್ ।
ಚಂದ್ರಪ್ರಭೇತಿ ಚೈತಸ್ಯಾಮಾಸ್ತೇ ವಿದ್ಯಾಧರೀ ಸಖೇ ॥ ೪೦
ತಸ್ಯಾಶ್ಚಾವಾಮಿಹೋದ್ಯಾನೇ ಜಾನೀಹ್ಯುದ್ಯಾನಪಾಲಿಕೇ ।
ಪುಷ್ಪೋಚ್ಚಯಸ್ತದರ್ಥೋಽಯಮಿತಿ ತೇ ಚ ತಮೂಚತುಃ ॥ ೪೧
ತತಃ ಸೋಽಪ್ಯವದದ್ವಿಪ್ರೋ ಯುವಾಂ ಮೇ ಕುರುತಂ ತಥಾ ।
ಯಥಾಹಮಪಿ ಪಶ್ಯಾಮಿ ತಾಂ ಯುಷ್ಮತ್ಸ್ವಾಮಿನೀಮಿಹ ॥ ೪೨
ಏತಚ್ಛ್ರುತ್ವಾ ತಥೇತ್ಯುಕ್ತ್ವಾ ನೀತವತ್ಯಾವುಭೇ ಚ ತೇ ।
ಸ್ತ್ರೀಯಾವಂತರ್ನಗರ್ಯಾಸ್ತಂ ಯುವಾನಂ ರಾಜಮಂದಿರಮ್ ॥ ೪೩

44. ಸಂಪತ್ತುಗಳ ಸಂಕೇತಗೃಹದಂತೆ ಇದ್ದು ಚಿನ್ನದ ಗೋಡೆಗಳು ಹಾಗೂ ಮಾಣಿಕ್ಯಗಳ ಕಂಬಗಳಿಂದ ಕಂಗೊಳಿಸುತ್ತಿದ್ದ ಅರಮನೆಯನ್ನು ಶಕ್ತಿದೇವನು ಕಂಡನು.

45. ಅಲ್ಲಿಗೆ ಬಂದ ಅವನನ್ನು ನೋಡಿ ಸೇವಕರೆಲ್ಲ ಹೋಗಿ 'ಮನುಷ್ಯನು ಬಂದಿದ್ದಾನೆ' ಎಂಬ ಅದ್ಭುತವನ್ನು ಚಂದ್ರಪ್ರಭೆಗೆ ಹೇಳಿದರು.

46. ಅವಳು ಬಾಗಿಲುಕಾಯುವವನಿಗೆ ಆಜ್ಞಾಪಿಸಿ ತಡವಿಲ್ಲದೆ ಆ ಬ್ರಾಹ್ಮಣನನ್ನು ತನ್ನ ಹತ್ತಿರಕ್ಕೆ ಕರೆಸಿಕೊಂಡಳು.

47. ಒಳಗೆ ಬಂದ ಶಕ್ತಿದೇವನು ಚಂದ್ರಪ್ರಭೆಯನ್ನು ಕಂಡನು. ಅವಳು ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತಿದ್ದಳು. ಬ್ರಹ್ಮನ ಅದ್ಭುತನಿರ್ಮಾಣಶಕ್ತಿಯ ಪೂರ್ಣತೆಯೇ ರೂಪವನ್ನು ಧರಿಸಿದ್ದಂತೆ ಅವಳು ಕಾಣಿಸುತ್ತಿದ್ದಳು.

48. ಅವಳೂ ಅವನ ನೋಟದಿಂದಲೇ ಮಾರುಹೋಗಿ ತನ್ನ ರತ್ನಮಂಚದಿಂದ ಎದ್ದು ದೂರದಿಂದ ತಾನೇ ಸ್ವಾಗತವನ್ನು ಹೇಳಿ ಆದರಿಸಿದಳು.

49. ಅವನು ಕುಳಿತುಕೊಂಡ ಮೇಲೆ "ಶುಭಲಕ್ಷಣಗಳನ್ನುಳ್ಳವನೆ, ಇಂಥ ರೂಪವುಳ್ಳ ನೀನು ಯಾರು ? ಮನುಷ್ಯರಿಗೆ ಬರುವುದಕ್ಕೆ ಅಸಾಧ್ಯವಾದ ಈ ಭೂಮಿಗೆ ಹೇಗೆ ಬಂದೆ ?" ಎಂದು ಅವಳು ಕೇಳಿದಳು.

---

ಸೋಽಪಿ ಪ್ರಾಪ್ತಸ್ತದದ್ರಾಕ್ಷೀನ್ಮಾಣಿಕ್ಯಸ್ತಂಭಭಾಸ್ವರಮ್ ।
ಸೌವರ್ಣಭಿತ್ತಿಸಂಕೇತಕೇತನಂ ಸಂಪದಾಮಿವ ॥ ೪೪

ತತ್ರಾಗತಂ ಚ ದೃಷ್ಟ್ವಾ ತಂ ಸರ್ವಃ ಪರಿಜನೋಽಬ್ರವೀತ್ ।
ಗತ್ವಾ ಚಂದ್ರಪ್ರಭಾಯಾಸ್ತನ್ಮಾನುಷಾಗಮನಾದ್ಭುತಮ್ ॥ ೪೫

ಸಾಪ್ಯಾದಿಶ್ಯ ಪ್ರತೀಹಾರಮವಿಲಂಬಿತಮೇವ ತಮ್ ।
ಅಭ್ಯಂತರಂ ಸ್ವನಿಕಟಂ ವಿಪ್ರಂ ಪ್ರಾವೇಶಯತ್ತತಃ ॥ ೪೬

ಪ್ರವಿಷ್ಟಃ ಸೋಽಪ್ಯಪಶ್ಯತ್ತಾಂ ತತ್ರ ನೇತ್ರೋತ್ಸವಪ್ರದಾಮ್ ।
ಧಾತುರದ್ಭುತನಿರ್ಮಾಣಪರ್ಯಾಪ್ತಿಮಿವ ರೂಪಿಣೀಮ್ ॥ ೪೭

ಸಾ ಚ ಸದ್ರತ್ನಪರ್ಯಂಕಾತ್ ದೂರಾದುತ್ಥಾಯ ತಂ ಸ್ವಯಮ್ ।
ಸ್ವಾಗತೇನಾದೃತವತೀ ತದ್ದರ್ಶನವಶೀಕೃತಾ ॥ ೪೮

ಉಪವಿಷ್ಟಮಪೃಚ್ಛಚ್ಚ ಕಲ್ಯಾಣಿನ್ ಕಸ್ತ್ವಮೀದೃಶಃ ।
ಕಥಂ ಚ ಮಾನುಷಾಗಮ್ಯಾಮಿಮಾಂ ಪ್ರಾಪ್ತೋ ಭವಾನ್ ಭುವಮ್ ॥ ೪೯

50–51. ಹೀಗೆ ಕುತೂಹಲದಿಂದ ಚಂದ್ರಪ್ರಭೆಯು ನುಡಿದಾಗ ಶಕ್ತಿದೇವನು ತನ್ನ ದೇಶವನ್ನೂ ಜಾತಿಯನ್ನೂ ಹೆಸರನ್ನೂ ಹೇಳಿ ಕನಕರೇಖಾ ಎಂಬ ಹೆಸರಿನ ರಾಜಕುಮಾರಿಯನ್ನು ಪಡೆದುಕೊಳ್ಳಲು ಕನಕಪುರಿಯ ದರ್ಶನದ ಪಣವನ್ನಿಟ್ಟು ತಾನು ಹೇಗೆ ಬಂದನೆಂಬುದನ್ನು ಬಣ್ಣಿಸಿದನು.

52. ಅದನ್ನು ಅರಿತುಕೊಂಡು ಏನನ್ನೋ ಚಿಂತಿಸಿ ದೀರ್ಘವಾಗಿ ನಿಟ್ಟುಸಿರನ್ನು ಬಿಟ್ಟು ಆ ಚಂದ್ರಪ್ರಭೆಯು ಏಕಾಂತದಲ್ಲಿ ಶಕ್ತಿದೇವನಿಗಿಂತೆಂದಳು.

53. ""ಚೆಲುವನೆ, ನಿನಗಿದನ್ನು ಕೊಂಚ ಈಗ ಹೇಳುತ್ತೇನೆ, ಕೇಳು.  ಈ ದೇಶದಲ್ಲಿ ಶಶಿಖಂಡನೆಂಬ ವಿದ್ಯಾಧರ ದೊರೆ ಇದ್ದಾನೆ.

54. ಅವನಿಗೆ ನಾವು ನಾಲ್ವರು ಹೆಣ್ಣು ಮಕ್ಕಳು ಕ್ರಮವಾಗಿ ಹುಟ್ಟಿದೆವು.  ಹಿರಿಯವಳಾದ ನಾನು ಚಂದ್ರಪ್ರಭಾ, ಇನ್ನೊಬ್ಬಳು ಚಂದ್ರರೇಖಾ.

55. ಮೂರನೆಯವಳು ಶಶಿರೇಖಾ ಮತ್ತು ನಾಲ್ಕನೆಯವಳು ಶಶಿಪ್ರಭಾ. ಆ ನಾವು ತಂದೆಯ ಮನೆಯಲ್ಲಿ ಕ್ರಮವಾಗಿ ಬೆಳೆಯುತ್ತಿದ್ದೆವು.

56. ಒಮ್ಮೆ ನಾನು ಕನ್ಯಾವ್ರತವನ್ನು ಆಚರಿಸುತ್ತಿದ್ದಾಗ, ನನ್ನ ಆ ಮೂವರು ತಂಗಿಯರೂ ಒಟ್ಟಿಗೆ ಸ್ನಾನಕ್ಕಾಗಿ ಮಂದಾಕಿನೀನದಿಯ ದಡಕ್ಕೆ ಹೋಗಿದ್ದರು.

---

ಇತ್ಯುಕ್ತಃ ಸ ತಯಾ ಚಂದ್ರಪ್ರಭಯಾ ಸಕುತೂಹಲಮ್ ।
ಶಕ್ತಿದೇವೋ ನಿಜಂ ದೇಶಂ ಜಾತಿಂ ಚಾವೇದ್ಯ ನಾಮ ಚ ॥ ೫೦
ತತ್ಪುರೀದರ್ಶನಪಣಾತ್ ಪ್ರಾಪ್ತುಂ ತಾಂ ರಾಜಕನ್ಯಕಾಮ್ ।
ಯಥಾ ಕನಕರೇಖಾಖ್ಯಾಮಾಗತಸ್ತದವರ್ಣಯತ್ ॥ ೫೧
ತದ್‌ಬುದ್ಧ್ವಾ ಕಿಮಪಿ ಧ್ಯಾತ್ವಾ ದೀರ್ಘಂ ನಿಃಶ್ವಸ್ಯ ಸಾ ತತಃ ।
ಚಂದ್ರಪ್ರಭಾ ತಂ ವಿಜನೇ ಶಕ್ತಿದೇವಮಭಾಷತ ॥ ೫೨
ಶ್ರೂಯತಾಂ ವಚ್ಮಿ ತೇ ಕಿಂಚಿದಿದಂ ಸುಭಗ ಸಂಪ್ರತಿ ।
ಅಸ್ತ್ಯಸ್ಯಾಂ ಶಶಿಖಂಡಾಖ್ಯೋ ವಿದ್ಯಾಧರಪತಿರ್ಭುವಿ ॥ ೫೩
ವಯಂ ತಸ್ಯ ಚತಸ್ರಶ್ಚ ಜಾತಾ ದುಹಿತರಃ ಕ್ರಮಾತ್ ।
ಜ್ಯೇಷ್ಠಾ ಚಂದ್ರಪ್ರಭೇತ್ಯಸ್ಮಿ ಚಂದ್ರರೇಖೇತಿ ಚಾಪರಾ ॥ ೫೪
ಶಶಿರೇಖಾ ತೃತೀಯಾ ಚ ಚತುರ್ಥೀ ಚ ಶಶಿಪ್ರಭಾ ।
ತಾ ವಯಂ ಕ್ರಮಶಃ ಪ್ರಾಪ್ತಾ ವೃದ್ಧಿಮತ್ರ ಪಿತುರ್ಗೃಹೇ ॥ ೫೫
ಏಕದಾ ಚ ಭಗಿನ್ಯೋ ಮೇ ಸ್ನಾತುಂ ತಿಸ್ರೋಽಪಿ ತಾಃ ಸಮಮ್ ।
ಮಯಿ ಕನ್ಯಾವ್ರತಸ್ಥಾಯಾಂ ಜಗ್ಮುರ್ಮಂದಾಕಿನೀತಟಮ್ ॥ ೫೬

57. ಅವರು ನೀರಾಟವನ್ನಾರಂಭಿಸಿ ಹರೆಯದ ಹಮ್ಮಿನಿಂದ ಅಲ್ಲೇ ನೀರಿನಲ್ಲಿದ್ದ ಅಗ್ರ್ಯತಪಸ್ ಎಂಬ ಋಷಿಯ ಮೇಲೂ ನೀರನ್ನು ಎರಚಿದರು.

58. (ಅವನೂ ಆಟಕ್ಕೆ ಬಂದು ಸೇರಬೇಕೆಂದು) ಅತಿಯಾಗಿ ಒತ್ತಾಯಿಸಿದ ಅವರನ್ನು ಕನಲಿದ ಮುನಿಯು "ದುಷ್ಟ ಕನ್ಯೆಯರೆ, ನೀವೆಲ್ಲರೂ ಭೂಲೋಕದಲ್ಲಿ ಹುಟ್ಟಿರಿ" ಎಂದು ಶಪಿಸಿದನು.

59–60. ಅದನ್ನು ತಿಳಿದುಕೊಂಡು ನಮ್ಮ ತಂದೆಯು ಅಲ್ಲಿಗೆ ಹೋಗಿ ಆ ಋಷಿಯನ್ನು ಒಲಿಸಿದನು. ಆ ಮೂವರಿಗೂ ಬೇರೆ ಬೇರೆ ರೀತಿಯ ಶಾಪವಿಮೋಚನೆಯನ್ನು ಹೇಳಿ ಆ ಋಷಿಯು ದಿವ್ಯವಾದ ವಿಜ್ಞಾನದಿಂದ ಉಂಟಾಗುವ ಜನ್ಮಾಂತರದ ಸ್ಮರಣೆಯನ್ನು ಮನುಷ್ಯ ರೂಪದಲ್ಲಿದ್ದರೂ ಪಡೆಯಲಿ ಎಂದು ಆದೇಶವನ್ನಿತ್ತನು.

61. ಆಮೇಲೆ ಅವರೆಲ್ಲರೂ ಇಲ್ಲಿ ಶರೀರಗಳನ್ನು ಬಿಟ್ಟು ಮಾನವಲೋಕಕ್ಕೆ ಹೊರಟುಹೋದರು. ನನ್ನ ತಂದೆಯು ಈ ನಗರವನ್ನು ನನಗೆ ಕೊಟ್ಟು ತಾನು ಬೇಸರದಿಂದ ಕಾಡಿಗೆ ಹೋದನು.

62. ಅಂದಿನಿಂದ ಇಲ್ಲೇ ವಾಸಮಾಡುತ್ತಿರುವ ನನಗೆ ದೇವಿ ಅಂಬಿಕೆಯು ಕನಸಿನಲ್ಲಿ ಬಂದು "ಮಗಳೆ, ನಿನಗೆ ಮಾನವನೊಬ್ಬನು ಗಂಡನಾಗುವನು" ಎಂದು ಹೇಳಿದಳು.

---

ತತ್ರಾಗ್ರ್ಯತಪಸಂ ನಾಮ ಮುನಿಂ ಯೌವನದರ್ಪತಃ ।
ತೋಯೈರ್ಜಲಸ್ಥಮಸಿಚನ್ನಾರಬ್ಧಜಲಕೇಲಯಃ ॥ ೫೭
ಅತಿನಿರ್ಬಂಧಿನೀಸ್ತಾಶ್ಚ ಮುನಿಃ ಕ್ರುದ್ಧಃ ಶಶಾಪ ಸಃ ।
ಕುಕನ್ಯಕಾಃ ಪ್ರಜಾಯಧ್ವಂ ಮರ್ತ್ಯಲೋಕೇಽಖಿಲಾ ಇತಿ ॥ ೫೮
ತದ್‌ಬುದ್ಧ್ವಾ ಸೋಽಸ್ಮದೀಯೇನ ಪಿತ್ರಾ ಗತ್ವಾ ಪ್ರಸಾದಿತಃ ।
ಪೃಥಕ್ ಪೃಥಕ್ ಸ ಶಾಪಾಂತಮುಕ್ತ್ವಾ ತಾಸಾಂ ಯಥಾಯಥಮ್ ॥ ೫೯
ಜಾತಿಸ್ಮರತ್ವಂ ದಿವ್ಯೇನ ವಿಜ್ಞಾನೇನೋಪಬೃಂಹಿತಮ್ ।
ಮರ್ತ್ಯಭಾವೇನ ಸರ್ವಾಸಾಮಾದಿದೇಶ ಮಹಾಮುನಿಃ ॥ ೬೦
ತತಸ್ತಾಸು ತನೂಸ್ತ್ಯಕ್ತ್ವಾ ಮರ್ತ್ಯಲೋಕಂ ಗತಾಸು ಸಃ ।
ದತ್ತ್ವಾ ಮೇ ನಗರೀಮೇತಾಂ ಪಿತಾ ಖೇದಾದ್ ಗತೋ ವನಮ್ ॥ ೬೧
ಅಥೇಹ ನಿವಸಂತೀಂ ಮಾಂ ದೇವೀ ಸ್ವಪ್ನೇ ಕಿಲಾಂಬಿಕಾ ।
ಮಾನುಷಃ ಪುತ್ರಿ ಭರ್ತಾ ತೇ ಭವಿತೇತಿ ಸಮಾದಿಶತ್ ॥ ೬೨

63. ನನ್ನ ತಂದೆಯು ನನಗಾಗಿ ತಿಳಿಸಿದ ಬೇರೆಬೇರೆ ವಿದ್ಯಾಧರವರರನ್ನೆಲ್ಲ ಬೇಡವೆಂದು ಹೇಳಿ ಇಂದಿಗೂ ನಾನು ಕನ್ಯೆಯಾಗಿಯೇ ಉಳಿದಿದ್ದೇನೆ.
64. ಈಗ ಆಶ್ಚರ್ಯಮಯವಾದ ರೀತಿಯಲ್ಲಿ ನೀನು ಇಲ್ಲಿಗೆ ಬಂದುದರಿಂದಲೂ ಆಶ್ಚರ್ಯಕರವಾದ ನಿನ್ನ ಶರೀರದಿಂದಲೂ ವಶೀಭೂತಳಾದ ನಾನು ನನ್ನನ್ನು ನಿನಗೆ ಅರ್ಪಿಸಿದ್ದೇನೆ.
65. ಮುಂದಿನ ಚತುರ್ದಶಿಯಲ್ಲಿ ನಿನಗೋಸ್ಕರ ನನ್ನ ತಂದೆಗೆ ವಿಜ್ಞಾಪನೆ ಮಾಡಲು ಋಷಭಗಿರಿ ಎಂಬ ದೊಡ್ಡ ಬೆಟ್ಟಕ್ಕೆ ಹೋಗುತ್ತೇನೆ.
66. ಆ ಶುಭತಿಥಿಯಂದು ಪ್ರತಿವರ್ಷವೂ ಭಗವಾನ್ ಶಿವನನ್ನು ಪೂಜಿಸಲು ಎಲ್ಲ ದಿಕ್ಕುಗಳಿಂದಲೂ ಶ್ರೇಷ್ಠರಾದ ವಿದ್ಯಾಧರರು ಅಲ್ಲಿಗೆ ಬಂದು ಸೇರುತ್ತಾರೆ.
67. ನನ್ನ ಅಪ್ಪನೂ ಅಲ್ಲಿಗೆ ಬರುತ್ತಾನೆ. ಅವನ ಅಪ್ಪಣೆಯನ್ನು ಪಡೆದುಕೊಂಡು ನಾನಿಲ್ಲಿಗೆ ಬೇಗನೆ ಬರುತ್ತೇನೆ. ಆಮೇಲೆ ನನ್ನನ್ನು ಮದುವೆಮಾಡಿಕೋ.
68. ಆದ್ದರಿಂದ ಅಲ್ಲಿಯವರೆಗೂ ಇಲ್ಲಿರು" ಎಂದು ಹೇಳಿ ಚಂದ್ರಪ್ರಭೆಯು ವಿದ್ಯಾಧರರಿಗೆ ಉಚಿತವಾದ ಬೇರೆ ಬೇರೆ ವಿಧದ ಭೋಗವಸ್ತುಗಳಿಂದ ಶಕ್ತಿದೇವನನ್ನು ಉಪಚರಿಸಿದಳು.
69. ಅಲ್ಲಿ ಉಳಿದುಕೊಂಡ ಶಕ್ತಿದೇವನಿಗೆ ಕಾಳ್ಗಿಚ್ಚಿನಿಂದ ಬೆಂದವನಿಗೆ ಅಮೃತದ ಕೊಳದಲ್ಲಿ ಮುಳುಗಿದಾಗ ಉಂಟಾಗುವಂಥ ಸುಖವುಂಟಾಯಿತು.

---

ತೇನ ವಿದ್ಯಾಧರಾಂಸ್ತಾಂಸ್ತಾನ್ ವರಾನುದ್ದಿಶತೋ ಬಹೂನ್ ।
ಪಿತುರ್ವಿಧಾರಣಂ ಕೃತ್ವಾ ಕನ್ಯೈವಾದ್ಯಾಪ್ಯಹಂ ಸ್ಥಿತಾ ॥ ೬೩
ಇದಾನೀಂ ಚಾಮುನಾಶ್ಚರ್ಯಮಯೇನಾಗಮನೇನ ತೇ ।
ವಪುಷಾ ಚ ವಶೀಕೃತ್ಯ ತುಭ್ಯಮೇವಾಹಮರ್ಪಿತಾ ॥ ೬೪
ತದ್ ವ್ರಜಾಮಿ ಚತುರ್ದಶ್ಯಾಮಾಗಾಮಿನ್ಯಾಂ ಭವತ್ಕೃತೇ ।
ಕರ್ತುಂ ತಾತಸ್ಯ ವಿಜ್ಞಪ್ತಿಮೃಷಭಾಖ್ಯಂ ಮಹಾಗಿರಮ್ ॥ ೬೫
ತತ್ರ ತಸ್ಯಾಂ ತಿಥೌ ಸರ್ವೇ ಮಿಲಂತಿ ಪ್ರತಿವತ್ಸರಮ್ ।
ದೇವಂ ಹರಂ ಪೂಜಯಿತುಂ ದಿಗ್ಭ್ಯೋ ವಿದ್ಯಾಧರೋತ್ತಮಾಃ ॥ ೬೬
ತಾತಸ್ತತ್ರೈವ ಚಾಯಾತಿ ತದನುಜ್ಞಾಮವಾಪ್ಯ ಚ ।
ಇಹಾಗಚ್ಛಾಮ್ಯಹಂ ತೂರ್ಣಂ ತತಃ ಪರಿಣಯಸ್ವ ಮಾಮ್ ॥ ೬೭
ತತ್ತಿಷ್ಠ ತಾವದಿತ್ಯುಕ್ತ್ವಾ ಸಾ ತಂ ವಿದ್ಯಾಧರೋಚಿತೈಃ ।
ಚಂದ್ರಪ್ರಭಾ ಶಕ್ತಿದೇವಂ ತೈಸ್ತೈರ್ಭೋಗೈರುಪಾಚರತ್ ॥ ೬೮
ತಸ್ಯ ಚಾಭೂತ್ತಥೇತ್ಯತ್ರ ತಿಷ್ಠತಸ್ತತ್ಥಾಸುಖಮ್ ।
ಯದ್ದಾವಾನಲತಪ್ತಸ್ಯ ಸುಧಾಹ್ರದನಿಮಜ್ಜನೇ ॥ ೬೯

70. ಚತುರ್ದಶಿಯು ಬಂದಾಗ ಚಂದ್ರಪ್ರಭೆ ಶಕ್ತಿದೇವನಿಗೆ ಹೇಳಿದಳು. '"ಇಂದು ನಾನು ನಿನಗೋಸ್ಕರವಾಗಿ ನನ್ನ ತಂದೆಗೆ ವಿಜ್ಞಾಪಿಸಲು ಹೋಗುತ್ತಿದ್ದೇನೆ.

71. ನನ್ನ ಎಲ್ಲ ಸೇವಕರೂ ನನ್ನ ಜೊತೆಯಲ್ಲೇ ಬರುತ್ತಾರೆ. ನೀನು ಒಬ್ಬನೇ ಇಲ್ಲಿ ಎರಡು ದಿವಸ ಇರಬೇಕೆಂಬುದಕ್ಕೆ ದುಃಖಪಡಬೇಡ.

72. ಈ ಅರಮನೆಯಲ್ಲಿ ನೀನೊಬ್ಬನೇ ಇರುವಾಗ ಯಾವ ಕಾರಣದಿಂದಲೂ ಮಧ್ಯದ ಅಂತಸ್ತಿಗೆ ಹತ್ತಿಹೋಗಬಾರದು."

73. ಹೀಗೆ ಆ ಯುವಕನಿಗೆ ಹೇಳಿ ಅವನ ಬಳಿಯಲ್ಲೇ ತನ್ನ ಮನಸ್ಸನ್ನು ಬಿಟ್ಟು, ಅವನ ಮನಸ್ಸಿನಿಂದ ಹಿಂಬಾಲಿಸಲ್ಪಟ್ಟವಳಾಗಿ ಚಂದ್ರಪ್ರಭೆ ಅಲ್ಲಿಂದ ಹೊರಟಳು.

74. ಅಲ್ಲಿ ಒಬ್ಬನೇ ಉಳಿದ ಶಕ್ತಿದೇವನು ಮನಸ್ಸನ್ನು ವಿನೋದಗೊಳಿಸಲು (ಅರಮನೆಯ) ವೈಭವೋಪೇತವಾದ ಬೇರೆ ಬೇರೆ ಜಾಗಗಳಲ್ಲೆಲ್ಲ ಸುತ್ತಾಡಿದನು.

75. ಈ ವಿದ್ಯಾಧರಪುತ್ರಿಯು ತಾನು ಮಧ್ಯಮ ಅಂತಸ್ತಿಗೆ ಹತ್ತಿಹೋಗುವುದನ್ನು ಮಾತ್ರ ಏಕೆ ಬೇಡವೆಂದಳು ಎಂದು ಅವನಿಗೆ ಕುತೂಹಲ ಉಂಟಾಯಿತು.

76. ಅವನು ಅರಮನೆಯ ಮಧ್ಯಮ ಅಂತಸ್ತಿಗೆ ಹತ್ತಿ ಹೋದನು. ಬಹುಮಟ್ಟಿಗೆ ಬೇಡವೆಂಬುದನ್ನು ಮಾಡುವುದೇ ಮನುಷ್ಯರ ಮನಸ್ಸಿನ ಪ್ರವೃತ್ತಿಯಾಗಿರುತ್ತದೆಯಲ್ಲವೆ ?

---

ಪ್ರಾಪ್ತಾಯಾಂ ಚ ಚತುರ್ದಶ್ಯಾಂ ಸಾ ತಂ ಚಂದ್ರಪ್ರಭಾಬ್ರವೀತ್ ।
ಅದ್ಯ ಗಚ್ಛಾಮಿ ವಿಜ್ಞಪ್ತ್ಯೈ ತಾತಸ್ಯಾಹಂ ಭವತ್ಕೃತೇ ॥ ೭೦
ಸರ್ವಃ ಪರಿಜನಶ್ಚಾಯಂ ಮಯ್ಯೈವ ಸಹ ಯಾಸ್ಯತಿ ।
ತ್ವಯಾ ಚೈಕಾಕಿನಾ ದುಃಖಂ ನ ಭಾವ್ಯಂ ದಿವಸದ್ವಯಮ್ ॥ ೭೧
ಏಕೇನ ಪುನರೇತಸ್ಮಿನ್ ಮಂದಿರೇಽಪ್ಯವತಿಷ್ಠತಾ ।
ಮಧ್ಯಮಾ ಭವತಾ ಭೂಮಿರ್ನಾರೋಢವ್ಯಾ ಕಥಂಚನ ॥ ೭೨
ಇತ್ಯುಕ್ತ್ವಾ ಸಾ ಯುವಾನಂ ತಂ ನ್ಯಸ್ತಚಿತ್ತಾ ತದಂತಿಕೇ ।
ತದೀಯಚಿತ್ತಾನುಗತಾ ಯಯೌ ಚಂದ್ರಪ್ರಭಾ ತತಃ ॥ ೭೩
ಸೋಽಪ್ಯನ್ಯೇಷು ತತಸ್ತತ್ರ ಸ್ಥಿತಶ್ಚೇತೋ ವಿನೋದಯನ್ ।
ಸ್ಥಾನಸ್ಥಾನೇಷು ಬಭ್ರಾಮ ಶಕ್ತಿದೇವೋ ಮಹರ್ಧಿಷು ॥ ೭೪
ಕಿಂಸ್ವಿದತ್ರ ನಿಷಿದ್ಧಂ ಮೇ ತಯಾ ಪೃಷ್ಠೇಽಧಿರೋಹಣಮ್ ।
ವಿದ್ಯಾಧರದುಹಿತ್ರೇತಿ ಜಾತಕೌತೂಹಲೋಽಥ ಸಃ ॥ ೭೫
ತಸ್ಯೈವ ಮಧ್ಯಮಾಂ ಭೂಮಿಂ ಮಂದಿರಸ್ಯಾರುರೋಹ ತಾಮ್ ।
ಪ್ರಾಯೋ ವಾರಿತವಾಮಾ ಹಿ ಪ್ರವೃತ್ತಿರ್ಮನಸೋ ನೃಣಾಮ್ ॥ ೭೬

77. ಅಲ್ಲಿಗೆ ಹತ್ತಿಹೋದ ಅವನು ಅಲ್ಲಿ ಗುಪ್ತವಾಗಿದ್ದ ಮೂರು ರತ್ನಮಂಟಪಗಳನ್ನು ಕಂಡನು. ಅವುಗಳಲ್ಲಿ ಒಂದರ ಬಾಗಿಲನ್ನು ತೆರೆದು ಒಳಗೆ ಹೊಕ್ಕನು.

78. ಒಳಕ್ಕೆ ಹೋದ ಅವನು ಒಳ್ಳೆಯ ರತ್ನಮಂಚದಲ್ಲಿ ಹರಡಿದ್ದ ಪುಕ್ಕಗಳ ಮೇಲೆ ಮೈತುಂಬಾ ಬಟ್ಟೆಯನ್ನು ಹೊದ್ದು ಯಾವಳೋ ಮಲಗಿದ್ದುದನ್ನು ಕಂಡನು.

79–80. ಬಟ್ಟೆಯನ್ನು ಎತ್ತಿ ಸರಿಸಿ ಅವನು ನೋಡಿದಾಗ ಅಲ್ಲಿ ಅವನು ಪರೋಪಕಾರಿ ರಾಜನ ಮಗಳೇ ಸತ್ತು ಮಲಗಿರುವುದನ್ನು ಕಂಡು ಚಿಂತಿಸತೊಡಗಿದನು. ಇದೇನು ದೊಡ್ಡ ಅದ್ಭುತ ! ಇವಳೇನು ಎಚ್ಚರವೇ ಇಲ್ಲದ ನಿದ್ದೆಯಲ್ಲಿರುವಳೇ ಅಥವಾ ಇದು ಕೊನೆಯೇ ಇಲ್ಲದ ಭ್ರಾಂತಿಯೇ ?

81. ಯಾವಳಿಗೋಸ್ಕರ ನಾನು ಪ್ರವಾಸವನ್ನು ಕೈಗೊಂಡೆನೋ, ಅವಳೇ ಇಲ್ಲಿ ಇದ್ದಾಳೆ. ಪ್ರಾಣಗಳು ಇಲ್ಲಿ ಹೋಗಿದ್ದರೂ ಆ ದೇಶದಲ್ಲಿ ಜೀವಂತವಾಗಿದ್ದಾಳೆ.

82. ಇವಳ (ಮೈಯ) ಕಾಂತಿಯು ಕುಂದಿಲ್ಲ. ಆದ್ದರಿಂದ ಬ್ರಹ್ಮನು ಯಾವುದೋ ಕಾರಣದಿಂದ ಇಲ್ಲಿ ಇಂದ್ರಜಾಲವನ್ನು ಹರಡಿದ್ದಾನೆ ಎಂಬುದು ನನಗೆ ಖಚಿತವಾಗಿದೆ

83. ಹೀಗೆ ಆಲೋಚಿಸಿ ಆ ಮಂಟಪದಿಂದ ಹೊರಗೆ ಬಂದು ಒಂದೊಂದಾಗಿ ಇನ್ನೆರಡು ಮಂಟಪಗಳನ್ನೂ ಹೊಕ್ಕು ಒಳಗೆ ಅದೇ ರೀತಿಯಾಗಿ ಇನ್ನಿಬ್ಬರು ಕನ್ಯೆಯರನ್ನೂ ಕಂಡನು.

---

ಆರೂಢಸ್ತತ್ರ ಚಾಪಶ್ಯದ್ ಗುಪ್ತಾಂಸ್ತ್ರೀನ್ ರತ್ನಮಂಡಪಾನ್ ।
ಏಕಂ ಚೋದ್ಘಾಟಿತದ್ವಾರಂ ತನ್ಮಧ್ಯಾತ್ ಪ್ರವಿವೇಶ ಸಃ ॥ ೭೭

ಪ್ರವಿಶ್ಯ ಚಾಂತಃ ಸದ್ರತ್ನಪರ್ಯಂಕೇ ನ್ಯಸ್ತತೂಲಿಕೇ ।
ಪಟಾವಗುಂಠಿತತನುಂ ಶಯಾನಾಂ ಕಾಂಚಿದೈಕ್ಷತ ॥ ೭೮

ವೀಕ್ಷತೇ ಯಾವದುತ್‍ಕ್ಷಿಪ್ಯ ಪಟಂ ತಾವನ್‍ಮೃತಾಂ ತಥಾ ।
ಪರೋಪಕಾರಿನೃಪತೇಸ್ತನಯಾಂ ವರಕನ್ಯಕಾಮ್ ॥ ೭೯

ದೃಷ್ಟ್ವಾ ಚಾಚಿಂತಯತ್ ಸೋಽಥ ಕಿಮಿದಂ ಮಹದದ್ಭುತಮ್ ।
ಕಿಮಪ್ರಬೋಧಸುಪ್ತೇಯಂ ಕಿಂ ವಾ ಭ್ರಾಂತಿರಬಾಧಕಾ ॥ ೮೦

ಯಸ್ಯಾಃ ಕೃತೇ ಪ್ರವಾಸೋಽಯಂ ಮಮ ಸೈವೇಹ ತಿಷ್ಠತಿ ।
ಅಸಾವಪಗತಪ್ರಾಣಾ ತತ್ರ ದೇಶೇ ಚ ಜೀವತಿ ॥ ೮೧

ಅಮ್ಲಾನಕಾಂತಿರಸ್ಯಾಶ್ಚ ತದ್ವಿಧಾತ್ರಾ ಮಮ ಧ್ರುವಮ್ ।
ಕೇನಾಪಿ ಕಾರಣೇನೇದಮಿಂದ್ರಜಾಲಂ ವಿತನ್ಯತೇ ॥ ೮೨

ಇತಿ ಸಂಚಿಂತ್ಯ ನಿರ್ಗತ್ಯ ತಾವನ್ಯೌ ಮಂಡಪೌ ಕ್ರಮಾತ್ ।
ಪ್ರವಿಶ್ಯಾಂತಃ ಸ ದದೃಶೇ ತದ್ವದನ್ಯೇ ಚ ಕನ್ಯಕೇ ॥ ೮೩

84. ಅಲ್ಲಿಂದಲೂ ಹೊರಗೆ ಬಂದು ಆಶ್ಚರ್ಯಪಡುತ್ತಾ ಕುಳಿತುಕೊಂಡ ಅವನು ಆ ಅರಮನೆಯ ಕೆಳಗೆ ಅತ್ಯಂತ ಉತ್ತಮವಾದ ಬಾವಿಯನ್ನು ಕಂಡನು.

85. ಆ ಬಾವಿಯ ದಡದಲ್ಲಿ ರತ್ನಮಯವಾದ ಜೀನನ್ನು ಹಾಕಿದ್ದ ಒಂದು ಕುದುರೆಯನ್ನು ಕಂಡನು. ಕುತೂಹಲದಿಂದ ಇಳಿದು ಆ ಕುದುರೆಯ ಬಳಿಗೆ ಹೋದನು.

86. ಆ ಕುದುರೆಯಮೇಲೆ ಯಾವ ಸವಾರನೂ ಇಲ್ಲದಿರುವುದನ್ನು ಕಂಡು ಅದನ್ನು ಏರಲು ಅವನು ಇಷ್ಟಪಟ್ಟನು. (ಹತ್ತಿರಹೋದಾಗ)ಆ ಕುದುರೆಯು ಕಾಲಿನಿಂದ ಒದ್ದು ಅವನನ್ನು ಬಾವಿಯೊಳಕ್ಕೆ ಕೆಡವಿತು.

87. ಅದರೊಳಗೆ ಮುಳುಗಿದ ಆ ಶಕ್ತಿದೇವನು ತನ್ನದೇ ಊರಾದ ವರ್ಧಮಾನಪುರದ ಉದ್ಯಾನದಲ್ಲಿದ್ದ ಬಾವಿಯ ಮಧ್ಯದಿಂದ ತತ್‌ಕ್ಷಣವೇ ಮೇಲಕ್ಕೆ ಎದ್ದು ಬಂದನು.

88. ಆಗ ತನ್ನ ಹುಟ್ಟಿದ ನಾಡಿನಲ್ಲಿ, ಚಂದ್ರಪ್ರಭೆ ಇಲ್ಲದಿರುವುದರಿಂದ ದೀನನಾಗಿ ಮಂಕಾದ ನೈದಿಲೆಗಳಿಗೆ ಸಮಾನನಾಗಿ ತಾನಿರುವುದನ್ನು ಕಂಡನು.

89. "ಈ ವರ್ಧಮಾನಪುರವೆಲ್ಲಿ ? ವಿದ್ಯಾಧರರು ವಾಸಿಸುವ ಆ ನಗರವೆಲ್ಲಿ ? ಆಹಾ ! ಇದೇನು ಅಚ್ಚರಿ ? ಎಲ್ಲ ಮಾಯೆಯ ಆಡಂಬರದ ವಿಜೃಂಭಣೆ !

90. ದುರ್ದೈವಿಯಾದ ನಾನು ಏಕೋ ಯಾರಿಂದಲೋ ಮೋಸಹೋದೆನು. ಅಥವಾ ಮುಂದೇನು ಆಗುವುದೆಂಬುದು ಯಾರಿಗೆ ಗೊತ್ತು ? ಕಷ್ಟ ಕಷ್ಟ !'

---

ತತೋಽಪಿ ನಿರ್ಗತಸ್ತಸ್ಯ ಸಾಶ್ಚರ್ಯೋ ಮಂದಿರಸ್ಯ ಸಃ ।
ಉಪವಿಷ್ಟಸ್ಥಿತೋಽಪಶ್ಯದ್ ವಾಪೀಮತ್ಯುತ್ತಮಾಮಧಃ ॥ ೮೪
ತತ್ತೀರೇ ರತ್ನಪರ್ಯಾಣಂ ದದರ್ಶೈಕಂ ಚ ವಾಜಿನಮ್ ।
ತೇನಾವತೀರ್ಯೈವ ತತಸ್ತತ್ಪಾರ್ಶ್ವಂ ಕೌತುಕಾದ್ ಯಯೌ ॥ ೮೫
ಇಯೇಷ ಚ ತಮಾರೋಢುಂ ಶೂನ್ಯಂ ದೃಷ್ಟ್ವಾ ಸ ತೇನ ಚ ।
ಅಶ್ವೇನಾಹತ್ಯ ಪಾದೇನ ತಸ್ಯಾಂ ವಾಪ್ಯಾಂ ನಿಚಿಕ್ಷಿಪೇ ॥ ೮೬
ತನ್ನಿಮಗ್ನಃ ಸ ಚ ಕ್ಷಿಪ್ರಂ ವರ್ಧಮಾನಪುರಾನ್ನಿಜಾತ್ ।
ಉದ್ಯಾನದೀರ್ಘಿಕಾಮಧ್ಯಾದುನ್ಮಮಜ್ಜ ಸಸಂಭ್ರಮಃ ॥ ೮೭
ದದರ್ಶ ಜನ್ಮಭೂಮೌ ಚ ಸದ್ಯೋ ವಾಪೀಜಲೇ ಸ್ಥಿತಮ್ ।
ಆತ್ಮಾನಂ ಕುಮುದೈಸ್ತುಲ್ಯಂ ದೀನಂ ಚಂದ್ರಪ್ರಭಾಂ ವಿನಾ ॥ ೮೮
ವರ್ಧಮಾನಪುರಂ ಕ್ವೇದಂ ಕ್ವ ಸಾ ವೈದ್ಯಾಧರೀ ಪುರೀ ।
ಅಹೋ ಕಿಮೇತದಾಶ್ಚರ್ಯಂ ಮಾಯಾಡಂಬರಜೃಂಭಿತಮ್ ॥ ೮೯
ಕಷ್ಟಂ ಕಿಮಪಿ ಕೇನಾಪಿ ಮಂದಭಾಗ್ಯೋಽಸ್ಮಿ ವಂಚಿತಃ ।
ಯದಿ ವಾ ಕೋಽತ್ರ ಜಾನಾತಿ ಕೀದೃಶೀ ಭವಿತವ್ಯತಾ ॥ ೯೦

91. ಇತ್ಯಾದಿಯಾಗಿ ಆಲೋಚಿಸುತ್ತಾ ಆ ಶಕ್ತಿದೇವನು ಬಾವಿಯ ಮಧ್ಯದಿಂದೆದ್ದು ವಿಸ್ಮಯದಿಂದ ತನ್ನ ತಂದೆಯ ಮನೆಗೆ ಹೋದನು.

92. ಅಲ್ಲಿ (ತನ್ನ ಕಥೆಯನ್ನು) ಮರೆಮಾಚಿ ತಮಟೆಯವರ ತಿರುಗಾಟದ ಕಥೆಯನ್ನು ಹೇಳಿದನು . ಅವನನ್ನು ತಂದೆಯೂ ಬಂಧುಗಳೂ ಅಭಿನಂದಿಸಿದರು. ಉತ್ಸವವನ್ನಾಚರಿಸುತ್ತಿದ್ದ ಬಂಧುಗಳೊಡನೆ ಅವನಿದ್ದುಬಿಟ್ಟನು.

93. ಮಾರನೆಯ ದಿನ ಮನೆಯಿಂದ ಹೊರಗೆ ಹೊರಟ ಶಕ್ತಿದೇವನು ಮತ್ತೆ ತಮಟೆಯ ಧ್ವನಿಯೊಡನೆ ಘೋಷಿಸಲ್ಪಡುತ್ತಿದ್ದ ಈ ಮಾತುಗಳನ್ನು ಕೇಳಿಸಿಕೊಂಡನು.

94. "ವಿಪ್ರರ ಅಥವಾ ಕ್ಷತ್ರಿಯರ ಮಧ್ಯದಲ್ಲಿ ಯಾವನಾದರೂ ವಸ್ತುತಃ ಕನಕಪುರಿಯನ್ನು ನೋಡಿದ್ದರೆ, ಅವನು ಬಂದು ಹೇಳಲಿ. ಅವನಿಗೆ ರಾಜನು ಯುವರಾಜಪದವಿಯೊಡನೆ ತನ್ನ ಮಗಳನ್ನೂ ಕೊಡುತ್ತಾನೆ."

95. ಅದನ್ನು ಕೇಳಿದೊಡನೆಯೇ ಧೀರ ಶಕ್ತಿದೇವನು ತಮಟೆಯನ್ನು ಬಾರಿಸಿ ಘೋಷಿಸುತ್ತಿದ್ದವರಿಗೆ "ನಾನು ಆ ಕನಕಪುರಿಯನ್ನು ನೋಡಿದ್ದೇನೆ" ಎಂದು ಹೇಳಿದನು.

96. ಅವರು ಕೂಡಲೇ ಅವನನ್ನು ರಾಜನ ಬಳಿಗೆ ಕರೆದೊಯ್ದರು. ರಾಜನು ಅವನನ್ನು ಗುರುತಿಸಿ 'ಹಿಂದಿನಂತೆ ಈಗಲೂ ಇವನು ಸುಳ್ಳನ್ನೇ ಹೇಳುತ್ತಿದ್ದಾನೆ' ಎಂದುಕೊಂಡನು.

---

ಇತ್ಯಾದಿ ಚಿಂತಯನ್ ಸೋಽಥ ವಾಪೀಮಧ್ಯಾತ್ ಸಮುತ್ಥಿತಃ ।
ಸವಿಸ್ಮಯಃ ಶಕ್ತಿದೇವೋ ಯಯೌ ಪಿತೃಗೃಹಂ ನಿಜಮ್ ॥ ೯೧
ತತ್ರಾಪದಿಷ್ಟಪಟಹಭ್ರಮಣಃ ಕೃತಕೈತವಃ ।
ಪಿತ್ರಾಭಿನಂದಿತಸ್ತಸ್ಥೌ ಸೋತ್ಸವೈಃ ಸ್ವಜನೈಃ ಸಹ ॥ ೯೨
ದ್ವಿತೀಯೇಽಹ್ನಿ ಬಹಿರ್ಗೇಹಾನ್ನಿರ್ಗತಶ್ಚಾಶೃಣೋತ್ ಪುನಃ ।
ಘೋಷ್ಯಮಾಣಂ ಸಪಟಹಂ ಪುರೇ ತಸ್ಮಿನ್ನಿದಂ ವಚಃ ॥ ೯೩
ವಿಪ್ರಕ್ಷತ್ರಿಯಮಧ್ಯಾತ್ ಕನಕಪುರೀ ಯೇನ ತತ್ತ್ವತೋ ದೃಷ್ಟಾ ।
ವಕ್ತು ಸ ತಸ್ಮೈ ತನಯಾಂ ಸಯೌವರಾಜ್ಯಾಂ ದದಾತಿ ನೃಪಃ ॥ ೯೪
ತಚ್ಛ್ರುತ್ವೈವ ಸ ಗತ್ವಾ ತಾನ್ ಪಟಹೋದ್ಘೋಷಕಾನ್ ಕೃತೀ ।
ಮಯಾ ದೃಷ್ಟಾ ಪುರೀ ಸೇತಿ ಶಕ್ತಿದೇವೋಽಬ್ರವೀತ್ ಪುನಃ ॥ ೯೫
ತೈಸ್ತೂರ್ಣಂ ನೃಪತೇರಗ್ರಂ ಸ ನೀತೋಽಭೂನ್ನೃಪೋಽಪಿ ತಮ್ ।
ಪ್ರಾಗ್ವನ್ಮೇನೇ ಪರಿಜ್ಞಾಯ ಪುನರ್ವಿತಥವಾದಿನಮ್ ॥ ೯೬

97–98. “ನಾನು ಸುಳ್ಳು ಹೇಳುತ್ತಿದ್ದರೆ, ನಾನು ಆ ನಗರವನ್ನು ನೋಡಿಲ್ಲವೆಂದಾದರೆ, ಈಗ ನನ್ನ ಶರೀರವನ್ನೇ ಪಣವಾಗಿ ಇಡುತ್ತೇನೆ. ಇಂದು ರಾಜಪುತ್ರಿಯು ನನ್ನನ್ನು ಪ್ರಶ್ನಿಸಲಿ” ಎಂದು ಶಕ್ತಿದೇವನು ಹೇಳಿದಾಗ ರಾಜನು ಸೇವಕರನ್ನು ಕಳುಹಿಸಿ ತನ್ನ ಮಗಳನ್ನು ಅಲ್ಲಿಗೇ ಕರೆಸಿದನು.

99. ಮೊದಲೇ ತಾನು ನೋಡಿದ್ದ ಆ ವಿಪ್ರನನ್ನು ಮತ್ತೆ ನೋಡಿ ರಾಜಪುತ್ರಿಯು “ಅಪ್ಪ ಇವನು ಮತ್ತೆ ಏನನ್ನಾದರೂ ಸುಳ್ಳನ್ನೇ ಹೇಳುತ್ತಾನೆ” ಎಂದು ರಾಜನಿಗೆ ಹೇಳಿದಳು.

100. ಆಗ ಶಕ್ತಿದೇವನಿಂತೆಂದನು. “ನಾನು ಸಟೆಯನ್ನೋ ದಿಟವನ್ನೋ ನುಡಿಯುತ್ತಿರಲಿ. ರಾಜಪುತ್ರಿ, ನೀನಂತೂ ನನಗೆ ಒಂದು ಕೌತುಕದ ಬಗೆಗೆ ಹೇಳು.

101. ಕನಕಪುರಿಯಲ್ಲಿ ಮಂಚದಲ್ಲಿ ನೀನು ಸತ್ತಿದ್ದುದನ್ನು ನಾನು ಕಂಡಿದ್ದೆನು, ಇಲ್ಲಿ ಮತ್ತೆ ಬದುಕಿರುವ ನಿನ್ನನ್ನು ನೋಡುತ್ತಿದ್ದೇನೆ. ಇದು ಹೇಗೆ ?”

102. ಶಕ್ತಿದೇವನು ಹೀಗೆ ಹೇಳಿದಾಗ ಆ ರಾಜಪುತ್ರಿ ಕನಕರೇಖೆಗೆ ಸುಳುಹು ಸಿಕ್ಕಿತು. ಅವಳು ತಂದೆಯ ಮುಂದೆ ಇಂತೆಂದಳು.

103. “ಅಪ್ಪ ಈ ಮಹಾನುಭಾವನು ಸತ್ಯವಾಗಿ ಆ ನಗರವನ್ನು ನೋಡಿದ್ದಾನೆ. ಅಲ್ಲಿರುವ ನನಗೆ ಇವನೇ ಶೀಘ್ರದಲ್ಲೇ ಗಂಡನಾಗುವನು.

---

ಮಿಥ್ಯಾ ಚೇದ್ವಚ್ಮಿ ನ ಮಯಾ ದೃಷ್ಟಾ ಸಾ ನಗರೀ ಯದಿ ।
ತದಿದಾನೀಂ ಶರೀರಸ್ಯ ನಿಗ್ರಹೇಣ ಪಣೋ ಮಮ ॥ ೯೭
ಅದ್ಯ ಸಾ ರಾಜಪುತ್ರೀ ಮಾಂ ಪೃಚ್ಛತ್ವಿತ್ಯುದಿತೇ ತತಃ ।
ಗತ್ವಾ ಚಾನುಚರೈ ರಾಜಾ ತತ್ರೈವಾನಾಯಯತ್ ಸುತಾಮ್ ॥ ೯೮
ಸಾ ದೃಷ್ಟ್ವಾ ದೃಷ್ಟಪೂರ್ವಂ ತಂ ವಿಪ್ರಂ ರಾಜಾನಮಭ್ಯಧಾತ್ ।
ತಾತ ಮಿಥ್ಯೈವ ಭೂಯೋಽಪಿ ಕಿಂಚಿದ್ ವಕ್ತ್ಯಸಾವಿತಿ ॥ ೯೯
ಶಕ್ತಿದೇವಸ್ತತೋಽವಾದೀದಹಂ ಸತ್ಯಂ ಮೃಷೈವ ವಾ ।
ವಚ್ಮಿ ರಾಜಸುತೇ ತ್ವಂ ತು ವದೈಕಂ ಮಮ ಕೌತುಕಮ್ ॥ ೧೦೦
ಮಯಾ ಕನಕಪುರ್ಯಾಂ ತ್ವಂ ಪರ್ಯಂಕೇ ಗತಜೀವಿತಾ ।
ದೃಷ್ಟಾ ಚೇಹ ಚ ಪಶ್ಯಾಮಿ ಜೀವಂತೀಂ ಭವತೀಂ ಕಥಮ್ ॥ ೧೦೧
ಇತ್ಯುಕ್ತಾ ಶಕ್ತಿದೇವೇನ ಸಾಭಿಜ್ಞಾನಂ ನೃಪಾತ್ಮಜಾ ।
ಸದ್ಯಃ ಕನಕರೇಖಾ ಸಾ ಜಗಾದೈವಂ ಪಿತುಃ ಪುರಃ ॥ ೧೦೨
ತಾತ ದೃಷ್ಟಾಮುನಾ ಸತ್ಯಂ ನಗರೀ ಸಾ ಮಹಾತ್ಮನಾ ।
ಅಚಿರಾಚ್ಚೈಷ ಭರ್ತಾ ಮೇ ತತ್ರಸ್ಥಾಯಾ ಭವಿಷ್ಯತಿ ॥ ೧೦೩

104. ಅಲ್ಲಿ ನನ್ನ ಇನ್ನೂ ಮೂವರು ಸೋದರಿಯರನ್ನು ಇವನೇ ಮದುವೆ ಮಾಡಿಕೊಳ್ಳುವನು. ಆ ನಗರದಲ್ಲೇ ವಿದ್ಯಾಧರರ ಅಧಿಪತಿಯಾಗಿ ಆಳುವನು.

105. ನಾನು ಇಂದು ಆ ನಗರದೊಳಕ್ಕೂ ನನ್ನ ಶರೀರದೊಳಕ್ಕೂ ಪ್ರವೇಶ ಮಾಡಬೇಕು. ಋಷಿಯ ಶಾಪದಿಂದ ನಾನು ನಿನ್ನ ಮನೆಯಲ್ಲಿ ಹುಟ್ಟಿದ್ದೆನಷ್ಟೆ

106–107. ಮನುಷ್ಯ ರೂಪವನ್ನು ಹೊಂದಿರುವ ನಿನ್ನ ಗುಟ್ಟನ್ನು ಕನಕಪುರಿಯಲ್ಲಿ ನಿನ್ನ ದೇಹವನ್ನು ನೋಡಿದ ಮನುಷ್ಯನು ಯಾವಾಗ ಭೇದಿಸುವನೋ, ಆಗ ನಿನಗೆ ಶಾಪವಿಮೋಚನೆಯಾಗುವುದು. ಆ ಮನುಷ್ಯನೇ ನಿನ್ನ ಪತಿಯಾಗುವನು ಎಂದು ನನ್ನ ಶಾಪದ ಕೊನೆಯನ್ನು ಆ ಋಷಿಯು ಮತ್ತೆ ಹೇಳಿದ್ದನು.

108. ಮನುಷ್ಯ ಭಾವದಲ್ಲಿದ್ದರೂ ಜನ್ಮಾಂತರದ ಸ್ಮರಣೆಯನ್ನು ಹೊಂದಿದ್ದ ನನಗೆ ಆ ಎಲ್ಲ ಜ್ಞಾನವೂ ಇತ್ತು. ಆದ್ದರಿಂದ ಸಿದ್ಧಿಗಾಗಿ ನನ್ನ ವಿದ್ಯಾಧರಸ್ಥಾನಕ್ಕೆ ನಾನು ಹೋಗುತ್ತೇನೆ."

109. ಹೀಗೆ ಹೇಳಿ ರಾಜಪುತ್ರಿಯು ತನ್ನ ಶರೀರವನ್ನು ತ್ಯಜಿಸಿ ಅದೃಶ್ಯಳಾದಳು. ಆ ಅರಮನೆಯಲ್ಲಿ ಗಡಿಬಿಡಿಯಾಯಿತು. ಜನರು ಆಕ್ರಂದಿಸಿದರು.

---

ತತ್ರ ಮದ್‌ಭಗಿನೀಶ್ಚಾನ್ಯಾಸ್ತಿಸ್ರೋಽಯಂ ಪರಿಣೇಷ್ಯತಿ ।
ವಿದ್ಯಾಧರಾಧಿರಾಜ್ಯಂ ಚ ತಸ್ಯಾಂ ಪುರಿ ಕರಿಷ್ಯತಿ ॥ ೧೦೪

ಮಯಾ ತ್ವದ್ಯ ಪ್ರವೇಷ್ಟವ್ಯಾ ಸ್ವಾ ತನುಶ್ಚ ಪುರೀ ಚ ಸಾ ।
ಮುನೇಃ ಶಾಪಾದಹಂ ಹ್ಯತ್ರ ಜಾತಾಭೂವಂ ಭವದ್‌ಗೃಹೇ ॥ ೧೦೫

ಯದಾ ಕನಕಪುರ್ಯಾಂ ತೇ ದೇಹಮಾಲೋಕ್ಯ ಮಾನುಷಃ ।
ಮರ್ತ್ಯಭಾವಭೃತಸ್ತತ್ತ್ವ ಪ್ರತಿಭೇದಂ ಕರಿಷ್ಯತಿ ॥ ೧೦೬

ತದಾ ತೇ ಶಾಪಮುಕ್ತಿಶ್ಚ ಸ ಚ ಸ್ಯಾನ್ಮಾನುಷಃ ಪತಿಃ ।
ಇತಿ ಮೇ ಚ ಸ ಶಾಪಾಂತಂ ಪುನರೇವಾದಿಶನ್ಮುನಿಃ ॥ ೧೦೭

ಜಾತಿಸ್ಮರಾ ಚ ಮಾನುಷ್ಯೇಽಪ್ಯಹಂ ಜ್ಞಾನವತೀ ತಥಾ ।
ತದ್ ವ್ರಜಾಮ್ಯಧುನಾ ಸಿದ್ಧ್ಯೈ ನಿಜಂ ವೈದ್ಯಾಧರಂ ಪದಮ್ ॥ ೧೦೮

ಇತ್ಯುಕ್ತ್ವಾ ರಾಜಪುತ್ರೀ ಸಾ ತನುಂ ತ್ಯಕ್ತ್ವಾ ತಿರೋದಧೇ ।
ತುಮುಲಶ್ಚೋದಭೂತ್ತಸ್ಮಿನ್ನಾಕ್ರಂದೋ ರಾಜಮಂದಿರೇ ॥ ೧೦೯

110–111. ಶಕ್ತಿದೇವನು ಎರಡು ಕಡೆಯಲ್ಲೂ ಎಲ್ಲವನ್ನೂ ಕಳೆದುಕೊಂಡು 'ಉಭಯತೋ ಭ್ರಷ್ಟ'ನಾಗಿ, ಅಂತಿಂತಹ ದಾಟಲಾಗದ ಕ್ಲೇಶಗಳಿಂದ ಸಿಕ್ಕಿದರೂ ಸಿಕ್ಕದ ಆ ಇಬ್ಬರು ಪ್ರಿಯೆಯರನ್ನೂ ನೆನೆನೆನೆದು, ನಿರಾಶನಾಗಿ ತನ್ನನ್ನು ತಾನೇ ಹಳಿದುಕೊಂಡು, ಮನೋರಥವು ಈಡೇರದೆ ರಾಜನ ಅರಮನೆಯಿಂದ ಆ ಕ್ಷಣದಲ್ಲೇ ಹೊರಗೆಬಂದು ಹೀಗೆ ಚಿಂತಿಸತೊಡಗಿದನು.

112. 'ನನ್ನ ಇಷ್ಟಾರ್ಥವು ಸಿದ್ಧಿಸುವುದೆಂದು ಕನಕರೇಖೆಯಂತೂ ಹೇಳಿದಳು. ಆದ್ದರಿಂದ ನಾನು ವಿಷಾದ ಪಡುವುದೇಕೆ ? ಎಲ್ಲ ಸಿದ್ಧಿಗಳೂ ಬಲವನ್ನು ಅವಲಂಬಿಸುವುವು ಅಲ್ಲವೆ ?

113. ಅದೇ ದಾರಿಯಿಂದ ಮತ್ತೆ ಕನಕಪುರಿಗೆ ಹೋಗುತ್ತೇನೆ. ಮತ್ತೆ ದೈವವು ನನಗೆ ಅದರ ಉಪಾಯವನ್ನೊದಗಿಸುತ್ತದೆ.'

114. ಹೀಗೆ ಆಲೋಚಿಸಿ ಶಕ್ತಿದೇವನು ಆ ನಗರದಿಂದ ಹೊರಟನು. ಪ್ರಯತ್ನ ಮಾಡಿದ ಧೀರರು ತಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳದೆ ಹಿಂದಿರುಗುವುದೇ ಇಲ್ಲ.

115. ಬಹುಕಾಲದವರೆಗೆ ನಡೆದು ಅವನು ಮತ್ತೆ ಕಡಲಿನ ಮರಳಿನ ದಡದ ಮೇಲಿದ್ದ ವಿಟಂಕಪುರವನ್ನು ತಲುಪಿದನು.

---

ಶಕ್ತಿದೇವೋಽಪ್ಯುಭಯತೋ ಭ್ರಷ್ಟಸ್ತೈಸ್ತೈರ್ದುರುತ್ತರೈಃ ।
ಕ್ಲೇಶೈಃ ಪ್ರಾಪ್ಯಾಪಿ ನ ಪ್ರಾಪ್ತೇ ಧ್ಯಾಯಂಸ್ತೇ ದ್ವೇ ಅಪಿ ಪ್ರಿಯೇ ॥ ೧೧೦
ನಿಂದನ್ ಖಿನ್ನೋಽಪಿ ಚಾತ್ಮಾನಮಸಂಪೂರ್ಣಮನೋರಥಃ ।
ನಿರ್ಗತ್ಯ ರಾಜಭವನಾತ್ ಕ್ಷಣಾದೇವಮಚಿಂತಯತ್ ॥ ೧೧೧
ಅಭೀಷ್ಟಂ ಭಾವಿ ಮೇ ತಾವದುಕ್ತಂ ಕನಕರೇಖಯಾ ।
ತತ್ ಕಿಮರ್ಥಂ ವಿಷೀದಾಮಿ ಸತ್ತ್ವಾಧೀನಾ ಹಿ ಸಿದ್ಧಯಃ ॥ ೧೧೨
ಪಥಾ ತೇನೈವ ಕನಕಪುರೀಂ ಗಚ್ಛಾಮಿ ತಾಂ ಪುನಃ ।
ಭೂಯೋಽಪ್ಯವಶ್ಯಂ ದೈವಂ ಮೇ ತತ್ರೋಪಾಯಂ ಕರಿಷ್ಯತಿ ॥ ೧೧೩
ಇತ್ಯಾಲೋಚ್ಯೈವ ಸ ಪ್ರಾಯಾಚ್ಛಕ್ತಿದೇವಃ ಪುರಾತ್ತತಃ ।
ಅಸಿದ್ಧಾರ್ಥಾ ನಿವರ್ತಂತೇ ನಹಿ ಧೀರಾಃ ಕೃತೋದ್ಯಮಾಃ ॥ ೧೧೪
ಗಚ್ಛಂಶ್ಚಿರಾಯ ಸಂಪ್ರಾಪ್ಯ ಜಲಧೇಃ ಪುಲಿನಸ್ಥಿತಮ್ ।
ತದ್ವಿಟಂಕಪುರಂ ನಾಮ ನಗರಂ ಪುನರೇವ ಸಃ ॥ ೧೧೫

116. ಹಿಂದೆ ಯಾವ ವ್ಯಾಪಾರಿಯ ಜೊತೆಯಲ್ಲಿ ಹೋಗಿದ್ದಾಗ ಹಡಗು ಒಡೆದು ಹೋಗಿತ್ತೋ ಅದೇ ವ್ಯಾಪಾರಿಯು ಅವನೆದುರಿಗೆ ಬಂದನು.

117. "ಇವನೇ ಆ ಸಮುದ್ರದತ್ತನು. ಸಮುದ್ರದೊಳಕ್ಕೆ ಬಿದ್ದ ಇವನು ಹೇಗೆ ತೇಲಿ ಉಳಿದುಕೊಂಡನು ? ಅಥವಾ ಅದೇನೂ ಆಶ್ಚರ್ಯವಲ್ಲ. (ಏಕೆಂದರೆ ಹಾಗೆ ಉಳಿದುಕೊಂಡುದಕ್ಕೆ) ನಾನೇ ಒಂದು ಉದಾಹರಣೆ.'

118. ಎಂದು ಆಲೋಚಿಸಿ ಆ ಬ್ರಾಹ್ಮಣ ಶಕ್ತಿದೇವನು ಅವನ ಬಳಿಗೆ ಸಾರುವಷ್ಟರಲ್ಲಿ ಆ ವ್ಯಾಪಾರಿಯೇ ಇವನನ್ನು ಗುರುತು ಹಿಡಿದು ಸಂತೋಷದಿಂದ ಕಂಠದಲ್ಲಿ ತಬ್ಬಿಕೊಂಡನು.

119. ಅವನನ್ನು ಮನೆಗೆ ಕರೆದುಕೊಂಡು ಹೋಗಿ ಅತಿಥಿಸತ್ಕಾರವನ್ನು ಮಾಡಿ "ಹಡಗು ಒಡೆದು ಹೋದ ಮೇಲೆ ನೀನು ಹೇಗೆ ದಾಟಿಕೊಂಡೆ ?" ಎಂದು ಕೇಳಿದನು.

120. ಶಕ್ತಿದೇವನು ತನ್ನನ್ನು ಮೀನು ನುಂಗಿ ಹೇಗೆ ಉತ್ಥಲ ದ್ವೀಪಕ್ಕೆ ತಲುಪಿಸಿತು ಎಂಬ ವೃತ್ತಾಂತವನ್ನು ಹೇಳಿದನು.

121. ಆಮೇಲೆ ಆ ಶ್ರೇಷ್ಠವ್ಯಾಪಾರಿಯನ್ನು 'ಆಗ ನೀನು ಹೇಗೆ ಕಡಲನ್ನು ದಾಟಿ ಹೋದೆ ಎಂಬುದನ್ನು ಬಣ್ಣಿಸು' ಎಂದು ಕೇಳಿದನು.

122. ಆಗ ಆ ವ್ಯಾಪಾರಿಯಿಂತೆಂದನು. "ಸಮುದ್ರದಲ್ಲಿ ಬಿದ್ದ ನಾನು ಮೂರುದಿನಗಳವರೆಗೆ ಒಂದು ಹಲಗೆಯನ್ನು ಹಿಡಿದುಕೊಂಡಿದ್ದೆನು.

---

ತತ್ರಾಪಶ್ಯಚ್ಚ ವಣಿಜಂ ತಂ ಸಂಮುಖಮುಪಾಗತಮ್ ।
ಯೇನ ಸಾಕಂ ಗತಸ್ಯಾಬ್ಧಿಂ ಪೋತಮಾದಾವಭಜ್ಯತ ॥ ೧೧೬
ಸೋಽಯಂ ಸಮುದ್ರದತ್ತಃ ಸ್ಯಾತ್ ಕಥಂ ಚ ಪತಿತೋಽಂಬುಧೌ ।
ಉತ್ತೀರ್ಣೋಽಯಂ ನ ವಾ ಚಿತ್ರಮಹಮೇವ ನಿದರ್ಶನಮ್ ॥ ೧೧೭
ಇತ್ಯಾಲೋಚ್ಯ ಸ ಯಾವತ್ತಮಭ್ಯೇತಿ ವಣಿಜಂ ದ್ವಿಜಃ ।
ತಾವತ್ ಸ ತಂ ಪರಿಜ್ಞಾಯ ಹೃಷ್ಟಃ ಕಂಠೇಽಗ್ರಹೀದ್ವಣಿಕ್ ॥ ೧೧೮
ಅನೈಷೀಚ್ಚ ನಿಜಂ ಗೇಹಂ ಕೃತಾತಿಥ್ಯಶ್ಚ ಪೃಷ್ಟವಾನ್ ।
ಪೋತಭಂಗೇ ತ್ವಮಂಭೋಧೇಃ ಕಥಮುತ್ತೀರ್ಣವಾನಿತಿ ॥ ೧೧೯
ಶಕ್ತಿದೇವೋಽಪಿ ವೃತ್ತಾಂತಂ ತಥಾ ತಂ ಕೃತ್ಸ್ನಮಬ್ರವೀತ್ ।
ಯಥಾ ಮತ್ಸ್ಯನಿಗೀರ್ಣಃ ಪ್ರಾಗುತ್‌ಸ್ಥಲದ್ವೀಪಮಾಪ ಸಃ ॥ ೧೨೦
ಅನಂತರಂ ಚ ತಮಪಿ ಪ್ರತ್ಯಪೃಚ್ಛದ್ ವಣಿಗ್ವರಮ್ ।
ಕಥಂ ತದಾ ತ್ವಮಪ್ಯಬ್ಧಿಮುತ್ತೀರ್ಣೋ ವರ್ಣ್ಯತಾಮಿತಿ ॥ ೧೨೧
ಅಥಾಬ್ರವೀತ್ ಸೋಽಪಿ ವಣಿಕ್ ತದಾಹಂ ಪತಿತೋಽಂಬುಧೌ ।
ದಿನತ್ರಯಂ ಭ್ರಮನ್ನಾಸಮೇಕಂ ಫಲಕಕಂ ಶ್ರಿತಃ ॥ ೧೨೨

123. ಆಮೇಲೆ ಅಕಸ್ಮಾತ್ತಾಗಿ ಆ ದಾರಿಯಲ್ಲಿ ಇನ್ನೊಂದು ಹಡಗು ಬಂದಿತು. ಕಿರಿಚಿಕೊಳ್ಳುತ್ತಿದ್ದ ನನ್ನನ್ನು ನೋಡಿ ಆ ಹಡಗಿನಲ್ಲಿದ್ದವರು ಎತ್ತಿ ಒಳಗೆ ಕರೆದುಕೊಂಡರು.

124. ಆ ಹಡಗನ್ನೇರಿದ ನಾನು ಅಲ್ಲಿ ಆಗ ನನ್ನ ತಂದೆಯನ್ನು ಕಂಡೆನು. ಬೇರೆ ದ್ವೀಪಕ್ಕೆ ಹೋಗಿ ದೀರ್ಘಕಾಲಾನಂತರ ಅವನು ಆಗ ಹಿಂದಿರುಗಿ ಬರುತ್ತಿದ್ದನು.

125. ತಂದೆಯು ನನ್ನನ್ನು ನೋಡಿ ಗುರುತಿಸಿ ಕುತ್ತಿಗೆಯನ್ನು ಹಿಡಿದು ತಬ್ಬಿಕೊಂಡು ಅಳುತ್ತಾ ನನ್ನ ವೃತ್ತಾಂತವನ್ನು ಕೇಳಿದನು. ನಾನೂ ಅವನಿಗೆ ಹೇಳಿದೆನು.

126. "ಅಪ್ಪ ನೀನು ಪ್ರಯಾಣಮಾಡಿ ದೀರ್ಘಕಾಲವು ಕಳೆದರೂ ಹಿಂದಕ್ಕೆ ಬರಲಿಲ್ಲ. ಆಗ ನನ್ನ ಧರ್ಮವೆಂದು ನಾನೇ ವಾಣಿಜ್ಯದಲ್ಲಿ ತೊಡಗಿಕೊಂಡೆನು.

127. ಆಮೇಲೆ ಬೇರೊಂದು ದ್ವೀಪಕ್ಕೆ ಹೊರಟಿದ್ದ ನಾನು ಹಡಗು ಒಡೆದು ಹೋದುದರಿಂದ ಕಡಲಿನೊಳಗೆ ಬಿದ್ದೆನು. ಇಂದು ನೀವು ಬಂದು ನನ್ನನ್ನು ಮೇಲಕ್ಕೆ ಎತ್ತಿಕೊಂಡಿರಿ."

128. ಹೀಗೆ ನಾನು ಹೇಳಿದಾಗ ತಂದೆಯು ನನ್ನನ್ನು ನಿಂದಿಸುತ್ತಾ ಹೇಳಿದನು "ಜೀವಕ್ಕೇ ಸಂಶಯವನ್ನು ಉಂಟುಮಾಡುವ ಇಂಥ ಕೆಲಸಗಳಿಗೆ ಏಕೆ ಕೈ ಹಾಕುವೆ ?

129. ಮಗನೆ, ನನಗೆ ಸಾಕಷ್ಟು ಧನವಿದೆ. ಮತ್ತೆ ಗಳಿಸುತ್ತಲೂ ಇದ್ದೇನೆ ನೋಡು, ನಿನಗಾಗಿ ಚಿನ್ನದಿಂದ ತುಂಬಿದ ಹಡಗನ್ನು ನಾನು ತಂದಿದ್ದೇನೆ."

---

ತತಸ್ತೇನ ಪಥಾಕಸ್ಮಾದೇಕಂ ವಹನಮಾಗತಮ್ ।
ತತ್ರಸ್ಥೈಶ್ಚಾಹಮಾಕ್ರಂದನ್ ದೃಷ್ಟ್ವಾ ಚಾತ್ರಾಧಿರೋಪಿತಃ ॥ ೧೨೩

ಆರೂಢಶ್ಚಾತ್ರ ಪಿತರಂ ಸ್ವಮಪಶ್ಯಮಹಂ ತದಾ ।
ಗತ್ವಾ ದ್ವೀಪಾಂತರಂ ಪೂರ್ವಂ ಚಿರಾತ್ ತತ್ಕಾಲಮಾಗತಮ್ ॥ ೧೨೪

ಸ ಮಾಂ ದೃಷ್ಟ್ವಾ ಪರಿಜ್ಞಾಯ ಕೃತಕಂಠಗ್ರಹಃ ಪಿತಾ ।
ರುದನ್ನಪೃಚ್ಛದ್ ವೃತ್ತಾಂತಮಹಂ ಚೈವಂ ತಮಬ್ರವಮ್ ॥ ೧೨೫

ಚಿರಕಾಲಪ್ರಯಾತೇಽಪಿ ತಾತ ತ್ವಯ್ಯನುಪಾಗತೇ ।
ಸ್ವಧರ್ಮ ಇತಿ ವಾಣಿಜ್ಯೇ ಸ್ವಯಮಸ್ಮಿ ಪ್ರವೃತ್ತವಾನ್ ॥ ೧೨೬

ತತೋ ದ್ವೀಪಾಂತರಂ ಗಚ್ಛನ್ನಹಂ ವಹನಭಂಗತಃ ।
ಅದ್ಯಾಂಬುಧೌ ನಿಮಗ್ನಃಸನ್ ಪ್ರಾಪ್ಯ ಯುಷ್ಮಾಭಿರುದ್ಧೃತಃ ॥ ೧೨೭

ಏವಂ ಮಯೋಕ್ತಸ್ತಾತೋ ಮಾಂ ಸೋಪಾಲಂಭಮಭಾಷತ ।
ಆರೋಹಸಿ ಕಿಮರ್ಥಂ ತ್ವಮೀದೃಶಾನ್ ಪ್ರಾಣಸಂಶಯಾನ್ ॥ ೧೨೮

ಧನಮಸ್ತಿ ಹಿ ಮೇ ಪುತ್ರ ಸ್ಥಿತಶ್ಚಾಹಂ ತದರ್ಜನೇ ।
ಪಶ್ಯಾನೀತಂ ಮಯೇದಂ ತೇ ವಹನಂ ಹೇಮಪೂರಿತಮ್ ॥ ೧೨೯

130. ಎಂದು ಹೇಳಿ ಧೈರ್ಯವನ್ನಿತ್ತು ತಂದೆಯೇ ಅದೇ ಹಡಗಿನಿಂದ ನನ್ನನ್ನು ವಿಟಂಕಪುರಕ್ಕೆ, ನನ್ನ ಮನೆಗೆ ಕರೆದುತಂದನು.

131. ಇದೆಲ್ಲವನ್ನೂ ಆ ವ್ಯಾಪಾರಿಯಿಂದ ಕೇಳಿದ ಶಕ್ತಿದೇವನು ಆ ರಾತ್ರಿ ಅಲ್ಲೇ ವಿಶ್ರಾಂತಿಯನ್ನು ಪಡೆದು ಮಾರನೆಯ ದಿನ ಅವನಿಗೆ ಹೀಗೆ ಹೇಳಿದನು.

132. "ಎಲೈ ವ್ಯಾಪಾರಿಯೆ, ನಾನು ಮತ್ತೆ (ಉತ್ಪುಲ) ಉತ್ಸ್ಥಲದ್ವೀಪಕ್ಕೆ ಹೋಗಬೇಕು. ಅಲ್ಲಿಗೆ ನಾನು ಹೋಗುವುದು ಹೇಗೆ ಎಂಬುದನ್ನೀಗ ಹೇಳು."

133. "ಅಲ್ಲಿಗೆ ಹೋಗಲು ನನ್ನ ವ್ಯವಹಾರಗಳನ್ನು ನೋಡಿಕೊಳ್ಳುವವರು ಇಂದು ಹೊರಟಿದ್ದಾರೆ. ಆ ಹಡಗನ್ನೇರಿ ಅವರೊಡನೆ ನೀನು ಪ್ರಯಾಣ ಬೆಳೆಸುವವನಾಗು"

134. ಎಂದು ಆ ವ್ಯಾಪಾರಿಯು ಹೇಳಲು ಶಕ್ತಿದೇವನು ಆ ವ್ಯವಹಾರಿಗಳೊಡನೆ ಅಲ್ಲಿಂದ ಉತ್ಸ್ಥಲ (ಉತ್ಪುಲ)ದ್ವೀಪಕ್ಕೆ ಹೊರಟನು.

135. ನನ್ನ ಬಂಧು ಮಹಾನುಭಾವ ವಿಷ್ಣುದತ್ತನು ಇಲ್ಲಿ ಇರುವನು. ಅವನೊಡನೆಯೇ ಆ ಮಠದಲ್ಲಿ ಹಿಂದಿನಂತೆ ವಾಸ ಮಾಡಲು ಬಯಸುತ್ತೇನೆ.

136. ಎಂದು ದ್ವೀಪಕ್ಕೆ ತಲುಪಿದ ಕೂಡಲೇ ಚಿಂತಿಸಿ ಆ ಬ್ರಾಹ್ಮಣ ಶಕ್ತಿದೇವನು ಅಂಗಡಿಗಳ ಮಧ್ಯದ ದಾರಿಯಿಂದ ನಡೆಯಲಾರಂಭಿಸಿದನು.

---

ಇತ್ಯುಕ್ತ್ವಾಶ್ವಾಸ್ಯ ತೇನೈವ ವಹನೇನ ನಿಜಂ ಗೃಹಮ್ ।
ವಿಟಂಕಪುರಮಾನೀತಸ್ತೇನೈವೇದಮಹಂ ತತಃ ॥ ೧೩೦

ಇತ್ಯೇತದ್ ವಣಿಜಸ್ತಸ್ಮಾಚ್ಛಕ್ತಿದೇವೋ ನಿಶಮ್ಯ ಸಃ ।
ವಿಶ್ರಮ್ಯ ಚ ತ್ರಿಯಾಮಾಂ ತಾಮನ್ಯೇದ್ಯುಸ್ತಮಭಾಷತ ॥ ೧೩೧

ಗಂತವ್ಯಮುತ್ಸ್ಥಲದ್ವೀಪಂ ಸಾರ್ಥವಾಹ ಪುನರ್ಮಯಾ ।
ತತ್ ಕಥಂ ತತ್ರ ಗಚ್ಛಾಮಿ ಸಾಂಪ್ರತಂ ಕಥ್ಯತಾಮಿತಿ ॥ ೧೩೨

ಗಂತುಂ ಪ್ರವೃತ್ತಾಸ್ತತ್ರಾದ್ಯ ಮದೀಯಾ ವ್ಯವಹಾರಿಣಃ ।
ತದ್ಯಾನಪಾತ್ರಮಾರುಹ್ಯ ಪ್ರಯಾತು ಸಹ ತೈರ್ಭವಾನ್ ॥ ೧೩೩

ಇತ್ಯುಕ್ತಸ್ತೇನ ವಣಿಜಾ ಸ ತೈಸ್ತದ್ವ್ಯವಹಾರಿಭಿಃ ।
ಸಾಕಂ ತದುತ್ಸ್ಥಲದ್ವೀಪಂ ಶಕ್ತಿದೇವೋ ಯಯೌ ತತಃ ॥ ೧೩೪

ಯಃ ಸ ಬಂಧುರ್ಮಹಾತ್ಮಾ ಮೇ ವಿಷ್ಣುದತ್ತೋಽತ್ರ ತಿಷ್ಠತಿ ।
ಪ್ರಾಗ್ವತ್ ತಸ್ಯೈವ ನಿಕಟಂ ವಸ್ತುಮಿಚ್ಛಾಮಿ ತನ್ಮಠಮ್ ॥ ೧೩೫

ಇತಿ ಸಂಪ್ರಾಪ್ಯ ಚ ದ್ವೀಪಂ ತತ್ಕಾಲಂ ಚ ವಿಚಿಂತ್ಯ ಸಃ ।
ವಿಪಣೀಮಧ್ಯಮಾರ್ಗೇಣ ಗಂತುಂ ಪ್ರಾವರ್ತತ ದ್ವಿಜಃ ॥ ೧೩೬

137. ಅಷ್ಟರಲ್ಲಿ ದೈವವಶಾತ್ ಅವನನ್ನು ಬೆಸ್ತರ ದೊರೆ ಸತ್ಯವ್ರತನ ಮಕ್ಕಳು ಅಲ್ಲೇ ನೋಡಿ ಗುರುತಿಸಿ ಸಮೀಪಕ್ಕೆ ಬಂದು ಹೀಗೆಂದರು.

138. "ಬ್ರಾಹ್ಮಣಶ್ರೇಷ್ಠನೆ, ನಮ್ಮ ತಂದೆಯೊಡನೆ ಕನಕಪುರಿಯನ್ನು ಹುಡುಕುವುದಕ್ಕಾಗಿ ಆಗ ನೀನು ಹೊರಟೆ. ಈಗ ನೀನು ಒಬ್ಬನೇ ಬಂದಿರುವುದು ಹೇಗೆ ?"

139. ಆಗ ಶಕ್ತಿದೇವನು "ಬಡಬಾನಲದ ಬಾಯಲ್ಲಿ ನೀರು ಹಡಗನ್ನು ಸೆಳೆದು ಕೊಂಡಾಗ ನಿಮ್ಮ ತಂದೆಯು ಸಮುದ್ರದೊಳಕ್ಕೆ ಬಿದ್ದುಬಿಟ್ಟನು" ಎಂದು ಅವರಿಗೆ ಹೇಳಿದನು.

140. ಅದನ್ನು ಕೇಳಿ ಕನಲಿ ಕೆಂಡವಾದ ಆ ಬೆಸ್ತನ ಮಕ್ಕಳು ಸೇವಕರಿಗೆ "ಈ ದುರಾತ್ಮನನ್ನು ಕಟ್ಟಿಹಾಕಿರಿ ; ಇವನು ನಮ್ಮ ತಂದೆಯನ್ನು ಕೊಂದು ಹಾಕಿದ್ದಾನೆ" ಎಂದು ಹೇಳಿದರು.

141. "ಹಾಗಿಲ್ಲದಿದ್ದರೆ ಒಂದೇ ದೋಣಿಯಲ್ಲಿದ್ದ ಇಬ್ಬರಲ್ಲಿ ಒಬ್ಬನು ಉಳಿದುಕೊಂಡು ಇನ್ನೊಬ್ಬನು ಬಡಬಾಗ್ನಿಯ ಬಾಯಲ್ಲಿ ಬೀಳುವುದು ಹೇಗೆ ? ಇನ್ನೊಬ್ಬನು ದಾಟಿಕೊಂಡು ಬರುವುದು ಹೇಗೆ ?

142. ನಮ್ಮ ತಂದೆಯ ಕೊಲೆಗಡುಕನಾದ ಇವನನ್ನು ನಾಳೆ ಬೆಳಗ್ಗೆ ಚಂಡಿಕಾದೇವಿಯ ಎದುರಿಗೆ ಬಲಿಪಶುವನ್ನಾಗಿ ಮಾಡಿ ನಾವು ಕೊಲ್ಲಬೇಕು"

---

ತಾವಚ್ಚ ತತ್ರ ದೈವಾತ್ತಂ ದೃಷ್ಟ್ವಾ ದಾಶಪತೇಃ ಸುತಾಃ ।
ಸತ್ಯವ್ರತಸ್ಯ ತಸ್ಯಾರಾತ್ ಪರಿಜ್ಞಾಯೈವಮಬ್ರುವನ್ ॥ ೧೩೭
ತಾತೇನ ಸಾಕಂ ಕನಕಪುರೀಂ ಚೆನ್ವೇಷ್ಟಿತಸ್ತದಾ ।
ಬ್ರಹ್ಮನ್ಗಾಸ್ತ್ವಮೇಕಶ್ಚ ಕಥಮದ್ಯಾಗತೋ ಭವಾನ್ ॥ ೧೩೮
ಶಕ್ತಿದೇವಸ್ತತೋಽವಾದೀದಂಬುರಾಶೌ ಸ ವಃ ಪಿತಾ ।
ಪತಿತೋಽಂಬುಭಿರಾಕೃಷ್ಟಪ್ರವಹಣೋ ವಡವಾಮುಖೇ ॥ ೧೩೯
ತಚ್ಛ್ರುತ್ವಾ ದಾಶಪುತ್ರಾಸ್ತೇ ಕ್ರುದ್ಧಾ ಭೃತ್ಯಾನ್ ಬಭಾಷಿರೇ ।
ಬಧ್ನೀತೈನಂ ದುರಾತ್ಮಾನಂ ಹತೋಽನೇನ ಸ ನಃ ಪಿತಾ ॥ ೧೪೦
ಅನ್ಯಥಾ ಕಥಮೇಕಸ್ಮಿನ್ ಸತಿ ಪ್ರವಹಣೇ ದ್ವಯೋಃ ।
ವಡವಾಗ್ನೌ ಪತೇದೇಕೋ ದ್ವಿತೀಯಶ್ಚೋತ್ತರೇತ್ತತಃ ॥ ೧೪೧
ತದೇಷ ಚಂಡಿಕಾದೇವ್ಯಾಃ ಪುರಸ್ತಾತ್ ಪಿತೃಘಾತಕಃ ।
ಅಸ್ಮಾಭಿರುಪಹಂತವ್ಯಃ ಶ್ವಃ ಪ್ರಭಾತೇ ಪಶೂಕೃತಃ ॥ ೧೪೨

143. ಹೀಗೆ ಸೇವಕರಿಗೆ ಹೇಳಿ ಆ ಬೆಸ್ತನ ಮಕ್ಕಳು ಆಗಲೇ ಶಕ್ತಿದೇವನನ್ನು ಕಟ್ಟಿಹಾಕಿ ಅಲ್ಲಿಂದ ಭಯಂಕರವಾದ ಚಂಡಿಕಾದೇವಾಲಯಕ್ಕೆ ಎಳೆದೊಯ್ದರು.

144. ಆ ಚಂಡಿಕಾಲಯವು ಬಹುಕಾಲದಿಂದ ಅನೇಕರ ಪ್ರಾಣಗಳನ್ನು ಕಬಳಿಸಿತ್ತು. ಅದರಿಂದ ಅದರ ಹೊಟ್ಟೆ ಉಬ್ಬಿಕೊಂಡಂತಿತ್ತು. ತೂಗಾಡುತ್ತಿದ್ದ ಘಂಟೆಗಳ ಸಾಲು ಅದರ ಹಲ್ಲುಗಳ ಪಂಕ್ತಿಯಂತೆ ಇದ್ದು ಅದು ಸಾವಿನ ದೇವತೆಯ ಬಾಯಿಯಂತೆ ಇತ್ತು.

145. ಅಲ್ಲಿ ಕಟ್ಟಿಹಾಕಲ್ಪಟ್ಟು ರಾತ್ರಿಯನ್ನು ಕಳೆಯುತ್ತಾ ತನ್ನ ಬದುಕಿನ ಬಗೆಗೆ ಸಂಶಯಪಡುತ್ತಾ ಶಕ್ತಿದೇವನು ಚಂಡಿಯನ್ನಿಂತು ಪ್ರಾರ್ಥಿಸಿದನು.

146. "ಭಗವತಿ, ರುರು ಎಂಬ ದಾನವನ ಕುತ್ತಿಗೆಯ ನೆತ್ತರನ್ನು ಬೇಕಾದಷ್ಟು ಕುಡಿದಿದ್ದರಿಂದಲೋ ಎಂಬಂತೆ ಎಳೆಯ ನೇಸರಿನ ಬಿಂಬದಂತೆ ಕೆಂಪಾದ ಶರೀರವುಳ್ಳ ನೀನು ಈ ಜಗತ್ತನ್ನೆಲ್ಲ ಕಾಪಾಡುತ್ತಿರುವೆ.

147. ನಾನು ಸದಾ ನಿನ್ನ ಭಕ್ತ. ಈಗ ನಿಷ್ಕಾರಣವಾಗಿ ಶತ್ರುಗಳ ಗುಂಪಿನ ಕೈಗೆ ಸಿಕ್ಕಿದ್ದೇನೆ. ಪ್ರಿಯಜನರು ಸಿಕ್ಕುವರೆಂಬ ಆಸೆಯಿಂದ ಬಹಳದೂರದಿಂದ ಬಂದಿರುವ ನನ್ನನ್ನು ರಕ್ಷಿಸು, ವರದೇ."

148. ಹೀಗೆ ದೇವಿಗೆ ವಿಜ್ಞಾಪನೆಯನ್ನು ಸಲ್ಲಿಸಿ ಹೇಗೋ ನಿದ್ದೆಮಾಡಿದ ಶಕ್ತಿದೇವನು ಕನಸಿನಲ್ಲಿ ದೇವಾಲಯದ ಗರ್ಭಗುಡಿಯಿಂದ ಹೆಂಗಸೊಬ್ಬಳು ಹೊರಬಂದುದನ್ನು ನೋಡಿದನು.

---

ಇತ್ಯುಕ್ತ್ವಾ ದಾಶಪುತ್ರಾಸ್ತೇ ಭೃತ್ಯಾನ್ ಬದ್ಧ್ವೈವ ತಂ ತದಾ ।
ಶಕ್ತಿದೇವಂ ತತೋ ನಿನ್ಯುರ್ಭಯಕೃಚ್ಚಂಡಿಕಾಗೃಹಮ್ ॥ ೧೪೩

ಶಶ್ವತ್ ಕವಲಿತಾನೇಕಜೀವಂ ಪ್ರಪಿತತೋದರಮ್ ।
ಖಚದ್‌ಘಂಟಾವಲೀದಂತಮಾಲಂ ಮೃತ್ಯೋರಿವಾನನಮ್ ॥ ೧೪೪

ತತ್ರ ಬದ್ಧಃ ಸ್ಥಿತೋ ರಾತ್ರೌ ಸಂಶಯಾನಃ ಸ್ವಜೀವಿತೇ ।
ಸ ಶಕ್ತಿದೇವೋ ದೇವೀಂ ತಾಂ ಚಂಡೀಮೇವಂ ವ್ಯಜಿಜ್ಞಪತ್ ॥ ೧೪೫

ಬಾಲಾರ್ಕಬಿಂಬನಿಭಯಾ ಭಗವತಿ ಮೂರ್ತ್ಯಾ ತ್ವಯಾ ಪರಿತ್ರಾತಮ್ ।
ನಿರ್ಭರಪೀತಪ್ರವಿಸೃತರುರುದಾನವಕಂಠರುಧಿರಯೇವ ಜಗತ್ ॥ ೧೪೬

ತನ್ಮಾಂ ಸತತಪ್ರಣತಂ ನಿಷ್ಕಾರಣವಿಧುರವರ್ಗಹಸ್ತಗತಮ್ ।
ರಕ್ಷಸ್ವ ಸುದೂರಾಗತಮಿಷ್ಟಜನಪ್ರಾಪ್ತಿತೃಷ್ಣಯಾ ವರದೇ ॥ ೧೪೭

ಇತಿ ದೇವೀಂ ಸ ವಿಜ್ಞಪ್ಯ ಪ್ರಾಪ್ಯ ನಿದ್ರಾಂ ಕಥಂಚನ ।
ಅಪಶ್ಯದ್ ಯೋಷಿತಂ ಸ್ವಪ್ನೇ ತದ್ಗರ್ಭಗೃಹನಿರ್ಗತಾಮ್ ॥ ೧೪೮

149. ದಿವ್ಯವಾದ ಆಕಾರವುಳ್ಳ ಆಕೆಯು ದಯಾಮಯಿಯಂತೆ ಅವನ ಬಳಿ ಬಂದು ಹೇಳಿದಳು. "ಅಯ್ಯಾ, ಶಕ್ತಿದೇವ, ಹೆದರಬೇಡ. ನಿನಗೆ ಕೆಟ್ಟದ್ದೇನೂ ಆಗುವುದಿಲ್ಲ.

150. ಈ ಬೆಸ್ತನ ಮಕ್ಕಳಿಗೆ ಬಿಂದುಮತೀ ಎಂಬ ತಂಗಿ ಇದ್ದಾಳೆ. ಆ ಕನ್ಯೆಯು ಬೆಳಗ್ಗೆ ನಿನ್ನನ್ನು ನೋಡಿ 'ನನಗೆ ನೀನೇ ಗಂಡನಾಗು' ಎಂದು ಬೇಡಿಕೊಳ್ಳುವಳು.

151. ಅದನ್ನು ನೀನು ಒಪ್ಪಿಕೋ, ಅವಳೇ ನಿನ್ನನ್ನು ಬಿಡಿಸುವಳು. ಅವಳೇನೂ ಬೆಸ್ತರ ಹೆಣ್ಣಲ್ಲ. ಅವಳು ಶಾಪದಿಂದ ಜಾರಿ ಬಂದಿರುವ ದೇವತಾಸ್ತ್ರೀ."

152. ಇದನ್ನು ಕೇಳಿ ಅವನು ಎಚ್ಚರಗೊಂಡಾಗ ಅವನ ಕಣ್ಣುಗಳಿಗೆ ಅಮೃತದ ರಾಶಿಯಂತಿದ್ದ ಆ ಬೆಸ್ತರ ಕನ್ಯೆ ಬೆಳಗಾಗುತ್ತಿದ್ದಂತೆ ಚಂಡಿಯ ದೇವಾಲಯಕ್ಕೆ ಬಂದಳು.

153. ಅವಳೇ ಅವನ ಬಳಿಗೆ ಬಂದು ತನ್ನನ್ನು ಪರಿಚಯಿಸಿಕೊಂಡು ಉತ್ಸುಕಳಾಗಿ ನುಡಿದಳು. " ನಿನ್ನನ್ನು ಇಲ್ಲಿಂದ ಬಿಡಿಸುವೆನು, ನನ್ನ ಇಷ್ಟವನ್ನು ಈಡೇರಿಸು.

154. ನನ್ನ ಸೋದರರಿಗೆ ಇಷ್ಟವಾಗಿದ್ದ ವರರನ್ನೆಲ್ಲ ನಾನು ಬೇಡವೆಂದೆನು. ನಿನ್ನನ್ನು ನೋಡಿದ ಕೂಡಲೇ ನನಗೆ ನಿನ್ನಲ್ಲಿ ಒಲವು ಮೂಡಿದೆ. ನನ್ನನ್ನು ಸ್ವೀಕರಿಸು."

---

ಸಾ ದಿವ್ಯಾಕೃತಿರಭ್ಯೇತ್ಯ ಸದಯೇವ ಜಗಾದ ತಮ್ ।
ಭೋಃ ಶಕ್ತಿದೇವ ಮಾ ಭೈಷೀರ್ನ ತೇऽನಿಷ್ಟಂ ಭವಿಷ್ಯತಿ ॥ ೧೪೯
ಅಸ್ತ್ಯೇಷಾಂ ದಾಶಪುತ್ರಾಣಾಂ ನಾಮ್ನಾ ಬಿಂದುಮತೀ ಸ್ವಸಾ ।
ಸಾ ಪ್ರಾತರ್ವೀಕ್ಷ್ಯ ಕನ್ಯಾ ತ್ವಾಂ ಭರ್ತೃತ್ವೇऽಭ್ಯರ್ಥಯಿಷ್ಯತಿ ॥ ೧೫೦
ತಚ್ಚ ತ್ವಂ ಪ್ರತಿಪದ್ಯೇಥಾಃ ಸೈವ ತ್ವಾಂ ಮೋಚಯಿಷ್ಯತಿ ।
ನ ಚ ಸಾ ಧೀವರೀ ಸಾ ಹಿ ದಿವ್ಯಾ ಸ್ತ್ರೀ ಶಾಪತಶ್ಚ್ಯುತಾ ॥ ೧೫೧
ಏತಚ್ಛ್ರುತ್ವಾ ಪ್ರಬುದ್ಧಸ್ಯ ತಸ್ಯ ನೇತ್ರಾಮೃತಚ್ಛಟಾ ।
ಪ್ರಭಾತೇ ದಾಶಕನ್ಯಾ ಸಾ ತದ್ದೇವೀಗೃಹಮಾಯಯೌ ॥ ೧೫೨
ಬಭಾಷೇ ಚೈನಮಭ್ಯೇತ್ಯ ನಿವೇದ್ಯಾತ್ಮಾನಮುತ್ಸುಕಾ ।
ಇತೋऽಹಂ ಮೋಚಯಾಮಿ ತ್ವಾಂ ತತ್ಕುರುಷ್ವೇಪ್ಸಿತಂ ಮಮ ॥ ೧೫೩
ಭ್ರಾತೄಣಾಂ ಸಂಮತಾ ಹ್ಯೇತೇ ಪ್ರತ್ಯಾಖ್ಯಾತಾ ವರಾ ಮಯಾ ।
ತ್ವಯಿ ದೃಷ್ಟೇ ತು ಮೇ ಪ್ರೀತಿಃ ಸಂಜಾತಾ ತದ್ ಭಜಸ್ವ ಮಾಮ್ ॥ ೧೫೪

155. ಬೆಸ್ತರ ಒಡೆಯನ ಮಗಳು ಬಿಂದುಮತಿ ಹೀಗೆಂದಾಗ ಕನಸನ್ನು ನೆನಪಿಸಿಕೊಂಡು ಸಂತುಷ್ಟನಾದ ಶಕ್ತಿದೇವನು ಅವಳ ಮಾತಿಗೆ ಒಪ್ಪಿಗೆಯನ್ನಿತ್ತನು.

156. ಅವಳು ಅವನನ್ನು ಬಿಡಿಸಿದ ಕೂಡಲೇ, ಕನಸಿನಲ್ಲೇ ದೇವಿ ಅಂಬಿಕೆಯಿಂದ ಆಜ್ಞಾಪಿತರಾಗಿದ್ದ ಅವಳ ಅಣ್ಣಂದಿರೂ ಅವಳ ಇಷ್ಟಾರ್ಥವನ್ನು ನಡೆಸಿಕೊಡಲು ಶಕ್ತಿದೇವನು ಆ ಸುಂದರಿಯನ್ನು ಮದುವೆಮಾಡಿಕೊಂಡನು.

157. ಪುಣ್ಯದಿಂದಲೇ ಸಿಗುವ, ರೂಪಾಂತರದಲ್ಲಿದ್ದ ದೇವತೆಯಾದ ಸುಖಸಿದ್ಧಿಯಂತಿದ್ದ ಆ ಬಿಂದುಮತಿಯೊಡನೆ ಅವನು ಇದ್ದನು.

158. ಒಮ್ಮೆ ಭವನದ ಮೇಲಿದ್ದ ಶಕ್ತಿದೇವನು ಗೋಮಾಂಸದ ಹೊರೆಯನ್ನು ಹೊತ್ತು ಆ ದಾರಿಯಲ್ಲಿ ಬರುತ್ತಿದ್ದ ಒಬ್ಬ ಚಂಡಾಲನನ್ನು ನೋಡಿ ತನ್ನ ನಲ್ಲೆಗೆ ಇಂತೆಂದನು.

159. "ಕೃಶೋದರಿಯೇ ! ಯಾವ ಹಸುಗಳು ಮೂರು ಲೋಕಗಳಿಗೂ ನಮಸ್ಕಾರಕ್ಕೆ ಅರ್ಹವೋ, ಅವುಗಳ ಮಾಂಸವನ್ನು ಈ ಪಾಪಿಯು ಹೇಗೆ ತಿನ್ನುತ್ತಾನೋ, ನೋಡು.'

160. ಅದನ್ನು ಕೇಳಿ ಆ ಬಿಂದುಮತಿಯು ಗಂಡನಿಗೆ ಹೇಳಿದಳು. "ಆರ್ಯಪುತ್ರ, ಇದು ಚಿಂತಿಸಲೂ ಅಸಾಧ್ಯವಾದ ಪಾಪ. ಏನನ್ನು ಹೇಳಲು ಸಾಧ್ಯ ?'

---

ಇತ್ಯುಕ್ತಃ ಸ ತಯಾ ಬಿಂದುಮತ್ಯಾ ದಾಶೇಂದ್ರಕನ್ಯಯಾ ।
ಶಕ್ತಿದೇವಃ ಸ್ಮರನ್ ಸ್ವಪ್ನಂ ಹೃಷ್ಟಸ್ತತ್ ಪ್ರತ್ಯಪದ್ಯತ ॥ ೧೫೫

ತಯೈವ ಮೋಚಿತಸ್ತಾಂ ಚ ಸುಮುಖೀಂ ಪರಿಣೀತವಾನ್ ।
ಸ್ವಪ್ನಲಬ್ಧಾಂಬಿಕಾದೇಶೈರ್ಭ್ರಾತೃಭಿರ್ವಿಹಿತೋತ್ಸವಾಮ್ ॥ ೧೫೬

ತಸ್ಥೌ ಚ ಸುಖಸಿದ್ಧ್ಯೇವ ತತ್ರ ಪುಣ್ಯೈಕಲಬ್ಧಯಾ ।
ರೂಪಾಂತರೋಪಗತಯಾ ಸ ತಯಾ ಸಹ ದಿವ್ಯಯಾ ॥ ೧೫೭

ಏಕದಾ ಹರ್ಮ್ಯಪೃಷ್ಠಸ್ಥೋ ಧೃತಗೋಮಾಂಸಭಾರಕಮ್ ।
ಮಾರ್ಗಾಗತಂ ಸ ಚಂಡಾಲಂ ದೃಷ್ಟ್ವಾ ತಾಮಬ್ರವೀತ್ ಪ್ರಿಯಾಮ್ ॥ ೧೫೮

ವಂದ್ಯಾಸ್ತ್ರಿಜಗತೋऽಪ್ಯೇತಾ ಯಾಃ ಕೃಶೋದರಿ ಧೇನವಃ ।
ತಾಸಾಂ ಪಿಶಿತಮಶ್ನಾತಿ ಪಶ್ಯಾಯಂ ಪಾಪಕೃತ್ ಕಥಮ್ ॥ ೧೫೯

ತಚ್ಛ್ರುತ್ವಾ ಸಾಪ್ಯವಾದೀತ್ತಂ ಪತಿಂ ಬಿಂದುಮತೀ ತದಾ ।
ಅಚಿಂತ್ಯಮಾರ್ಯಪುತ್ರೈತತ್ ಪಾಪಮತ್ರ ಕಿಮುಚ್ಯತೇ ॥ ೧೬೦

161. ನಾನು ಸಣ್ಣ ತಪ್ಪನ್ನು ಮಾಡಿದ್ದರೂ ಹಸುಗಳ ಪ್ರಭಾವದಿಂದ ಈ ಬೆಸ್ತರ ಕುಲದಲ್ಲಿ ಹುಟ್ಟಿದೆನು. ಇನ್ನು ಇವನಿಗೆ ಯಾವ ಪ್ರಾಯಶ್ಚಿತ್ತವಿದೆಯೋ ?

162. ಹೀಗೆ ಹೇಳಿದ ಅವಳನ್ನು ಶಕ್ತಿದೇವನು, "ಪ್ರಿಯೆ, ಇದು ಆಶ್ಚರ್ಯಕರವಾಗಿದೆ. ನೀನು ಯಾರು ? ನಿನಗೆ ಬೆಸ್ತರ ಜನ್ಮ ಏಕೆ ಬಂದಿತು ? ಅದನ್ನು ಹೇಳು" ಎಂದು ಕೇಳಿದನು.

163. ತುಂಬ ಒತ್ತಾಯ ಮಾಡಿ ಕೇಳಿದ ಅವನಿಗೆ ಬಿಂದುಮತಿ ಇಂತೆಂದಳು. "ಇದು ರಹಸ್ಯವಾದರೂ, ನನ್ನ ಮಾತನ್ನು ನಡೆಸಿಕೊಡುವೆಯಾದರೆ, ನಿನಗೆ ಹೇಳುತ್ತೇನೆ."

164. "ಪ್ರಿಯೆ, ನಿಶ್ಚಿತವಾಗಿ ನಿನ್ನ ಮಾತನ್ನು ನಡೆಸುತ್ತೇನೆ" ಎಂದು ಅವನು ಆಣೆಯಿಟ್ಟು ಹೇಳಿದ ಮೇಲೆ ಅವಳು ಅವನಿಗೆ ತನ್ನ ಅಪೇಕ್ಷೆಯನ್ನು ಮೊದಲು ಹೇಳಿದಳು.

165. "ಆರ್ಯಪುತ್ರ, ಈ ದ್ವೀಪದಲ್ಲಿ ಈಗ ನಿನಗೆ ಇನ್ನೊಬ್ಬಳು ಹೆಂಡತಿ ಬರುತ್ತಾಳೆ. ಅವಳು ಬಹುಬೇಗನೆ ಗರ್ಭವನ್ನು ಧರಿಸುವಳು.

166. ಗರ್ಭವನ್ನು ಅವಳು ಧರಿಸಿದ ಮೇಲೆ ಎಂಟನೆಯ ತಿಂಗಳಲ್ಲಿ ನೀನು ಅವಳ ಹೊಟ್ಟೆಯನ್ನು ಬಗೆದು ಗರ್ಭವನ್ನು ಹೊರಗೆ ಎಳೆಯಬೇಕು. ಇದರಲ್ಲಿ ಯಾವ ಕರುಣೆಯನ್ನೂ ತೋರಿಸಬಾರದು.

---

ಅಹಂ ಗವಾಂ ಪ್ರಭಾವೇಣ ಸ್ವಲ್ಪಾದಪ್ಯಪರಾಧತಃ ।
ಜಾತಾ ದಾಶಕುಲೇऽಮುಷ್ಮಿನ್ ಕಾ ತ್ವೇತಸ್ಯಾತ್ರ ನಿಷ್ಕೃತಿ ಃ ॥ ೧೬೧
ಏವಮುಕ್ತವತೀಮೇವ ಶಕ್ತಿದೇವೋ ಜಗಾದ ತಾಮ್ ।
ಚಿತ್ರಂ ಬ್ರೂಹಿ ಪ್ರಿಯೇ ಕಾ ತ್ವಂ ದಾಶಜನ್ಮ ಕಥಂ ಚ ತೇ ॥ ೧೬೨
ಅತಿನಿರ್ಬಂಧತಶ್ಚೈವಂ ಪೃಚ್ಛಂತಂ ತಮುವಾಚ ಸಾ ।
ವದಾಮಿ ಗೋಪ್ಯಮಪ್ಯೇತದ್ ವಚನಂ ಮೇ ಕರೋಷಿ ಚೇತ್ ॥ ೧೬೩
ಬಾಢಂ ಪ್ರಿಯೇ ಕರೋಮೀತಿ ತೇನೋಕ್ತೇ ಶಪಥೋತ್ತರಮ್ ।
ಸಾ ತದೈವಂ ಜಗಾದೈನಮಾದೌ ತಾವತ್ ಸಮೀಹಿತಮ್ ॥ ೧೬೪
ಅಸ್ಮಿನ್ ದ್ವೀಪೇ ದ್ವಿತೀಯಾಪಿ ಭಾರ್ಯಾ ತೇ ಭವಿತಾಧುನಾ ।
ಸಾ ಚಾರ್ಯಪುತ್ರ ನ ಚಿರಾದ್ ಧೃತಗರ್ಭಾ ಭವಿಷ್ಯತಿ ॥ ೧೬೫
ಅಷ್ಟಮೇ ಗರ್ಭಮಾಸೇ ಚ ಪಾಟಯಿತ್ವೋದರಂ ತ್ವಯಾ ।
ತಸ್ಯಾಃ ಸ ಗರ್ಭಃ ಕ್ರಷ್ಟವ್ಯೋ ನೈವ ಕಾರ್ಯಾ ಘೃಣಾತ್ರ ಚ ॥ ೧೬೬

167. ಅವಳು ಹೀಗೆ ಹೇಳಿದಾಗ 'ಇದೇನಿದು ?' ಎಂದು ಅವನಿಗೆ ಆಶ್ಚರ್ಯವಾಯಿತು. ಅವನಲ್ಲಿ ಕರುಣೆಯೂ ಮೂಡಿತು. ಆಗ ಮತ್ತೆ ಆ ಬೆಸ್ತರ ಒಡೆಯನ ಮಗಳು ಹೀಗೆಂದಳು.

168. "ಈ ನನ್ನ ಮಾತನ್ನು ಯಾವುದೇ ಕಾರಣಕ್ಕಾಗಿ ನೀನು ನಡೆಸಲೇಬೇಕು. ಮತ್ತೆ ನಾನು ಯಾರು, ನನಗೇಕೆ ಬೆಸ್ತರಲ್ಲಿ ಜನ್ಮ ಉಂಟಾಯಿತು ಎಂಬುದನ್ನು ಕೇಳಿಸಿಕೋ.

169. ನಾನು ಪೂರ್ವಜನ್ಮದಲ್ಲಿ ಯಾವಳೋ ವಿದ್ಯಾಧರಿ ಆಗಿದ್ದೆನು. ಶಾಪದಿಂದ ಈಗ ಮನುಷ್ಯರ ಈ ಲೋಕಕ್ಕೆ ಜಾರಿ ಬಿದ್ದಿದ್ದೇನೆ.

170. ನಾನು ವಿದ್ಯಾಧರಿಯಾಗಿದ್ದಾಗ ವೀಣೆಗಳಿಗೆ ತಂತಿಗಳನ್ನು ನನ್ನ ಹಲ್ಲುಗಳಿಂದ ಕಡಿದು ಜೋಡಿಸಿದ್ದೆನು. ಅದರಿಂದ ಈಗ ಬೆಸ್ತರ ಮನೆಯಲ್ಲಿ ಹುಟ್ಟಿದ್ದೇನೆ.

171. ಹೀಗೆ ಹಸುಗಳ ಒಣ ಸ್ನಾಯುಗಳನ್ನು ಬಾಯಿಂದ ಮುಟ್ಟಿದ್ದಕ್ಕೇ ಇಂಥ ಅಧೋಗತಿ ನನಗೆ ಒದಗಿದೆ. ಹಸುಗಳ ಮಾಂಸವನ್ನೇ ತಿಂದವರ ಕಥೆ ಏನಾಗಬಹುದು ?"

172. ಹೀಗೆ ಅವಳು ಹೇಳುತ್ತಿದ್ದಾಗಲೇ ಅಲ್ಲಿಗೆ ಗಾಬರಿಯಿಂದ ಬಂದ ಅವಳ ಸೋದರನೊಬ್ಬನು ಶಕ್ತಿದೇವನಿಗೆ ಹೀಗೆ ಹೇಳಿದನು.

---

ಏವಮುಕ್ತವತೀ ತಸ್ಮಿನ್ ಕಿಮೇತದಿತಿ ವಿಸ್ಮಿತೇ ।
ಲಸದ್‌ಘೃಣೇ ಚ ಭೂಯಃ ಸಾ ದಾಶೇಂದ್ರತನಯಾಬ್ರವೀತ್ ॥ ೧೬೭

ಇತ್ಯೇತತ್ತ್ವ ಕರ್ತವ್ಯಂ ಹೇತೋಃ ಕಸ್ಯಾಪಿ ಮದ್ವಚಃ ।
ಅದ್ಯೇದಂ ಶೃಣು ಯಾ ಚಾಹಂ ದಾಶಜನ್ಮ ಯಥಾ ಚ ಮೇ ॥ ೧೬೮

ಅಹಂ ಜನ್ಮಾಂತರೇಽಭೂವಂ ಕಾಪಿ ವಿದ್ಯಾಧರೀ ಪುರಾ ।
ಮರ್ತ್ಯಲೋಕೇ ಚ ಶಾಪೇನ ಪರಿಭ್ರಷ್ಟಾಸ್ಮಿ ಸಾಂಪ್ರತಮ್ ॥ ೧೬೯

ವಿದ್ಯಾಧರತ್ವೇ ಚ ಯದಾ ಛಿತ್ತ್ವಾ ದಂತೈರಯೋಜಯಮ್ ।
ವೀಣಾಸು ತಂತ್ರೀಸ್ತೇನೇಹ ಜಾತಾಹಂ ದಾಶವೇಶ್ಮನಿ ॥ ೧೭೦

ತದೇವಂ ವದನೇ ಸ್ಪೃಷ್ಟೇ ಶುಷ್ಕೇಣ ಸ್ನಾಯುನಾ ಗವಾಮ್ ।
ಈದೃಶ್ಯಧೋಗತಿಃ ಕಾ ತು ವಾರ್ತಾ ತನ್ಮಾಂಸಭಕ್ಷಣೇ ॥ ೧೭೧

ಇತ್ಯೇವಂ ಕಥಯಂತ್ಯಾಂ ಚ ತತ್ರ ತಸ್ಯಾಂ ಸಸಂಭ್ರಮಮ್ ।
ಏಕೋಽಭ್ಯುಪೇತ್ಯ ತದ್‌ಭ್ರಾತಾ ಶಕ್ತಿದೇವಮಭಾಷತ ॥ ೧೭೨

173. "ಏಳು, ಎದ್ದೇಳು. ಎಲ್ಲಿಂದಲೋ ಒಂದು ತುಂಬ ದೊಡ್ಡ ಕಾಡುಹಂದಿ ಎಷ್ಟೋ ಜನರನ್ನು ಕೊಂದುಹಾಕಿ ದರ್ಪದಿಂದ ಈ ಕಡೆಗೆ ಬರುತ್ತಿದೆ."

174. ಆ ಮಾತನ್ನು ಕೇಳಿ ಶಕ್ತಿದೇವನು ತನ್ನ ಭವನದಿಂದ ಇಳಿದು, ಶಕ್ತಿ ಎಂಬ ಆಯುಧವನ್ನು ಕೈಯಲ್ಲಿ ಹಿಡಿದು ಕುದುರೆಯನ್ನೇರಿ ಆ ಕಾಡುಹಂದಿಯನ್ನು ಅಟ್ಟಿಸಿಕೊಂಡು ಹೋದನು.

175. ಅದನ್ನು ಕಂಡಕೂಡಲೇ (ಆಯುಧದಿಂದ) ಹೊಡೆದನು. ಮತ್ತೆ ಆ ವೀರನು ಅಟ್ಟಿಸಿಕೊಂಡು ಬರಲು ಗಾಯಗೊಂಡಿದ್ದ ಕಾಡುಹಂದಿಯು ಓಡಿಹೋಗಿ ಒಂದು ಗವಿಯೊಳಗೆ ನುಗ್ಗಿತು.

176. ಶಕ್ತಿದೇವನೂ ಅಲ್ಲೇ ಅದನ್ನು ಹುಡುಕಿಕೊಂಡು ಒಳಗೆ ಹೋದಾಗ ಒಂದು ಕ್ಷಣದಲ್ಲಿ ಒತ್ತಾಗಿ ಬೆಳೆದಿದ್ದ ತೋಟದ ಮಧ್ಯದಲ್ಲಿದ್ದ ದೊಡ್ಡ ಮನೆಯನ್ನು ಕಂಡನು.

177. ಅಲ್ಲಿ ನಿಂತಾಗ ಪ್ರೀತಿಯಿಂದ ತಾನೇ ಸಂಭ್ರಮದಿಂದ ಬಂದ ವನದೇವತೆಯೋ ಎಂಬಂತಿದ್ದ ಅದ್ಭುತಾಕಾರದ ಒಬ್ಬಳು ಕನ್ಯೆಯನ್ನು ಕಂಡನು.

178. "ಮಂಗಳಾಂಗಿ, ನೀನು ಯಾರು ? ನಿನಗೆ ಈ ಗಾಬರಿಯೇಕೆ ?" ಎಂದು ಅವಳನ್ನು ಶಕ್ತಿದೇವನು ಕೇಳಿದನು. ಅದನ್ನು ಆಲಿಸಿ ಆ ಸುಂದರಿಯು ಅವನನ್ನು ಕುರಿತು ಹೀಗೆ ನುಡಿದಳು.

---

ಉತ್ತಿಷ್ಠ ಸುಮಹಾನೇಷ ಕುತೋಽಪ್ಯುತ್ಥಾಯ ಸೂಕರಃ ।
ಹತಾನೇಕಜನೋ ದರ್ಪಾದಿತೋಽಭಿಮುಖಮಾಗತಃ ॥ ೧೭೩

ತಚ್ಛ್ರುತ್ವಾ ಸೋಽವತೀರ್ಯೈವ ಶಕ್ತಿದೇವಃ ಸ್ವಹರ್ಮ್ಯತಃ ।
ಆರುಹ್ಯ ಶಕ್ತಿಹಸ್ತೋಽಶ್ವಮಧಾವತ್ ಸೂಕರಂ ಪ್ರತಿ ॥ ೧೭೪

ಪ್ರಜಹಾರ ಚ ದೃಷ್ಟ್ವೈವ ತಸ್ಮಿನ್ ವೀರೇಽಭಿಧಾವತಿ ।
ಪಲಾಯ್ಯ ವ್ರಣಿತಃ ಸೋಽಪಿ ವರಾಹಃ ಪ್ರಾವಿಶದ್ ಬಿಲಮ್ ॥ ೧೭೫

ಶಕ್ತಿದೇವೋಽಪಿ ತತ್ರೈವ ತದನ್ವೇಷೀ ಪ್ರವಿಶ್ಯ ಚ ।
ಕ್ಷಣಾದಪಶ್ಯತ್ ಸಾವಾಸಮುದ್ಯಾನಗಹನಂ ಮಹತ್ ॥ ೧೭೬

ತತ್ರಸ್ಥಶ್ಚ ದದರ್ಶೈಕಾಂ ಕನ್ಯಾಮತ್ಯದ್ಭುತಾಕೃತಿಮ್ ।
ಸಸಂಭ್ರಮಮುಪಾಯಾತಾಂ ಪ್ರೀತ್ಯೈವ ವನದೇವತಾಮ್ ॥ ೧೭೭

ತಾಮಪೃಚ್ಛಚ್ಚ ಕಲ್ಯಾಣಿ ಕಾ ತ್ವಂ ಕಿಂ ಸಂಭ್ರಮಶ್ಚ ತೇ ।
ತಚ್ಛ್ರುತ್ವಾ ಸಾಪಿ ಸುಮುಖೀ ತಮೇವಂ ಪ್ರತ್ಯಭಾಷತ ॥ ೧೭೮

## ಬಿಂದುರೇಖೆಯ ಕಥೆ

179. ""ತೆಂಕಣನಾಡಿಗೆ ಒಡೆಯನಾಗಿರುವ ಚಂಡವಿಕ್ರಮನೆಂಬ ದೊರೆಯಿದ್ದಾನೆ. ಚೆಲುವನೆ, ನಾನು ಅವನ ಬಿಂದುರೇಖೆಯೆಂಬ ಮಗಳಾದ ಒಬ್ಬಳು ಕನ್ಯೆ.
180. ಅಕಸ್ಮಾತ್ತಾಗಿ ಜ್ವಲಿತಲೋಚನನೆಂಬ ಒಬ್ಬ ಪಾಪಿ ದೈತ್ಯನು ಮೋಸದಿಂದ ನನ್ನನ್ನು ಅಪಹರಿಸಿ ಇಂದು ನನ್ನ ತಂದೆಯ ಮನೆಯಿಂದ ಇಲ್ಲಿಗೆ ತಂದನು.
181. ಅವನು ಮಾಂಸಕ್ಕಾಗಿ ಕಾಡುಹಂದಿಯ ರೂಪವನ್ನು ಧರಿಸಿ ಹೊರಗೆ ಹೋಗಿದ್ದನು. ಈಗ ತಾನೆ ಹಸಿದಿದ್ದ ಅವನನ್ನು ಯಾವನೋ ವೀರನು ಶಕ್ತ್ಯಾಯುಧದಿಂದ ತಿವಿದಿದ್ದಾನೆ
182. ಆ ತಿವಿತದಿಂದ ಅವನು ಒಳಗೆ ಬಂದು ಸಾವನ್ನಪ್ಪಿದ್ದಾನೆ. ಆದ್ದರಿಂದ ಕನ್ಯಾತ್ವವನ್ನು ಕಳೆದುಕೊಳ್ಳದೆ ನಾನು ಓಡಿ ಹೊರಗೆ ಬಂದೆನು."
183. ಅದನ್ನು ಕೇಳಿ ಶಕ್ತಿದೇವನು "ರಾಜಕುಮಾರಿ, ಹಾಗಾದರೆ ನಿನಗೆ ಗಾಬರಿಯೇಕೆ ? ಶಕ್ತ್ಯಾಯುಧದಿಂದ ಅವನನ್ನು ಕೊಂದವನು ನಾನೇ" ಎಂದು ಅವಳಿಗೆ ಹೇಳಿದನು.
184. ಆಗ ಅವಳು "ಹಾಗಾದರೆ ನೀನು ಯಾರು ಎಂದು ನನಗೆ ಹೇಳು" ಎಂದಳು. ಅವನು "ನಾನು ಶಕ್ತಿದೇವನೆಂಬ ಬ್ರಾಹ್ಮಣನು" ಎಂದು ಉತ್ತರವನ್ನಿತ್ತನು.

---

ಅಸ್ತಿ ದಕ್ಷಿಣದಿಙ್‌ನಾಥೋ ನೃಪತಿಶ್ಚಂಡವಿಕ್ರಮಃ ।
ತಸ್ಯಾಹಂ ಬಿಂದುರೇಖಾಖ್ಯಾ ಸುತಾ ಸುಭಗ ಕನ್ಯಕಾ ॥ ೧೭೯

ಇಹಾಕಸ್ಮಾಚ್ಚ ಪಾಪೋ ಮಾಂ ದೈತ್ಯೋ ಜ್ವಲಿತಲೋಚನಃ ।
ಅಪಹೃತ್ಯ ಛಲೇನಾದ್ಯ ಪಿತುರಾನೀತವಾನ್ ಗೃಹಾತ್ ॥ ೧೮೦

ಸ ಚಾಮಿಷಾರ್ಥೀ ವಾರಾಹಂ ರೂಪಂ ಕೃತ್ವಾ ಬಹಿರ್ಗತಃ ।
ವಿದ್ಧೋಽದ್ಯೈವ ಕ್ಷುಧಾರ್ತಃ ಸನ್ ಶಕ್ತ್ಯಾ ವೀರೇಣ ಕೇನಚಿತ್ ॥ ೧೮೧

ವಿದ್ಧಮಾತ್ರ ಪ್ರವಿಶ್ಯೇಹ ಪಂಚತಾಮಾಗತಶ್ಚ ಸಃ ।
ತದದೂಷಿತಕೌಮಾರಾ ಪಲಾಯ್ಯಾಹಂ ಚ ನಿರ್ಗತಾ ॥ ೧೮೨

ತಚ್ಛ್ರುತ್ವಾ ಶಕ್ತಿದೇವಸ್ತಾಮೂಚೇ ಕಸ್ತರ್ಹಿ ಸಂಭ್ರಮಃ ।
ಮಯೈವ ಸ ವರಾಹೋ ಹಿ ಹತಃ ಶಕ್ತ್ಯಾ ನೃಪಾತ್ಮಜೇ ॥ ೧೮೩

ತತಃ ಸಾಪ್ಯವದತ್ತರ್ಹಿ ಬ್ರೂಹಿ ಮೇ ಕೋ ಭವಾನಿತಿ ।
ವಿಪ್ರೋಽಹಂ ಶಕ್ತಿದೇವಾಖ್ಯ ಇತಿ ಪ್ರತ್ಯಬ್ರವೀಚ್ಚ ಸಃ ॥ ೧೮೪

185. "ಹಾಗಾದರೆ ನೀನೇ ನನ್ನ ಪತಿ" ಎಂದು ಅವಳು ಹೇಳಿದಾಗ "ಆಗಬಹುದು" ಎಂದು ಹೇಳಿ ಅವಳನ್ನು ಕರೆದುಕೊಂಡು ಗವಿಯ ಬಾಗಿಲಿನಿಂದ ಹೊರಗೆ ಬಂದನು.

186. ಮನೆಗೆ ಹೋಗಿ ತನ್ನ ಹೆಂಡತಿ ಬಿಂದುಮತಿಗೆ ನಡೆದುದೆಲ್ಲವನ್ನೂ ಹೇಳಿ ಅವಳ ಒಪ್ಪಿಗೆಯನ್ನು ಪಡೆದು ಆ ಕುಮಾರಿ ಬಿಂದುಮತಿಯನ್ನೂ ಮದುವೆ ಮಾಡಿಕೊಂಡನು.

187. ಹಾಗೆ ಇಬ್ಬರು ಹೆಂಡತಿಯರೊಡನೆ ಶಕ್ತಿದೇವನು ವಾಸಿಸುತ್ತಿರುವಾಗ ಅವರಿಬ್ಬರಲ್ಲೊಬ್ಬಳಾದ ಬಿಂದುರೇಖೆಯು ಗರ್ಭಿಣಿಯಾದಳು.

188. ಅವಳಿಗೆ ಎಂಟುತಿಂಗಳಾದಾಗ, ಶಕ್ತಿದೇವನ ಮೊದಲನೆಯ ಹೆಂಡತಿ ಬಿಂದುಮತಿಯು ತಾನಾಗಿ ಅವನ ಬಳಿ ಬಂದು ಇಂತೆಂದಳು.

189. "ವೀರನೆ, ನೀನು ನನಗೆ ಹಿಂದೆ ಕೊಟ್ಟಿದ್ದ ಮಾತನ್ನು ನೆನಪಿಸಿಕೋ. ಈಗ ನಿನ್ನ ಎರಡನೆಯ ಹೆಂಡತಿಯ ಬಸುರಿಗೆ ಎಂಟನೆಯ ತಿಂಗಳು.

190. ಆದ್ದರಿಂದ ಹೋಗಿ ಅವಳ ಹೊಟ್ಟೆಯನ್ನು ಸೀಳಿ ಆ ಗರ್ಭವನ್ನು ತೆಗೆದುಕೊಂಡು ಬಾ. ನಿನ್ನ ಸತ್ಯವಚನವನ್ನು ನೀನು ಮೀರಕೂಡದಲ್ಲವೆ ?"

---

ತರ್ಹಿ ತ್ವಮೇವ ಮೇ ಭರ್ತೇತ್ಯುದಿತಃ ಸ ತಯಾ ತತಃ ।
ತಥೇತ್ಯಾದಾಯ ತಾಂ ವೀರೋ ಬಿಲದ್ವಾರೇಣ ನಿರ್ಯಯೌ ॥ ೧೮೫
ಗೃಹಂ ಗತ್ವಾ ಚ ಭಾರ್ಯಾಯೈ ಬಿಂದುಮತ್ಯೈ ನಿವೇದ್ಯ ತತ್ ।
ತದ್ವಿಸೃಷ್ಟಃ ಕುಮಾರೀಂ ತಾಂ ಬಿಂದುರೇಖಾಮುದೂಢವಾನ್ ॥ ೧೮೬
ತತಸ್ತಸ್ಯ ದ್ವಿಭಾರ್ಯಸ್ಯ ಶಕ್ತಿದೇವಸ್ಯ ತಿಷ್ಠತಃ ।
ತತ್ರೈಕಾ ಬಿಂದುರೇಖಾ ಸಾ ಭಾರ್ಯಾ ಗರ್ಭಮಧಾರಯತ್ ॥ ೧೮೭
ಅಷ್ಟಮೇ ಗರ್ಭಮಾಸೇ ಚ ತಸ್ಯಾಃ ಸ್ವೈರಮುಪೇತ್ಯ ತಮ್ ।
ಆದ್ಯಾ ಬಿಂದುಮತೀ ಭಾರ್ಯಾ ಶಕ್ತಿದೇವಮುವಾಚ ಸಾ ॥ ೧೮೮
ವೀರ ತತ್ಸ್ಮರ ಯನ್ಮಹ್ಯಂ ಪ್ರತಿಶ್ರುತಮಭೂತ್ ತ್ವಯಾ ।
ಸೋಽಯಂ ದ್ವಿತೀಯಭಾರ್ಯಾಯಾ ಗರ್ಭಮಾಸೋಽಷ್ಟಮಸ್ತವ ॥ ೧೮೯
ತದ್ಗತ್ವಾ ಗರ್ಭಮೇತಸ್ಯಾ ವಿಪಾಟ್ಯೋದರಮಾಹರ ।
ಅನತಿಕ್ರಮಣೀಯಂ ಹಿ ನಿಜಂ ಸತ್ಯವಚಸ್ತವ ॥ ೧೯೦

191. ಹೀಗೆ ಅವಳು ನುಡಿದಾಗ ಶಕ್ತಿದೇವನು ಪ್ರೀತಿ ಮತ್ತು ಮರುಕಗಳಿಂದ ವ್ಯಾಕುಲನೂ ಪ್ರತಿಜ್ಞೆಗೆ ಕಟ್ಟುಬಿದ್ದವನೂ ಆಗಿ ಒಂದು ಕ್ಷಣ ಉತ್ತರವನ್ನು ನೀಡಲು ಅಶಕ್ತನಾಗಿ ನಿಂತನು.

192. ಮನಸ್ಸಿನಲ್ಲಿ ಆತಂಕವನ್ನು ತುಂಬಿಕೊಂಡು ಅವನು ಬಿಂದುರೇಖೆಯ ಬಳಿಗೆ ಹೋದನು. ಖಿನ್ನನಾಗಿ ಬಂದ ಅವನನ್ನು ನೋಡಿ ಅವಳು ಹೀಗೆಂದಳು.

193. "ಆರ್ಯಪುತ್ರ, ನೀನೇಕೆ ಇಂದು ಕಂಗೆಟ್ಟಿರುವೆ ? ಓ, ಅದು ನನಗೆ ಗೊತ್ತು. ನನ್ನ ಬಸಿರನ್ನು ಕಳಚಿಹಾಕಲು ಬಿಂದುಮತಿ ನಿನ್ನನ್ನು ತೊಡಗಿಸಿದ್ದಾಳೆ.

194. ಆ ಕೆಲಸವನ್ನು ನೀನು ಮಾಡಲೇ ಬೇಕು. ಇದಕ್ಕೆ ಬೇರೆ ಉದ್ದೇಶ ಇದೆ. ಇದರಲ್ಲಿ ಯಾವ ಕ್ರೂರತೆಯೂ ಇಲ್ಲ. ಆದ್ದರಿಂದ ಈ ಕಾರ್ಯದಲ್ಲಿ ಮರುಕಪಡಬೇಡ.

## ದೇವದತ್ತನ ಕಥೆ

195. ನಾಥ, ಈ ವಿಷಯದಲ್ಲಿ ದೇವದತ್ತನ ಈ ಒಂದು ಕಥೆಯನ್ನು ಕೇಳು. ಹಿಂದೆ ಕಂಬುಕವೆಂಬ ಊರಿನಲ್ಲಿ ಹರಿದತ್ತನೆಂಬ ಬ್ರಾಹ್ಮಣನಿದ್ದನು.

196. ಶ್ರೀಮಂತನಾಗಿದ್ದ ಅವನಿಗೆ ದೇವದತ್ತನೆಂಬ ಮಗನಿದ್ದನು. ಚಿಕ್ಕಂದಿನಲ್ಲಿ ಅವನಿಗೆ ವಿದ್ಯೆಗಳನ್ನು ಕಲಿಸಿದ್ದರೂ ಅವನು ಯುವಕನಾಗಿ ಕೇವಲ ಜೂಜಿನ ಚಟಕ್ಕೆ ವಶನಾಗಿದ್ದನು.

---

ಏವಮುಕ್ತಸ್ತಯಾ ಶಕ್ತಿದೇವ ಃ ಸ್ನೇಹಕೃಪಾಕುಲ ಃ ।
ಪ್ರತಿಜ್ಞಾಪರತಂತ್ರಶ್ಚ ಕ್ಷಣಮಾಸೀದನುತ್ತರಃ ॥ ೧೯೧
ಜಾತೋದ್ವೇಗಶ್ಚ ನಿರ್ಗತ್ಯ ಬಿಂದುರೇಖಾಂತಿಕಂ ಯಯೌ ।
ಸಾಪಿ ಖಿನ್ನಮುಪಾಯಾಂತಂ ತಂ ವಿಲೋಕ್ಯೈವಮಬ್ರವೀತ್ ॥ ೧೯೨
ಆರ್ಯಪುತ್ರ ವಿಷಣ್ಣೋಽಸಿ ಕಿಮದ್ಯ ನನು ವೇದ್ಮ್ಯಹಮ್ ।
ಬಿಂದುಮತ್ಯಾ ನಿಯುಕ್ತಸ್ತ್ವಂ ಗರ್ಭಸ್ಯೋತ್ಪಾಟನೇ ಮಮ ॥ ೧೯೩
ತಚ್ಚ ತೇಽವಶ್ಯಕರ್ತವ್ಯಂ ಕಾರ್ಯಂ ಕಿಂಚಿದ್ಧಿ ವಿದ್ಯತೇ ।
ನೃಶಂಸತಾ ಚ ನಾಸ್ತ್ಯತ್ರ ಕಾಚಿತ್ ತನ್ಮಾ ಘೃಣಾಂ ಕೃಥಾ ಃ ॥ ೧೯೪
ತಥಾಹಿ ಶೃಣು ನಾಥಾತ್ರ ದೇವದತ್ತಕಥಾಮಿಮಾಮ್ ।
ಪುರಾಭೂದ್ಧರಿದತ್ತಾಖ್ಯ ಃ ಕಂಬುಕಾಖ್ಯೇ ಪುರೇ ದ್ವಿಜಃ ॥ ೧೯೫
ತಸ್ಯ ಚ ಶ್ರೀಮತಃ ಪುತ್ರಃ ಕೃತವಿದ್ಯೋಽಪಿ ಶೈಶವೇ ।
ದೇವದತ್ತಾಭಿಧಾನೋಽಭೂದ್ ದ್ಯೂತೈಕವ್ಯಸನೀ ಯುವಾ ॥ ೧೯೬

197. ಒಮ್ಮೆ ಅವನು ಜೂಜಿನಲ್ಲಿ ಬಟ್ಟೆ ಮುಂತಾದುವನ್ನೂ ಕಳೆದುಕೊಂಡು ತಂದೆಯ ಮನೆಗೆ ಹೋಗಲಾರದವನಾಗಿ ನಿರ್ಜನವಾಗಿದ್ದ ಒಂದು ದೇವಾಲಯವನ್ನು ಹೊಕ್ಕನು.

198. ಅಲ್ಲಿ ಒಂಟಿಯಾಗಿದ್ದ ದೇವದತ್ತನು ಅನೇಕ ಮಂತ್ರವಿದ್ಯೆಗಳನ್ನು ಸಾಧಿಸಿ ಜಪಮಾಡುತ್ತಿದ್ದ, ಒಬ್ಬೊಂಟಿಗನಾಗಿದ್ದ ಜಾಲಪಾದ ಎಂಬ ಹೆಸರಿನ ಮಹಾವ್ರತಿಯನ್ನು ಕಂಡನು.

199. ಮೆಲ್ಲನೆ ಅವನ ಬಳಿಗೆ ಹೋಗಿ ದೇವದತ್ತನು ನಮಸ್ಕಾರ ಮಾಡಿದನು. ಆ ಜಾಲಪಾದನೂ ಮೌನವನ್ನು ಮುರಿದು ಸ್ವಾಗತವನ್ನು ಹೇಳಿ ಅಭಿನಂದಿಸಿದನು.

200. ಅಲ್ಲಿ ಒಂದು ಕ್ಷಣಕಾಲ ನಿಂತ ದೇವದತ್ತನನ್ನು ಆ ಮಹಾವ್ರತಿಯು 'ನಿನ್ನ ಚಿಂತೆಯ ಕಾರಣವೇನು' ಎಂದು ಕೇಳಿದಾಗ ಅವನು ತನ್ನ ಚಟದಿಂದ ಹಣವನ್ನು ಕಳೆದುಕೊಂಡು ಉಂಟಾದ ವಿಪತ್ತನ್ನು ವಿವರಿಸಿಹೇಳಿದನು.

201. ಆಗ ಆ ಮಹಾವ್ರತಿಯು ದೇವದತ್ತನಿಗಿಂತೆಂದನು "ಮಗನೆ, ಈ ಭೂಮಿಯಲ್ಲಿ (ಜೂಜಿನ) ಚಟಕ್ಕೆ ಬಿದ್ದವರಿಗೆ ಸಾಕಾಗುವಷ್ಟು ಹಣ ಇಲ್ಲ.

202. ನಿನ್ನ ವಿಪತ್ತನ್ನು ಕಳೆದುಕೊಳ್ಳಲು ಇಚ್ಛೆ ಇದ್ದರೆ, ನನ್ನ ಮಾತನ್ನು ಕೇಳು. ವಿದ್ಯಾಧರಪದವಿಯನ್ನು ಪಡೆಯಲು ನಾನು ಪರಿಕರಗಳನ್ನು ಸಿದ್ಧಪಡಿಸಿಕೊಂಡಿದ್ದೇನೆ.

---

ದ್ಯೂತಹಾರಿತವಸ್ತ್ರಾದಿರ್ಗಂತುಂ ನಾಲಂ ಪಿತುರ್ಗೃಹಮ್ ।
ಏಕದಾ ಚ ವಿವೇಶೈಕಂ ಸ ಶೂನ್ಯಂ ದೇವತಾಗೃಹಮ್ ॥ ೧೯೭
ತತ್ರ ಚಾಪಶ್ಯದೇಕಾಕೀ ಸಾಧಿತಾನೇಕಕಾರ್ಮಣಮ್ ।
ಜಪಂತಂ ಜಾಲಪಾದಾಖ್ಯಂ ಮಹಾವ್ರತಿನಮೇಕಕಮ್ ॥ ೧೯೮
ಚಕಾರ ಚ ಶನೈಸ್ತಸ್ಯ ಪ್ರಣಾಮಮುಪಗಮ್ಯ ಸಃ ।
ತೇನಾಪ್ಯಪಾಸ್ತಮೌನೇನ ಸ್ವಾಗತೇನಾಭ್ಯನಂದ್ಯತ ॥ ೧೯೯
ಸ್ಥಿತಃ ಕ್ಷಣಾಚ್ಚ ತೇನೈವ ಪೃಷ್ಟೋ ವೈಧುರ್ಯಕಾರಣಮ್ ।
ಶಶಂಸಾಸ್ಮೈ ಸ್ವವಿಪದಂ ವ್ಯಸನಕ್ಷೀಣವಿತ್ತಜಾಮ್ ॥ ೨೦೦
ತತಸ್ತಂ ಸ ಜಗಾದೈವಂ ದೇವದತ್ತಂ ಮಹಾವ್ರತೀ ।
ನಾಸ್ತಿ ವ್ಯಸನಿನಾಂ ವತ್ಸ ಭುವಿ ಪರ್ಯಾಪ್ತಯೇ ಧನಮ್ ॥ ೨೦೧
ಇಚ್ಛಾ ಚ ವಿಪದಂ ಹಾತುಂ ಯದಿ ತೇ ಕುರು ಮದ್ವಚಃ ।
ವಿದ್ಯಾಧರತ್ವಂ ಪ್ರಾಪ್ತುಂ ಯತ್ ಕೃತಃ ಪರಿಕರೋ ಮಯಾ ॥ ೨೦೨

203. ಒಳ್ಳೆಯ ಲಕ್ಷಣಗಳನ್ನುಳ್ಳವನೆ, ನನ್ನೊಡನೆ ನೀನೂ ಅದನ್ನು ಸಾಧಿಸಿಕೋ ನನ್ನ ಆಜ್ಞೆಯನ್ನು ನೀನು ಸದಾ ಪಾಲಿಸಬೇಕು. ಆಗ ನಿನ್ನ ಕಷ್ಟಗಳೆಲ್ಲ ದೂರವಾಗುತ್ತವೆ.'

204. ಹೀಗೆ ಮಹಾವ್ರತಿಯು ಹೇಳಿದಾಗ ಹಾಗೆಯೇ ಆಗಲಿ ಎಂದು ಪ್ರತಿಜ್ಞೆ ಮಾಡಿ ದೇವದತ್ತನು ಆಗಲೇ ಆ ಮಹಾವ್ರತಿಯ ಪಕ್ಕದಲ್ಲಿ ಸ್ಥಾನವನ್ನು ಸ್ವೀಕರಿಸಿದನು.

205–206. ಮತ್ತೊಂದು ದಿನ ಮಹಾವ್ರತಿಯು ಸ್ಮಶಾನಕ್ಕೆ ಹೋಗಿ ರಾತ್ರಿವೇಳೆಯಲ್ಲಿ ಆಲದ ಮರದ ಕೆಳಗೆ ಪೂಜೆಯನ್ನು ಮಾಡಿ ಪಾಯಸವನ್ನು ನೈವೇದ್ಯ ಮಾಡಿ, ದಿಕ್ಕುಗಳಿಗೆಲ್ಲ ಬಲಿಯನ್ನು ಅರ್ಪಿಸಿ ಅವುಗಳ ಅರ್ಚನೆಯನ್ನೂ ಮುಗಿಸಿ ಪಕ್ಕದಲ್ಲಿದ್ದ ಬ್ರಾಹ್ಮಣ ದೇವದತ್ತನಿಗೆ ಹೀಗೆಂದನು.

207. "ಪ್ರತಿದಿನವೂ ನೀನು ಹೀಗೆ ಪೂಜೆಯನ್ನು ಮಾಡಬೇಕು. "ವಿದ್ಯುತ್ಪ್ರಭೆ, ಈ ಪೂಜೆಯನ್ನು ಸ್ವೀಕರಿಸು' ಎಂದು ಹೇಳಬೇಕು.

208. ಅಲ್ಲಿಂದ ಮುಂದಕ್ಕೆ ನಮ್ಮಿಬ್ಬರಿಗೂ ಸಿದ್ಧಿಯಾಗುವುದು ನಿಶ್ಚಿತ ಎಂದು ನನಗೆ ಗೊತ್ತು" ಎಂದು ಹೇಳಿ ಆ ಮಹಾವ್ರತಿಯು ದೇವದತ್ತನೊಡನೆ ತನ್ನ ಮನೆಯ ಕಡೆಗೆ ಸಾಗಿದನು.

209. ದೇವದತ್ತನು ದಿನವೂ ಆ ಮರದ ಬುಡದ ಬಳಿಗೆ ಹೋಗಿ ಅದೇ ವಿಧಾನದಿಂದ ಅರ್ಚನೆಯನ್ನು ಹಾಗೆಯೇ ಮಾಡುತ್ತಿದ್ದನು.

---

ತತ್ಸಾಧಯ ತ್ವಮಪ್ಯೇತತ್ ಮಯಾ ಸಹ ಸುಲಕ್ಷಣ ।<br>
ಮಚ್ಛಾಸನಂ ತು ಪಾಲ್ಯಂ ತೇ ನಶ್ಯಂತು ವಿಪದಸ್ತವ ॥ ೨೦೩<br>
ಇತ್ಯುಕ್ತೋ ವ್ರತಿನಾ ತೇನ ಪ್ರತಿಶ್ರುತ್ಯ ತಥೇತಿ ತತ್ ।<br>
ಸ ದೇವದತ್ತಸ್ತತ್‌ಪಾರ್ಶ್ವೇ ತದೈವ ಸ್ಥಿತಿಮಗ್ರಹೀತ್ ॥ ೨೦೪<br>
ಅನ್ಯೇದ್ಯುಶ್ಚ ಶ್ಮಶಾನಾಂತೇ ಗತ್ವಾ ವಟತರೋರಧಃ ।<br>
ವಿಧಾಯ ರಜನೌ ಪೂಜಾಂ ಪರಮಾನ್ನಂ ನಿವೇದ್ಯ ಚ ॥ ೨೦೫<br>
ಬಲೀನ್ ದಿಕ್ಷು ಚ ವಿಕ್ಷಿಪ್ಯ ಸಂಪಾದಿತತದರ್ಚನಃ ।<br>
ತಂ ಪಾರ್ಶ್ವವರ್ತಿನಂ ವಿಪ್ರಮುವಾಚ ಸ ಮಹಾವ್ರತೀ ॥ ೨೦೬<br>
ಏವಮೇವ ತ್ವಯಾ ಕಾರ್ಯಮಿಹ ಪ್ರತ್ಯಹಮರ್ಚನಮ್ ।<br>
ವಿದ್ಯುತ್‌ಪ್ರಭೇ ಗೃಹಾಣೇಮಾಂ ಪೂಜಾಮಿತ್ಯಭಿಧಾಯಿನಾ ॥ ೨೦೭<br>
ಅತಃ ಪರಂ ಚ ಜಾನೇಽಹಂ ಸಿದ್ಧಿಶ್ಚೈವಂ ಧ್ರುವಾವಯೋಃ ।<br>
ಇತ್ಯುಕ್ತ್ವಾ ಸ ಯಯೌ ತೇನ ಸಮಂ ಸ್ವನಿಲಯಂ ವ್ರತೀ ॥ ೨೦೮<br>
ಸೋಽಪಿ ನಿತ್ಯಂ ತರೋಸ್ತಸ್ಯ ಮೂಲೇ ಗತ್ವಾ ತಥೈವ ತತ್ ।<br>
ದೇವದತ್ತೋಽರ್ಚನಂ ಚಕ್ರೇ ತಥೈವ ವಿಧಿನಾ ತತಃ ॥ ೨೦೯

210. ಒಮ್ಮೆ ಪೂಜೆಯು ಮುಗಿಯುತ್ತಿದ್ದಂತೆಯೇ, ಆ ಮರವು ಇಬ್ಭಾಗವಾಯಿತು. ಅವನು ನೋಡುತ್ತಿದ್ದಂತೆ ಅಕಸ್ಮಾತ್ತಾಗಿ ಅದರೊಳಗಿನಿಂದ ಒಬ್ಬ ದಿವ್ಯರೂಪದ ಹೆಂಗಸು ಹೊರಗೆ ಬಂದಳು.

211. “ಅಯ್ಯಾ ಸತ್ಪುರುಷನೆ, ಒಳಗೆ ಬಾ, ನಮ್ಮ ಒಡತಿ ನಿನಗೆ ಏನೋ ಹೇಳುತ್ತಾಳೆ.” ಎನ್ನುತ್ತಾ ಆಕೆಯು ಅವನನ್ನು ಆ ಮರದ ಒಳಕ್ಕೆ ಕರೆದುಕೊಂಡು ಹೋದಳು.

212. ಒಳಗೆ ಹೋಗಿ ದೇವದತ್ತನು ಅಲ್ಲಿ ಮಣಿಖಚಿತವಾದ ಮನೆಯನ್ನು ಕಂಡನು. ಅದರೊಳಗೆ ಮಂಚದ ಮೇಲೆ ಕುಳಿತಿದ್ದ ಒಬ್ಬ ಶ್ರೇಷ್ಠ ಮಹಿಳೆಯನ್ನೂ ನೋಡಿದನು.

213–214. ಇವಳು ನಮ್ಮ ಪೂಜೆಯ ರೂಪತಾಳಿದ ಸಿದ್ಧಿ ಇರಬಹುದೇ ಎಂದು ದೇವದತ್ತನು ಚಿಂತಿಸುತ್ತಿರುವಾಗಲೇ ಆ ಶ್ರೇಷ್ಠ ಮಹಿಳೆಯು ಅತಿಥಿಸತ್ಕಾರಕ್ಕಾಗಿ ಎದ್ದು ನಿಂತಳು. ಜಣಜಣಿಸುತ್ತಿದ್ದ ಒಡವೆಗಳ ನಿನಾದದಿಂದ ಅವಳ ಅಂಗಗಳೆಲ್ಲ ಅವನಿಗೆ ಸ್ವಾಗತವನ್ನು ಹೇಳುವಂತಿದ್ದುವು. ಅವಳೇ ಬಂದು ದೇವದತ್ತನನ್ನು ಮಂಚದ ಮೇಲೆ ಕೂಡಿಸಿದಳು.

215. ಅವಳಿಂತು ನುಡಿದಳು "ಮಹಾಭಾಗ, ರತ್ನವರ್ಷ ಎಂಬ ಯಕ್ಷೊಡೆಯನ ಮಗಳು ನಾನು. ನನ್ನ ಹೆಸರು ವಿದ್ಯುತ್ಪ್ರಭಾ.

---

ಏಕದಾ ಚ ಸಪರ್ಯಾಂತೇ ದ್ವಿಧಾಭೂತಾತ್ ತರೋಸ್ತತಃ ।
ಅಕಸ್ಮಾತ್ ಪಶ್ಯತಸ್ತಸ್ಯ ದಿವ್ಯಾ ನಾರೀ ವಿನಿರ್ಯಯೌ ॥ ೨೧೦
ಏಹ್ಯಸ್ಮತ್ಸ್ವಾಮಿನೀ ಭದ್ರ ವಕ್ತಿ ತ್ವಾಮಿತಿ ವಾದಿನೀ ।
ಸಾ ತಂ ಪ್ರವೇಶಯಾಮಾಸ ತಸ್ಯೈವಾಭ್ಯಂತರಂ ತರೋಃ ॥ ೨೧೧
ಸ ಪ್ರವಿಶ್ಯ ದದರ್ಶಾತ್ರ ದಿವ್ಯಂ ಮಣಿಮಯಂ ಗೃಹಮ್ ।
ಪರ್ಯಂಕವರ್ತಿನೀಮೇಕಾಂ ತತ್ರ ಚಾಂತರ್ವರಸ್ತ್ರಿಯಮ್ ॥ ೨೧೨
ರೂಪಿಣೀ ಸಿದ್ಧಿರಸ್ಮಾಕಮಿಯಂ ಸ್ಯಾದಿತಿ ಸ ಕ್ಷಣಾತ್ ।
ಯಾವದ್ ಧ್ಯಾಯತಿ ತಾವತ್ ಸಾ ಕೃತಾತಿಥ್ಯಾ ವರಾಂಗನಾ ॥ ೨೧೩
ರಣಿತಾಭರಣೈರಂಗೈರ್ವಿಹಿತಸ್ವಾಗತೈರಿವ ।
ಉತ್ಥಾಯ ನಿಜಪರ್ಯಂಕೇ ತಮುಪಾವೇಶಯತ್ ಸ್ವಯಮ್ ॥ ೨೧೪
ಜಗಾದ ಚ ಮಹಾಭಾಗ ಸುತಾ ಯಕ್ಷಪತೇರಹಮ್ ।
ಕನ್ಯಾ ಹಿ ರತ್ನವರ್ಷಸ್ಯ ಖ್ಯಾತಾ ವಿದ್ಯುತ್ಪ್ರಭಾಖ್ಯಯಾ ॥ ೨೧೫

216. ಮಹಾವ್ರತಿ ಜಾಲಪಾದನು ನನ್ನನ್ನೇ ಆರಾಧಿಸಿದನು. ಅವನಿಗೆ ಇಷ್ಟಾರ್ಥದ ಸಿದ್ಧಿಯನ್ನು ಇನ್ನೇನು ಕೊಡುವವಳಾಗಿದ್ದೇನೆ. ನೀನಾದರೋ ನನ್ನ ಪ್ರಾಣಗಳಿಗೂ ಒಡೆಯನು.

217. ಆದ್ದರಿಂದ ಅನುರಾಗವನ್ನು ತೋರಿಸುತ್ತಿರುವ ನನ್ನ ಕೈಯನ್ನು ಹಿಡಿ' ಹೀಗೆಂದು ಅವಳು ಹೇಳಿದಾಗ ದೇವದತ್ತನು ಹಾಗೆಯೇ ಮಾಡಿದನು.

218. ಅವನು ಸ್ವಲ್ಪ ಕಾಲ ಅಲ್ಲೇ ಇದ್ದನು. ಅವಳು ಗರ್ಭವನ್ನು ಧರಿಸಿದ ಮೇಲೆ ಮತ್ತೆ ಬರುವೆನೆಂದು ಹೇಳಿ ಆ ಮಹಾವ್ರತಿಯ ಬಳಿಗೆ ತೆರಳಿದನು.

219. ಏನೇನು ನಡೆಯಿತೋ ಅದನ್ನೆಲ್ಲ ಅವನಿಗೆ ಭಯಪಟ್ಟುಕೊಳ್ಳುತ್ತಾ ಹೇಳಿದನು. ಆ ಮಹಾವ್ರತಿಯಾದರೋ ತನ್ನ ಸಿದ್ಧಿಯನ್ನು ಅಪೇಕ್ಷಿಸುವವನಾಗಿ ದೇವದತ್ತನಿಗೆ ಹೇಳಿದನು.

220. "ಸತ್ಪುರುಷನೆ, ನೀನು ಮಾಡಿದುದೆಲ್ಲ ಒಳ್ಳೆಯದಾಯಿತು. ಆದರೆ ನೀನು ಹೋಗಿ ಆ ಯಕ್ಷಿಯ ಹೊಟ್ಟೆಯನ್ನು ಸೀಳಿ ಅದರ ಒಳಗೆ ಇರುವ ಗರ್ಭವನ್ನು ತೆಗೆದುಕೊಂಡು ಬೇಗನೆ ಬಾ."

221. ಹೀಗೆ ಹೇಳಿ ಹಿಂದಿನ ಕರಾರನ್ನು ಜ್ಞಾಪಿಸಿ ಮಹಾವ್ರತಿಯು ದೇವದತ್ತನನ್ನು ಕಳುಹಿಸಿದನು. ದೇವದತ್ತನು ಮತ್ತೆ ತನ್ನ ಪ್ರಿಯೆಯ ಬಳಿಗೆ ತೆರಳಿದನು.

---

ಆರಾಧಯಚ್ಚ ಮಾಮೇಷ ಜಾಲಪಾದೋ ಮಹಾವ್ರತೀ ।
ತಸ್ಯಾರ್ಥಸಿದ್ಧಿದೈವಾಸ್ಮಿ ತ್ವಂ ಪ್ರಾಣೇಷ್ವಪಿ ಮೇ ಪ್ರಭುಃ ॥ ೨೧೬
ತಸ್ಮಾದ್ ದೃಷ್ಟಾನುರಾಗಿಣ್ಯಾಃ ಕುರು ಪಾಣಿಗ್ರಹಂ ಮಮ ।
ಇತ್ಯುಕ್ತಃ ಸ ತಯಾ ಚಕ್ರೇ ದೇವದತ್ತಸ್ತಥೇತಿ ತತ್ ॥ ೨೧೭
ಸ್ಥಿತ್ವಾ ಚ ಕಂಚಿತ್ ಕಾಲಂ ಸ ಗರ್ಭಭಾರೇ ತಯಾ ಧೃತೇ ।
ಜಗಾಮ ಪುನರಾಗಂತುಂ ತಂ ಮಹಾವ್ರತಿನಂ ಪ್ರತಿ ॥ ೨೧೮
ಶಶಂಸ ಚ ಯಥಾವೃತ್ತಂ ತಂ ತಸ್ಮೈ ಸಭಯಂ ತತಃ ।
ಸೋಽಪ್ಯೇವಮಾತ್ಮಸಿದ್ಧ್ಯರ್ಥೀ ಜಗಾದೈನಂ ಮಹಾವ್ರತೀ ॥ ೨೧೯
ಭದ್ರ ಸಾಧು ಕೃತಂ ಕಿಂತು ಗತ್ವಾಸ್ಯಾ ಯಕ್ಷಯೋಷಿತಃ ।
ವಿಪಾಟ್ಯೋದರಮಾಕೃಷ್ಯ ಶೀಘ್ರಂ ಗರ್ಭಂ ತಮಾನಯ ॥ ೨೨೦
ಇತ್ಯುಕ್ತ್ವಾ ಸ್ಮಾರಯಿತ್ವಾ ಚ ವ್ರತಿನಾ ಪೂರ್ವಸಂಗರಮ್ ।
ಪ್ರೇಷಿತಸ್ತೇನ ಭೂಯಸ್ತಾಂ ದೇವದತ್ತೋಽಪ್ಯಗಾತ್ ಪ್ರಿಯಾಮ್ ॥ ೨೨೧

222. ಮಾಡಬೇಕಾದ ಕಾರ್ಯದ ಚಿಂತೆಯಿಂದ ಮನಸ್ಸನ್ನು ಕೆಡಿಸಿಕೊಂಡು ಅವನು ನಿಂತಿರುವಾಗ, ಯಕ್ಷಸ್ತ್ರೀ ವಿದ್ಯುತ್‌ಪ್ರಭೆಯು ತಾನೇ ಅವನಿಗೆ ಹೀಗೆ ಹೇಳಿದಳು.

223. "ಆರ್ಯಪುತ್ರ ನೀನೇಕೆ ವಿಷಣ್ಣನಾಗಿರುವೆಯೆಂದು ನನಗೆ ತಿಳಿದಿದೆ. ಜಾಲಪಾದನು ನಿನಗೆ ನನ್ನ ಗರ್ಭವನ್ನು ಸೀಳಿತರಬೇಕೆಂದು ಆಜ್ಞಾಪಿಸಿದ್ದಾನೆ.

224. ಆದ್ದರಿಂದ ನನ್ನ ಹೊಟ್ಟೆಯನ್ನು ಸೀಳಿ ಈ ಗರ್ಭವನ್ನೆಳೆದುಕೋ. ನೀನು ಹಾಗೆ ಮಾಡದಿದ್ದರೆ, ನಾನೇ ಅದನ್ನು ಮಾಡುತ್ತೇನೆ. ಏಕೆಂದರೆ ಅದರಿಂದ ಆಗಬೇಕಾದ ಕಾರ್ಯವಿದೆ."

225. ಹೀಗೆ ಅವಳು ಹೇಳಿದರೂ ಆ ಬ್ರಾಹ್ಮಣನು ಆ ಕಾರ್ಯವನ್ನು ಮಾಡಲಾರದೆ ಹೋದನು. ಆಗ ಅವಳೇ ಸ್ವಯಂ ಹೊಟ್ಟೆಯನ್ನು ಸೀಳಿಕೊಂಡು ಗರ್ಭವನ್ನು ಹೊರಗೆ ತೆಗೆದಳು.

226. ಹಾಗೆ ಹೊರಗೆ ತೆಗೆದ ಗರ್ಭವನ್ನು ಮುಂದೆ ಬಿಟ್ಟು ಅವಳು ದೇವದತ್ತನಿಗೆ ಹೇಳಿದಳು. "ಇದನ್ನು ತಿನ್ನುವವನಿಗೆ ಇದು ವಿದ್ಯಾಧರಪದವಿಗೆ ಕಾರಣವಾಗುತ್ತದೆ. ಇದನ್ನು ತೆಗೆದುಕೋ."

227. ನಾನು ಹಿಂದೆ ವಿದ್ಯಾಧರಿಯಾಗಿದ್ದು ಶಾಪದಿಂದ ಯಕ್ಷಿಯಾಗಿ ಹುಟ್ಟಿದ್ದೆನು. ನನ್ನ ಶಾಪದ ವಿಮೋಚನೆ ಹೀಗಿತ್ತು. ನನಗೆ ಹಿಂದಿನ ಜನ್ಮದ ಸ್ಮರಣೆಯಿದೆ.

---

ತತ್ರ ತಿಷ್ಠತಿ ಯಾವಚ್ಚ ತದ್ವಿಭಾವನದುರ್ಮನಾಃ ।
ತಾವದ್ವಿದ್ಯುತ್ಪ್ರಭಾ ಸಾ ತಂ ಯಕ್ಷೀ ಸ್ವಯಮಭಾಷತ ॥ ೨೨೨
ಆರ್ಯಪುತ್ರ ವಿಷಣ್ಣೋऽಸಿ ಕಿಮರ್ಥಂ ವಿದಿತಂ ಮಯಾ ।
ಆದಿಷ್ಟಂ ಜಾಲಪಾದೇನ ತವ ಮದ್ಗರ್ಭಪಾಟನಮ್ ॥ ೨೨೩
ತದ್ಗರ್ಭಮೇತಮಾಕರ್ಷ ಪಾಟಯಿತ್ವಾ ಮಮೋದರಮ್ ।
ನ ಚೇತ್ ಸ್ವಯಂ ಕರೋಮ್ಯೇತತ್ ಕುರ್ಯಾಂ ಹ್ಯಸ್ತ್ಯತ್ರ ಕಿಂಚನ ॥ ೨೨೪
ಏವಮ ತಯೋಕ್ತೇ ಸ ಯದಾ ಕರ್ತುಂ ತನ್ನಾಶಕದ್ ದ್ವಿಜಃ ।
ತದಾಕೃಷ್ಟವತೀ ಗರ್ಭಂ ಸಾ ಸ್ವಯಂ ಪಾಟಿತೋದರಾ ॥ ೨೨೫
ತಂ ಚ ಕೃಷ್ಟಂ ಪುರಸ್ಕೃತ್ವಾ ದೇವದತ್ತಂ ತಮಭ್ಯಧಾತ್ ।
ಭೋಕ್ತುರ್ವಿದ್ಯಾಧರತ್ವಸ್ಯ ಕಾರಣಂ ಗೃಹ್ಯತಾಮಯಮ್ ॥ ೨೨೬
ಅಹಂ ಚ ಶಾಪಾದ್ ಯಕ್ಷಿತ್ವೇ ಜಾತಾ ವಿದ್ಯಾಧರೀ ಸತೀ ।
ಅಯಮೀದೃಕ್ ಚ ಶಾಪಾಂತೋ ಮಮ ಜಾತಿಸ್ಮರಾ ಹ್ಯಹಮ್ ॥ ೨೨೭

228. ಈಗ ನಾನು ನನ್ನ ಲೋಕಕ್ಕೆ ಹೋಗುತ್ತಿದ್ದೇನೆ. ಮತ್ತೆ ನಮ್ಮಿಬ್ಬರ ಭೇಟಿ ಆ ಲೋಕದಲ್ಲೇ" ಎಂದು ಹೇಳಿ ವಿದ್ಯುತ್ಪ್ರಭೆಯು ಎಲ್ಲೋ ಹೊರಟುಹೋದಳು.

229. ಮನಸ್ಸಿನಲ್ಲೇ ಕೊರಗುತ್ತಾ ದೇವದತ್ತನು ಆ ಗರ್ಭವನ್ನು ತೆಗೆದುಕೊಂಡು ಆ ಮಹಾವ್ರತಿ ಜಾಲಪಾದನ ಬಳಿಗೆ ಹೋದನು.

230. ಸಿದ್ಧಿಯನ್ನು ತಂದುಕೊಡುವ ಆ ಗರ್ಭವನ್ನು ದೇವದತ್ತನು ಜಾಲಪಾದನಿಗೆ ಕೊಟ್ಟುಬಿಟ್ಟನು. ದುರ್ಲಭವಾದ ವಸ್ತುವಿನಲ್ಲೂ ಸಾಧುಪುರುಷರು ಸ್ವಾರ್ಥವನ್ನು ತೋರಿಸುವುದಿಲ್ಲವಲ್ಲವೆ ?

231. ಆ ಮಹಾವ್ರತಿಯಾದರೋ ಗರ್ಭದ ಮಾಂಸವನ್ನು ಬೇಯಿಸಿ ದೇವದತ್ತನನ್ನು ಭೈರಾವಾರ್ಚನೆಗಾಗಿ ಅಡವಿಗೆ ಕಳುಹಿಸಿಬಿಟ್ಟನು.

232. ಆ ಬ್ರಾಹ್ಮಣನು ಬಲಿಯನ್ನು ಕೊಟ್ಟು ಹಿಂದಕ್ಕೆ ಬಂದು ನೋಡುವುದರೊಳಗೆ ಮಹಾವ್ರತಿಯು ಆ ಮಾಂಸವನ್ನು ಪೂರ್ಣವಾಗಿ ತಾನೇ ತಿಂದುಹಾಕಿದ್ದನು.

233. "ಏನು, ನೀನೇ ಎಲ್ಲವನ್ನೂ ತಿಂದುಹಾಕಿದೆಯಾ ?' ಎಂದು ದೇವದತ್ತನು ಹೇಳುತ್ತಿರುವಾಗಲೇ ಆ ಮೋಸಗಾರ ಜಾಲಪಾದನು ವಿದ್ಯಾಧರನಾಗಿ ಆಕಾಶಕ್ಕೆ ಹಾರಿಹೋದನು.

234. ಮುಗಿಲಿನಂತೆ ಕಪ್ಪಾದ ಖಡ್ಗವನ್ನು ಧರಿಸಿ, ಹಾರ ಕೇಯೂರಗಳಿಂದ ಅಲಂಕೃತನಾಗಿ ಆ ಜಾಲಪಾದನು ಮೇಲಕ್ಕೆ ಹಾರಿಹೋದಾಗ ದೇವದತ್ತನು ಚಿಂತಿಸಲಾರಂಭಿಸಿದನು.

---

ಇದಾನೀಂ ಯಾಮಿ ಧಾಮ ಸ್ವಂ ಸಂಗಮಶ್ಚಾವಯೋಃ ಪುನಃ ।
ತತ್ರೈವೇತ್ಯಭಿಧಾಯೈಷಾ ಕ್ವಾಪಿ ವಿದ್ಯುತ್ಪ್ರಭಾ ಯಯೌ ॥ ೨೭೮
ದೇವದತ್ತೋಽಪಿ ತಂ ಗರ್ಭಂ ಗೃಹೀತ್ವಾ ಖಿನ್ನಮಾನಸಃ ।
ಜಗಾಮ ಜಾಲಪಾದಸ್ಯ ತಸ್ಯ ಸ ವ್ರತಿನೋಽಂತಿಕಮ್ ॥ ೨೭೯
ಉಪಾನಯಚ್ಚ ತಂ ಗರ್ಭಂ ತಸ್ಮೈ ಸಿದ್ಧಿಪ್ರದಾಯಿನಮ್ ।
ಭಜಂತ್ಯಾತ್ಮಂಭರಿತ್ವಂ ಹಿ ದುರ್ಲಭೇಽಪಿ ನ ಸಾಧವಃ ॥ ೨೩೦
ಸೋಽಪಿ ತತ್ಪಾಚಯಿತ್ವೈವ ಗರ್ಭಮಾಂಸಂ ಮಹಾವ್ರತೀ ।
ವ್ಯಸೃಜದ್ದೇವದತ್ತಂ ತಂ ಭೈರವಾರ್ಚಾಕೃತೇಽಟವೀಮ್ ॥ ೨೩೧
ತತೋ ದತ್ತಬಲಿರ್ಯಾವದೇತ್ಯ ಪಶ್ಯತಿ ಸ ದ್ವಿಜಃ ।
ತಾವನ್ಮಾಂಸಮಶೇಷಂ ತದ್ ವ್ರತಿನಾ ತೇನ ಭಕ್ಷಿತಮ್ ॥ ೨೩೨
ಕಥಂ ಸರ್ವಂ ತ್ವಯಾ ಭುಕ್ತಮಿತಿ ಚಾತ್ರಾಸ್ಯ ಜಲ್ಪತಃ ।
ಜಿಹ್ಮೋ ವಿದ್ಯಾಧರೋ ಭೂತ್ವಾ ಜಾಲಪಾದಃ ಖಮುದ್ಯಯೌ ॥ ೨೩೩
ವ್ಯೋಮಶ್ಯಾಮಲನಿಸ್ತ್ರಿಂಶೇ ಹಾರಕೇಯೂರರಾಜಿತೇ ।
ತಸ್ಮಿನ್ನುತ್ಪತಿತೇ ಸೋಽಥ ದೇವದತ್ತೋ ವ್ಯಚಿಂತಯತ್ ॥ ೨೩೪

235. ಅಯ್ಯೋ, ಪಾಪಬುದ್ಧಿಯ ಅವನು ನನ್ನನ್ನು ಹೇಗೆ ವಂಚಿಸಿದನು ! ಅಥವಾ ಅತ್ಯಂತವಾದ ನೇರಬುದ್ಧಿಯು ಯಾರಿಗೆ ತಾನೆ ಸೋಲನ್ನು ತರುವುದಿಲ್ಲ ?

236. ಅವನು ಮಾಡಿದ ಅಪಕಾರಕ್ಕೆ ನಾನು ಪ್ರತೀಕಾರವನ್ನು ಹೇಗೆ ಮಾಡಲಿ ? ವಿದ್ಯಾಧರತ್ವವನ್ನು ಅವನು ಪಡೆದಿದ್ದರೂ ಅವನನ್ನು ಹಿಡಿಯುವುದು ಹೇಗೆ ?

237. ಇದರಲ್ಲಿ ಬೇತಾಳದ ಸಾಧನೆಯನ್ನು ಬಿಟ್ಟರೆ ಬೇರೆ ಉಪಾಯವಿಲ್ಲ. ಎಂದು ನಿಶ್ಚಯಿಸಿ ಅವನು ಅಲ್ಲಿಂದ ರಾತ್ರಿಯಲ್ಲಿ ಸ್ಮಶಾನಕ್ಕೆ ಹೋದನು.

238. ಅಲ್ಲಿ ಮರದ ಕೆಳಗೆ ಮನುಷ್ಯನ ಹೆಣದಲ್ಲಿ ಬೇತಾಳನನ್ನು ಆಹ್ವಾನಿಸಿ, ಪೂಜಿಸಿ ಅವನಿಗೆ ಮನುಷ್ಯಮಾಂಸದ ಬಲಿಯನ್ನು ಕೊಟ್ಟನು.

239. ಆ ಬೇತಾಳನಿಗೆ ತೃಪ್ತಿಯಾಗಲಿಲ್ಲ. ಬೇರೆಯವರ ಮಾಂಸವನ್ನು ತರುವವರೆಗೂ ಕಾಯುವ ಸಹನೆಯೂ ಇರಲಿಲ್ಲ. ಆಗ ದೇವದತ್ತನು ಬೇತಾಳನನ್ನು ತೃಪ್ತಿಗೊಳಿಸಲು ತನ್ನ ಮಾಂಸಖಂಡಗಳನ್ನೇ ಕತ್ತರಿಸಿಕೊಡಲಾರಂಭಿಸಿದನು.

240. ಆ ಕ್ಷಣದಲ್ಲಿ ಬೇತಾಳನು ಆ ಮಹಾಸತ್ತ್ವನಾದ ದೇವದತ್ತನಿಗೆ ಹೀಗೆ ಹೇಳಿದನು. ""ನಿನ್ನ ಈ ಬಲದಿಂದ ನಾನು ಸಂತೋಷಪಟ್ಟಿದ್ದೇನೆ. ಇನ್ನು ಸಾಹಸವನ್ನು ಮಾಡಬೇಡ.

---

ಕಷ್ಟಂ ಕೀದೃಗನೇನಾಹಂ ವಂಚಿತಃ ಪಾಪಬುದ್ಧಿನಾ ।
ಯದಿ ವಾತ್ಯಂತಮೃಜುತಾ ನ ಕಸ್ಯ ಪರಿಭೂತಯೇ ॥ ೨೩೫
ತದೇತಸ್ಯಾಪಕಾರಸ್ಯ ಕಥಮದ್ಯ ಪ್ರತಿಕ್ರಿಯಾಮ್ ।
ಕುರ್ಯಾಂ ವಿದ್ಯಾಧರೀಭೂತಮಪ್ಯೇನಂ ಪ್ರಾಪ್ನುಯಾಂ ಕಥಮ್ ॥ ೨೩೬
ತನ್ನಾಸ್ತ್ಯುಪಾಯೋ ವೇತಾಲಸಾಧನಾದಪರೋಽತ್ರ ಮೇ ।
ಇತಿ ನಿಶ್ಚಿತ್ಯ ಸ ಯಯೌ ರಾತ್ರೌ ಪಿತೃವನಂ ತತಃ ॥ ೨೩೭
ತತ್ರಾಹೂಯ ತರೋರ್ಮೂಲೇ ವೇತಾಲಂ ನೃಕಲೇವರೇ ।
ಪೂಜಯಿತ್ವಾಕರೋತ್ತಸ್ಯ ನೃಮಾಂಸಬಲಿತರ್ಪಣಮ್ ॥ ೨೩೮
ಅತೃಪ್ಯಂತಂ ಚ ವೇತಾಲಂ ತಮನ್ಯಾನಯನಾಸಹಮ್ ।
ತರ್ಪಯಿಷ್ಯನ್ ಸ್ವಮಾಂಸಾನಿ ಛೇತ್ತುಮಾರಭತೇ ಸ್ಮ ಸಃ ॥ ೨೩೯
ತತ್ಕ್ಷಣಂ ತಂ ಸ ವೇತಾಲೋ ಮಹಾಸತ್ತ್ವಮಭಾಷತ ।
ಸತ್ತ್ವೇನಾನೇನ ತುಷ್ಟೋಽಸ್ಮಿ ತವ ಮಾ ಸಾಹಸಂ ಕೃಥಾಃ ॥ ೨೪೦

241. ಆದ್ದರಿಂದ ಸಜ್ಜನನೇ, ನಿನಗಾಗಿ ನಾನು ಸಾಧಿಸಬೇಕಾದ ನಿನ್ನ ಇಷ್ಟಾರ್ಥ ಯಾವುದು ?" ಹೀಗೆ ಹೇಳಿದ ಬೇತಾಳನಿಗೆ ಆ ವೀರ ದೇವದತ್ತನು ಉತ್ತರವನ್ನಿತ್ತನು.

242. "ನಂಬಿದವನಿಗೆ ಮೋಸವನ್ನು ಮಾಡಿದ ಆ ಮಹಾವ್ರತಿ ಜಾಲಪಾದನು ಎಲ್ಲಿರುವನೋ ಆ ವಿದ್ಯಾಧರರ ಲೋಕಕ್ಕೆ ಅವನನ್ನು ದಂಡಿಸುವುದಕ್ಕಾಗಿ ನನ್ನನ್ನು ಕರೆದುಕೊಂಡು ಹೋಗು."

243. ಆಗಲಿ ಎಂದು ಹೇಳಿ ಆ ಬೇತಾಳನು ತತ್‌ಕ್ಷಣದಲ್ಲೇ ದೇವದತ್ತನನ್ನು ಹೆಗಲಮೇಲೆ ಕೂಡಿಸಿಕೊಂಡು ಆಕಾಶಮಾರ್ಗದಿಂದ ವಿದ್ಯಾಧರರ ಲೋಕಕ್ಕೆ ಕರೆದೊಯ್ದನು.

244. ಅಲ್ಲಿ ವಿದ್ಯಾಧರರ ರಾಜನ ಪದವಿಯಿಂದ ಗರ್ವಪಡುತ್ತಾ ಅರಮನೆಯೊಳಗೆ ರತ್ನಸಿಂಹಾಸನದ ಮೇಲೆ ಕುಳಿತಿದ್ದ ಜಾಲಪಾದನನ್ನು ದೇವದತ್ತನು ಕಂಡನು.

245. ವಿದ್ಯಾಧರಪದವಿಯನ್ನು ಪಡೆದಿದ್ದ ವಿದ್ಯುತ್‌ಪ್ರಭೆಗೆ ಇಷ್ಟವಿಲ್ಲದಿದ್ದರೂ ಹೆಂಡತಿಯಾಗುವಂತೆ ಬೇರೆಬೇರೆ ರೀತಿಯ ಮಾತುಗಳಿಂದ ವಂಚಿಸಿ ಒಲಿಸಿಕೊಳ್ಳಲು ಆ ಜಾಲಪಾದನು ಯತ್ನಿಸುತ್ತಿದ್ದನು.

246. ಅವನನ್ನು ನೋಡಿದ ಕೂಡಲೇ ಆ ಯುವಕ ದೇವದತ್ತನು ಬೇತಾಳನೊಂದಿಗೆ ಅಟ್ಟಿಸಿಕೊಂಡು ಹೋದನು. ಸಂತೋಷಪಟ್ಟ ವಿದ್ಯುತ್‌ಪ್ರಭೆಯ ಕಣ್ಣುಗಳೆಂಬ ಚಕೋರಗಳಿಗೆ ದೇವದತ್ತನು ಅಮೃತವನ್ನು ಸುರಿಸುವ ಚಂದ್ರನಾದನು.

---

ತದ್‌ಭದ್ರ ಕಿಮಭಿಪ್ರೇತಂ ತವ ಯತ್ ಸಾಧಯಾಮಿ ತೇ ।
ಇತ್ಯುಕ್ತವಂತಂ ವೇತಾಲಂ ಸ ವೀರಃ ಪ್ರತ್ಯುವಾಚ ತಮ್ ॥ ೨೪೧
ವಿಶ್ವಸ್ತವಂಚಕೋ ಯತ್ರ ಜಾಲಪಾದೋ ವ್ರತೀ ಸ್ಥಿತಃ ।
ವಿದ್ಯಾಧರನಿವಾಸಂ ತಂ ನಯ ತನ್ನಿಗ್ರಹಾಯ ಮಾಮ್ ॥ ೨೪೨
ತಥೇತ್ಯುಕ್ತವತಾ ತೇನ ವೇತಾಲೇನ ಸ ತತ್‌ಕ್ಷಣಾತ್ ।
ಸ್ಕಂಧೇಽಧಿರೋಪ್ಯ ನಭಸಾ ನಿನ್ಯೇ ವೈದ್ಯಾಧರಂ ಪದಮ್ ॥ ೨೪೩
ತತ್ರಾಪಶ್ಯಚ್ಚ ತಂ ಜಾಲಪಾದಂ ಪ್ರಾಸಾದವರ್ತಿನಮ್ ।
ಸ ವಿದ್ಯಾಧರರಾಜತ್ವದೃಪ್ತಂ ರತ್ನಾಸನಸ್ಥಿತಮ್ ॥ ೨೪೪
ಪ್ರತಾರಯಂತಂ ತಾಮೇವ ಲಬ್ಧವಿದ್ಯಾಧರೀಪದಾಮ್ ।
ವಿದ್ಯುತ್‌ಪ್ರಭಾಮನಿಚ್ಛಂತೀಂ ಭಾರ್ಯಾರ್ಥೇ ತತ್ತದುಕ್ತಿಭಿಃ ॥ ೨೪೫
ದೃಷ್ಟ್ವೈವ ಚ ಸವೇತಾಲೋಽಭ್ಯಧಾವತ್ ಸ ತಂ ಯುವಾ ।
ಹೃಷ್ಯದ್‌ವಿದ್ಯುತ್‌ಪ್ರಭಾನೇತ್ರಚಕೋರಾಮೃತಚಂದ್ರಮಾಃ ॥ ೨೪೬

247. ಅಕಸ್ಮಾತ್ತಾಗಿ ಬಂದ ದೇವದತ್ತನನ್ನು ನೋಡಿದ ಜಾಲಪಾದನು ಹೆದರಿ ತತ್ತರಿಸಿ ಆಸನದಿಂದ ಕೆಳಗೆ ನೆಲದಮೇಲೆ ಬಿದ್ದನು. ಅವನ ಖಡ್ಗವೂ ಜಾರಿ ಕೆಳಗೆ ಉರುಳಿತು.

248. ದೇವದತ್ತನಿಗೆ ಆ ಖಡ್ಗ ಸಿಕ್ಕಿತು, ಆದರೂ ಅವನು ಜಾಲಪಾದನನ್ನು ಕೊಲ್ಲಲಿಲ್ಲ. ಹೆದರಿಕೊಂಡ ಶತ್ರುಗಳಲ್ಲೂ ಮಹಾಶಯರು ಅನುಕಂಪವನ್ನು ತೋರಿಸುವರಲ್ಲವೆ ?

249. ಜಾಲಪಾದನನ್ನು ಕೊಲ್ಲಲು ಇಷ್ಟಪಟ್ಟ ಬೇತಾಳನಿಗೂ ದೇವದತ್ತನು "ಈ ಅಂಜುಬುರುಕ ಪಾಖಂಡಿಯನ್ನು ಕೊಂದು ನಮಗೇನಾಗಬೇಕಾಗಿದೆ?" ಎಂದು ಹೇಳಿ ತಡೆದನು.

250. "ನೀನು ಇವನನ್ನು ಒಯ್ದು ಭೂಲೋಕದಲ್ಲಿ ಅವನ ಮನೆಯಲ್ಲೇ ಇಡು. ಈ ಪಾಪಿಯು ಅಲ್ಲೇ ಇದ್ದುಕೊಳ್ಳಲಿ. ಕಾಪಾಲಿಕರಿಗಿಂತ ಇವನು ಹೀನನಾಗಿರಲಿ."

251. ಹೀಗೆ ದೇವದತ್ತನು ಹೇಳುತ್ತಿದ್ದ ಕ್ಷಣದಲ್ಲೇ ದೇವಿ ಪಾರ್ವತಿಯು ಸ್ವರ್ಗದಿಂದ ಇಳಿದು ಅವನಿಗೆ ಪ್ರತ್ಯಕ್ಷಳಾದಳು.

252. ನಮಸ್ಕಾರ ಮಾಡಿದ ಅವನಿಗೆ ದೇವಿ ಹೇಳಿದಳು. "ಮಗನೆ, ನಿನ್ನ ವಿಷಯದಲ್ಲಿ ಈಗ ಬೇರೆ ಯಾರಲ್ಲೂ ಇಲ್ಲದ ಸತ್ತ್ವಗುಣದ ಅತಿಶಯದಿಂದ ಪ್ರಸನ್ನಳಾಗಿದ್ದೇನೆ.

---

ಜಾಲಪಾದೋಽಪಿ ಸೋಽಕಸ್ಮಾತ್ತಂ ದೃಷ್ಟ್ವೈವಾಗತಂ ತಥಾ ।
ವಿತ್ರಾಸಾದ್ ಭ್ರಷ್ಟನಿಸ್ತ್ರಿಂಶೋ ನಿಪಪಾತಾಸನಾದ್ ಭುವಿ ॥ ೨೪೭
ದೇವದತ್ತೋಽಪಿ ತತ್‌ಖಡ್ಗಂ ಸ ಲಬ್ಧ್ವಾಪ್ಯವಧೀನ್ನ ತಮ್ ।
ರಿಪುಷ್ವಪಿ ಹಿ ಭೀತೇಷು ಸಾನುಕಂಪಾ ಮಹಾಶಯಾಃ ॥ ೨೪೮
ಜಿಘಾಂಸಂತಂ ಚ ವೇತಾಳಂ ತಂ ಜಗಾದ ಸ ವಾರಯನ್ ।
ಪಾಖಂಡಿನಾ ಕಿಮೇತೇನ ಕೃಪಣೇನ ಹತೇನ ನಃ ॥ ೨೪೯
ಸ್ಥಾಪ್ಯತಾಂ ಭುವಿ ನೀತ್ವಾಯಂ ತಸ್ಮಾತ್ ಸ್ವನಿಲಯೇ ತ್ವಯಾ ।
ಆಸ್ತಾಂ ತತ್ರೈವ ಭೂಯೋಽಪಿ ಪಾಪಃ ಕಾಪಾಲಿಕಾವರಮ್ ॥ ೨೫೦
ಇತ್ಯೇವಂ ವದತಸ್ತಸ್ಯ ದೇವದತ್ತಸ್ಯ ತತ್‌ಕ್ಷಣಮ್ ।
ದಿವೋಽವತೀರ್ಯ ಶರ್ವಾಣೀ ದೇವೀ ಪ್ರತ್ಯಕ್ಷತಾಂ ಯಯೌ ॥ ೨೫೧
ಸಾ ಜಗಾದ ಚ ತಂ ಪ್ರಹ್ವಂ ಪುತ್ರ ತುಷ್ಟಾಸ್ಮಿ ತೇಽಧುನಾ ।
ಅನನ್ಯಸದೃಶೇನೇಹ ಸತ್ತ್ವೋತ್ಕರ್ಷೇಣ ಸಂಪ್ರತಿ ॥ ೨೫೨

253. ಆದ್ದರಿಂದ ವಿದ್ಯಾಧರರ ದೊರೆತನವನ್ನು ಇಲ್ಲೇ ನಿನಗೆ ನೀಡುತ್ತಿದ್ದೇನೆ” ಎಂದು ಹೇಳಿ ಅವನಿಗೆ ವಿದ್ಯೆಗಳನ್ನೆಲ್ಲ ಕೊಟ್ಟು ಕೂಡಲೇ ಅದೃಶ್ಯಳಾದಳು.

254. ಬೇತಾಳನು ಜಾಲಪಾದನನ್ನೊಯ್ದು ಅವನ ಸಿದ್ಧಿಗಳನ್ನೆಲ್ಲ ಕಳಚಿಹಾಕಿ ಭೂಲೋಕದಲ್ಲಿ ಇರಿಸಿದನು. ಅಧರ್ಮವು ಬಹುಕಾಲ ಸಮೃದ್ಧಿಯನ್ನು ತರಲಾರದಷ್ಟೆ

255. ದೇವದತ್ತನು ಆ ವಿದ್ಯುತ್‌ಪ್ರಭೆಯೊಡನೆ ವಿದ್ಯಾಧರರ ರಾಜ್ಯಾಧಿಪತ್ಯವನ್ನು ಪಡೆದುಕೊಂಡು ಅಲ್ಲಿ ವಿಜೃಂಭಣೆಯಿಂದ ಆಳಿದನು.

256. ಹೀಗೆ ಬಿಂದುರೇಖೆಯು ತನ್ನ ಪತಿ ಶಕ್ತಿದೇವನಿಗೆ ಕಥೆಯನ್ನು ಹೇಳಿ ತ್ವರೆಯಿಂದ ಮತ್ತೆ ಮೃದುವಾಗಿ ಮಾತನಾಡುತ್ತಾ ಹೀಗೆಂದಳು.

257. “ಹೀಗೆ ಈ ವಿಧವಾದ ಕಾರ್ಯಗಳಿರುತ್ತವೆ. ಆದ್ದರಿಂದ ಬಿಂದುಮತಿ ಹೇಳಿದಂತೆ ನನ್ನ ಗರ್ಭವನ್ನು ಯಾವ ಶೋಕವೂ ಇಲ್ಲದೆ ಸೀಳಿ ತೆಗೆದುಬಿಡು.”

258. ಹೀಗೆ ಬಿಂದುರೇಖೆ ಹೇಳುತ್ತಿದ್ದರೂ ಶಕ್ತಿದೇವನು ಇದು ಪಾಪ ಎಂದು ಸಂಶಯಪಟ್ಟನು. ಆಗ ಆಕಾಶದಿಂದ ವಾಣಿಯು ಮೊಳಗಿತು.

259. “ಹೇ ಶಕ್ತಿದೇವ, ಯಾವ ಸಂಶಯವನ್ನೂ ಇಟ್ಟುಕೊಳ್ಳದೆ ನೀನು ಇವಳ ಗರ್ಭವನ್ನು ಸೆಳೆದುಹಾಕು. ಅದರ ಕುತ್ತಿಗೆಯನ್ನು ನಿನ್ನ ಮುಷ್ಟಿಯಿಂದ ಹಿಡಿದುಕೊಂಡರೆ ಅದು ಖಡ್ಗವಾಗಿಬಿಡುವುದು”

---

ತದ್ವಿದ್ಯಾಧರರಾಜತ್ವಂ ಮಯಾದತ್ತಮಿಹೈವ ತೇ ।
ಇತ್ಯುಕ್ತ್ವಾರ್ಪಿತವಿದ್ಯಾ ಸಾ ದೇವೀ ಸದ್ಯಸ್ತಿರೋಽಭವತ್ ॥ ೨೫೩
ಜಾಲಪಾದಶ್ಚ ನೀತ್ವೈವ ವೇತಾಲೇನ ಸ ಭೂತಲೇ ।
ವಿಭ್ರಷ್ಟಸಿದ್ಧಿರ್ನಿದಧೇ ನಾಧರ್ಮಶ್ಚಿರಮೃದ್ಧಯೇ ॥ ೨೫೪
ದೇವದತ್ತೋಽಪಿ ಸಹಿತಃ ಸ ವಿದ್ಯುತ್ಪ್ರಭಯಾ ತಯಾ ।
ವಿದ್ಯಾಧರಾಧಿರಾಜ್ಯಂ ತತ್ ಪ್ರಾಪ್ಯ ತತ್ರ ವ್ಯಜೃಂಭತ ॥ ೨೫೫
ಇತ್ಯಾಖ್ಯಾಯ ಕಥಾಂ ಪತ್ಯೇ ಶಕ್ತಿದೇವಾಯ ಸತ್ವರಾ ।
ಸಾ ಬಂಧುರೇಖಾ ಭೂಯಸ್ತಂ ಬಭಾಷೇ ಮೃದುಭಾಷಿಣೀ ॥ ೨೫೬
ಇತೀದೃಂಶಿ ಭವಂತ್ಯೇವ ಕಾರ್ಯಾಣಿ ತದಿದಂ ಮಮ ।
ಬಿಂದುಮತ್ಯುದಿತಂ ಗರ್ಭಂ ಮುಕ್ತಶೋಕಂ ವಿಪಾಟಯ ॥ ೨೫೭
ಇತ್ಯೇವಂ ಬಿಂದುರೇಖಾಯಾಂ ವದಂತ್ಯಾಂ ಪಾಪಶಂಕಿತೇ ।
ಶಕ್ತಿದೇವೇ ಚ ಗಗನಾದುದಭೂತ್ತತ್ರ ಭಾರತೀ ॥ ೨೫೮
ಭೋಃ ಶಕ್ತಿದೇವ ನಿಶ್ಶಂಕಂ ಗರ್ಭೋಽಸ್ಯಾಃ ಕೃಷ್ಯತಾಂ ತ್ವಯಾ ।
ಕಂಠೇ ಮುಷ್ಟ್ಯಾ ಗೃಹೀತೋ ಹಿ ಖಡ್ಗೋಽಸೌ ತೇ ಭವಿಷ್ಯತಿ ॥ ೨೫೯

260. ಈ ದೇವವಾಣಿಯನ್ನು ಕೇಳಿ ಅವನು ಅವಳ ಹೊಟ್ಟೆಯನ್ನು ಬಗೆದು ಅವಳ ಗರ್ಭವನ್ನು ಹೊರಗೆಳೆದು ತನ್ನ ಕೈಯಿಂದ ಆ ಗರ್ಭದ ಕುತ್ತಿಗೆಯನ್ನು ಹಿಡಿದುಕೊಂಡನು.

261. ಹಿಡಿದುಕೊಂಡ ಕೂಡಲೇ ಅದು ಅವನ ಕೈಯಲ್ಲಿ ಖಡ್ಗ ಆಯಿತು. ತನ್ನ ಬಲದಿಂದ ಅವನು ಸೆಳೆದುಕೊಂಡ ಸಿದ್ಧಿಯ ಉದ್ದವಾದ ಕೂದಲಿನ ರಾಶಿಯೋ ಎಂಬಂತೆ ಆ ಖಡ್ಗವಿತ್ತು

262. ಆಗ ಆ ಬ್ರಾಹ್ಮಣ ಶಕ್ತಿದೇವನು ಥಟ್ಟನೆ ವಿದ್ಯಾಧರನಾದನು. ಆ ಕ್ಷಣದಲ್ಲೇ ಬಿಂದುರೇಖೆಯು ಅದೃಶ್ಯಳಾದಳು.

263. ಅದನ್ನು ನೋಡಿ ಶಕ್ತಿದೇವನು ಕೂಡಲೇ ಹೋಗಿ ನಡೆದ ಆ ಎಲ್ಲ ವೃತ್ತಾಂತವನ್ನೂ ಬೆಸ್ತರ ರಾಜನ ಮಗಳಾದ ತನ್ನ ಇನ್ನೊಬ್ಬಳು ಪತ್ನಿ ಬಿಂದುಮತಿಗೆ ತಿಳಿಸಿದನು.

264. ಅವಳು ಅವನಿಗೆ ಹೇಳಿದಳು 'ನಾಥ, ನಾವು ಮೂವರು ವಿದ್ಯಾಧರರ ದೊರೆಯ ಪುತ್ರಿಯರು. ಕನಕಪುರಿಯಿಂದ ಶಾಪದ ಪ್ರಭಾವದಿಂದ ಜಾರಿ ಬಿದ್ದವರು.

265. ಒಬ್ಬಳು ಕನಕರೇಖೆ. ಅವಳ ಶಾಪವಿಮೋಚನೆಯನ್ನು ನೀನೇ ವರ್ಧಮಾನಪುರದಲ್ಲಿ ನೋಡಿರುವೆ. ಅವಳು ತನ್ನ ನಗರಕ್ಕೆ ತೆರಳಿದ್ದಾಳೆ. (ಎರಡನೆಯವಳು ಬಿಂದುರೇಖೆ)

---

ಇತಿ ದಿವ್ಯಾಂ ಗಿರಂ ಶ್ರುತ್ವಾ ಪಾಟಿತೋದರಮಾಶು ಸಃ ।
ಗರ್ಭಂ ತಸ್ಯಾಃ ಸಮಾಕೃಷ್ಯ ಪಾಣಿನಾ ಕಂಠತೋಽಗ್ರಹೀತ್ ॥ ೨೬೦
ಗೃಹೀತಮಾತ್ರೋ ಜಜ್ಞೇ ಚ ಸ ಖಡ್ಗಸ್ತಸ್ಯ ಹಸ್ತಗಃ ।
ಆಕೃಷ್ಟಃ ಸತ್ತ್ವತಃ ಸಿದ್ಧೇಃ ಕೇಶಪಾಶ ಇವಾಯತಃ ॥ ೨೬೧
ತತೋ ವಿದ್ಯಾಧರಃ ಕ್ಷಿಪ್ರಾತ್ ಸ ವಿಪ್ರಃ ಸಮಜಾಯತ ।
ಬಿಂದುರೇಖಾ ಚ ತತ್ಕಾಲಮದರ್ಶನಮಿಯಾಯ ಸಾ ॥ ೨೬೨
ತದ್ ದೃಷ್ಟ್ವಾ ಚ ಸ ಗತ್ವೈವ ದಾಶಪುತ್ರ್ಯೈ ನ್ಯವೇದಯತ್ ।
ಬಿಂದುಮತ್ಯೈ ದ್ವಿತೀಯಸ್ಯೈ ಪತ್ನ್ಯೈ ಸರ್ವಂ ತಥಾವಿಧಃ ॥ ೨೬೩
ಸಾ ತಮಾಹ ವಯಂ ನಾಥ ವಿದ್ಯಾಧರಪತೇ: ಸುತಾಃ ।
ತಿಸ್ರೋ ಭಗಿನ್ಯಃ ಕನಕಪುರೀತಃ ಶಾಪತಶ್ಚ್ಯುತಾಃ ॥ ೨೬೪
ಏಕಾ ಕನಕರೇಖಾ ಸಾ ವರ್ಧಮಾನಪುರೇ ತ್ವಯಾ ।
ಯಸ್ಯಾ ದೃಷ್ಟಃ ಸ ಶಾಪಾಂತಃ ಸಾ ಚ ತಾಂ ಸ್ವಾಂ ಪುರೀಂ ಗತಾ ॥ ೨೬೫

266. ಅವಳ ಶಾಪವಿಮೋಚನೆಯು ವಿಧಿಯ ಆದೇಶದಂತೆ ವಿಚಿತ್ರವಾಗಿತ್ತು. ನಾನು ಮೂರನೆಯವಳು. ನನ್ನ ಶಾಪದ ವಿಮೋಚನೆಯು ಈಗಲೇ ಆಗುವುದು.

267. ನಲ್ಲನೆ, ನಾನು ಈಗಲೇ ನನ್ನದೇ ಆದ ನಗರಕ್ಕೆ ಹೋಗಬೇಕು. ನಮ್ಮ ವಿದ್ಯಾಧರಶರೀರಗಳು ಅಲ್ಲೇ ಇವೆ.

268. ನಮ್ಮ ಹಿರಿಯ ಅಕ್ಕ ಚಂದ್ರಪ್ರಭಾ ಅಲ್ಲೇ ಇದ್ದಾಳೆ. ಆದ್ದರಿಂದ ನೀನು ಅಲ್ಲಿಗೆ ಬೇಗನೆ ಖಡ್ಗದ ಸಿದ್ಧಿಯ ಪ್ರಭಾವದಿಂದ ಬಾ.

269. ಅಲ್ಲಿ ಕಾಡಿನಲ್ಲಿರುವ ನಮ್ಮ ತಂದೆಯು ಅರ್ಪಿಸುವ ನಾಲ್ವರು ಭಾರ್ಯೆಯರಾದ ನಮ್ಮನ್ನೂ ಇನ್ನೂ ಅಧಿಕವಾಗಿ ಹಲವರನ್ನೂ ಪಡೆದು ಕನಕಪುರಿಯಲ್ಲಿ ರಾಜ್ಯವನ್ನು ನಡೆಸುವೆ.'

270. ಹೀಗೆ ಬಿಂದುಮತಿಯು ತನ್ನ ಪರಮಾರ್ಥವನ್ನು ಹೇಳಿದಳು. ಶಕ್ತಿದೇವನು ಅವಳೊಡನೆ ಆಕಾಶಮಾರ್ಗದಲ್ಲಿ ಕನಕಪುರಿಗೆ ಹೋದನು.

---

ಶಾಪಾಂತೋ ಹೀದೃಶಸ್ತಸ್ಯಾಃ ವಿಚಿತ್ರೋ ವಿಧಿಯೋಗತಃ ।
ಅಹಮೇವ ತೃತೀಯಾ ಚ ಶಾಪಾಂತಶ್ಚಾದ್ಯನೈವ ಮೇ ॥ ೨೬೬

ಮಯಾ ಚಾದ್ಯೈವ ಗಂತವ್ಯಾ ನಗರೀ ಸಾ ನಿಜಾ ಪ್ರಿಯ ।
ವಿದ್ಯಾಧರಶರೀರಾಣಿ ತತ್ರೈವಾಸ್ಮಾಕಮಾಸತೇ ॥ ೨೬೭

ಚಂದ್ರಪ್ರಭಾ ಚ ಭಗಿನೀ ಜ್ಯಾಯಸೀ ಹಿ ಸ್ಥಿತಾತ್ರ ನಃ ।
ತದಾಯಾಹಿ ತ್ವಮಪ್ಯಾಶು ಖಡ್ಗಸಿದ್ಧಿಪ್ರಭಾವತಃ ॥ ೨೬೮

ತತ್ರ ಹ್ಯಸ್ಮಾಂಶ್ಚತಸ್ರೋಽಪಿ ಭಾರ್ಯಾಃ ಸಂಪ್ರಾಪ್ಯ ಚಾಧಿಕಾಃ ।
ವನಸ್ಥೇನಾರ್ಪಿತಾಃ ಪಿತ್ರಾ ಪುರಿ ರಾಜ್ಯಂ ಕರಿಷ್ಯಸಿ ॥ ೨೬೯

ಇತಿ ನಿಜಪರಮಾರ್ಥಮುಕ್ತ್ವಾ ಸಮಮನಯಾ ಪುನರೇವ
ಬಿಂದುಮತ್ಯಾ ।
ಅಥ ಕನಕಪುರೀಂ ಸ ಶಕ್ತಿದೇವೋ ಗಗನಪಥೇನ ತಥೇತಿ ತಾಂ
ಜಗಾಮ ॥ ೨೭೦

271–272. ಅಲ್ಲಿ ಹಿಂದೆ ಮೂರು ಮಂಟಪಗಳಲ್ಲಿದ್ದ ಮಂಚದಲ್ಲಿ ಹಾಸಿಗೆಯ ಮೇಲೆ ಯಾವ ನಿರ್ಜೀವವಾಗಿದ್ದ ಹೆಣ್ಣುದೇಹಗಳನ್ನು ನೋಡಿದ್ದನೋ, ಅವುಗಳಲ್ಲಿ ಕ್ರಮಾನುಸಾರವಾಗಿ ಕನಕರೇಖೆ ಮುಂತಾದವರು ಪ್ರವೇಶಿಸಿದರು. ಅಲ್ಲಿಗೆ ಹೋದ ಶಕ್ತಿದೇವನು, ನಮಸ್ಕರಿಸಿದ ಆ ಮೂವರು ನಲ್ಲೆಯರನ್ನೂ ಕಂಡನು.

273. ಹಿರಿಯಕ್ಕ ಚಂದ್ರಪ್ರಭೆ ನಾಲ್ಕನೆಯವಳಾಗಿ ಅಲ್ಲಿ ಮಂಗಳವನ್ನು ರಚಿಸಿ ಶಕ್ತಿದೇವನನ್ನು ದೀರ್ಘಕಾಲಾನಂತರ ಕಂಡುದರಿಂದ ಉತ್ಕಂಠಿತವಾದ ನೋಟದಿಂದ ಕುಡಿಯುತ್ತಿರುವಳೋ ಎಂಬಂತಿದ್ದಳು. ಅವಳನ್ನೂ ಶಕ್ತಿದೇವನು ನೋಡಿದನು.

274. ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿದ್ದ ಸೇವಿಕೆಯರೂ ಅವನ ಬರುವಿಕೆಯನ್ನು ಅಭಿನಂದಿಸುತ್ತಿದ್ದರು. ವಾಸದ ಮನೆಯ ಒಳಗೆ ಬಂದ ಶಕ್ತಿದೇವನಿಗೆ ಚಂದ್ರಪ್ರಭೆ ಇಂತೆಂದಳು.

275. "ನನ್ನ ಚೆಲುವ, ವರ್ಧಮಾನಪುರದಲ್ಲಿ ನೀನು ಯಾವ ರಾಜಪುತ್ರಿ ಕನಕರೇಖೆಯನ್ನು ನೋಡಿದ್ದೆಯೋ, ಅವಳೇ ನನ್ನ ತಂಗಿ ಚಂದ್ರರೇಖೆ.

276. ಮೊದಲು ಉತ್‌ಸ್ಥಲ (ಉತ್ಪಲ) ದ್ವೀಪದಲ್ಲಿ ಬೆಸ್ತರ ಒಡೆಯನ ಮಗಳಾಗಿದ್ದ ಬಿಂದುಮತಿಯನ್ನು ಮದುವೆ ಮಾಡಿಕೊಂಡಿದ್ದೆಯಲ್ಲ, ಅವಳೇ ನನ್ನ ತಂಗಿ ಈ ಶಶಿರೇಖೆ.

---

ತಸ್ಯಾಂ ಚ ಯಾನಿ ಯೋಷಿದ್ವಪೂಂಷಿ ಪರ್ಯಂಕತಲ್ಪವರ್ತೀನಿ ।
ನಿರ್ಜೀವಿತಾನ್ಯಪಶ್ಯತ್ ಪೂರ್ವಂ ತ್ರಿಷು ಮಂಡಪೇಷು ದಿವ್ಯಾನಿ ॥ ೨೭೧

ತಾನಿ ಯಥಾವತ್ ಸ್ವಾತ್ಮಭಿರನುಪ್ರವಿಷ್ಟಾಃ ಸ ಕನಕರೇಖಾದ್ಯಾಃ ।
ಪ್ರಾಪ್ತೋ ಭೂಯಃ ಪ್ರಣತಾ ಅದ್ರಾಕ್ಷೀತ್ತಾ ನಿಜಪ್ರಿಯಾಸ್ತಿಸ್ರಃ ॥ ೨೭೨

ತಾಂ ಚ ಚತುರ್ಥೀಮ್ಯೆಕ್ಷತ ತಜ್ಜ್ಯೇಷ್ಠಾಂ ರಚಿತಮಂಗಲಾಂ ತತ್ರ ।
ಚಂದ್ರಪ್ರಭಾಂ ಪಿಬಂತೀಂ ಚಿರದರ್ಶನಸೋತ್ಕಯಾ ದೃಷ್ಟ್ಯಾ ॥ ೨೭೩

ಸ್ವಸ್ವನಿಯೋಗವ್ಯಾಪೃತಪರಿಜನವನಿತಾಭಿನಂದಿತಾಗಮನಃ ।
ವಾಸಗೃಹಾಂತಃ ಪ್ರಾಪ್ತಶ್ಚಂದ್ರಪ್ರಭಯಾ ತಯಾ ಜಗದೇ ॥ ೨೭೪

ಯಾ ತತ್ರ ಕನಕರೇಖಾ ರಾಜಸುತಾ ಸುಭಗ ವರ್ಧಮಾನಪುರೇ ।
ದೃಷ್ಟಾ ಭವತಾ ಸೇಯಂ ಭಗಿನೀ ಮೇ ಚಂದ್ರರೇಖಾಖ್ಯಾ ॥ ೨೭೫

ಯಾ ದಾಶಾಧಿಪಪುತ್ರೀ ಬಿಂದುಮತೀ ಪ್ರಥಮಮುತ್‌ಸ್ಥಲದ್ವೀಪೇ ।
ಪರಿಣೀತಾಭೂದ್ ಭವತಾ ಶಶಿರೇಖಾ ಮತ್‌ಸ್ವಸಾ ಸೇಯಮ್ ॥ ೨೭೬

277. ಆಮೇಲೆ ರಾಕ್ಷಸನು ಎಳೆದುತಂದಿದ್ದ ರಾಜಪುತ್ರಿ ಬಿಂದುರೇಖೆ ನಿನ್ನ ಪತ್ನಿಯಾಗಿದ್ದಳು. ಅವಳೇ ನನ್ನ ಈ ಇನ್ನೊಬ್ಬಳು ಸೋದರಿ ಶಶಿಪ್ರಭೆ

278. ಧನ್ಯನೇ, ಈಗ ನಮ್ಮ ತಂದೆಯ ಬಳಿಗೆ ನಮ್ಮೊಡನೆ ಬಾ. ಅವನು ದಾನಮಾಡುವ ನಮ್ಮೆಲ್ಲರನ್ನೂ ನೀನು ಮದುವೆ ಮಾಡಿಕೊಳ್ಳುವೆ."

279. ಹೀಗೆ ಮನ್ಮಥನ ಆಜ್ಞೆಯಂತೆ ದಿಟ್ಟವಾಗಿದ್ದ ಮಾತನ್ನು ಆ ಚಂದ್ರಪ್ರಭೆ ಬೇಗಬೇಗನೆ ಹೇಳಿದಳು. ಶಕ್ತಿದೇವನು ಆ ನಾಲ್ವರೊಡನೆ ಕಾಡಿನಲ್ಲಿದ್ದ ಅವರ ತಂದೆಯ ಬಳಿಗೆ ತೆರಳಿದನು.

280. ಆ ವಿದ್ಯಾಧರರ ದೊರೆಯು ತನ್ನ ಕಾಲಿಗೆ ಬಿದ್ದ ಆ ಹೆಣ್ಣುಮಕ್ಕಳಿಂದ ಎಲ್ಲ ವಿಷಯಗಳನ್ನೂ ಅರಿತುಕೊಂಡನು. ದಿವ್ಯವಾಣಿಯ ಪ್ರೇರಣೆಯೂ ಅವನಿಗೆ ಉಂಟಾಯಿತು. ಅವನು ಸಂತುಷ್ಟವಾದ ಮನಸ್ಸಿನಿಂದ ಆ ಎಲ್ಲ ಹೆಣ್ಣುಮಕ್ಕಳನ್ನೂ ಶಕ್ತಿದೇವನಿಗೆ ಒಟ್ಟಿಗೆ (ಮದುವೆ ಮಾಡಿ) ಕೊಟ್ಟನು.

---

ಯಾ ತದನು ಬಿಂದುರೇಖಾ ರಾಜಸುತಾ ತತ್ರ ದಾನವಾನೀತಾ ।
ಭಾರ್ಯಾ ಚ ತೇ ತದಾಭೂಚ್ಛಶಿಪ್ರಭಾ ಸೇಯಮನುಜಾ ಮೇ ॥ ೨೭೭

ತದಿದಾನೀಮೇಹಿ ಕೃತಿನ್ನಸ್ಮತ್ಪಿತುರಂತಿಕಂ ಸಹಾಸ್ಮಾಭಿಃ ।
ತೇನ ಪ್ರತ್ತಾಶ್ಚೈತಾ ದ್ರುತಮಖಿಲಾಃ ಪರಿಣಯಸ್ವಸ್ಮಾನ್ ॥ ೨೭೮

ಇತಿ ಕುಸುಮಶರಾಜ್ಞಾಸಪ್ರಗಲ್ಭಂ ಚ ತಸ್ಯಾಂ
ತ್ವರಿತಮುದಿತವತ್ಯಾಮತ್ರ ಚಂದ್ರಪ್ರಭಾಯಾಮ್ ।
ಅಪಿ ಚತಸೃಭಿರಾಭಿಃ ಸಾಕಮೇತತ್ ಪಿತುಸ್ತ–
ನ್ನಿಕಟಮನುವನಾಂತಂ ಶಕ್ತಿದೇವೋ ಜಗಾಮ ॥ ೨೭೯

ಸ ಚ ಚರಣನತಾಭಿಸ್ತಾಭಿರಾವೇದಿತಾರ್ಥೋ
ದುಹಿತೃಭಿರಖಿಲಾಭಿರ್ದಿವ್ಯವಾಕ್ಪ್ರೇರಿತಶ್ಚ ।
ಯುಗಪದಥ ದದೌ ತಾಃ ಶಕ್ತಿದೇವಾಯ ತಸ್ಮೈ
ಮುದಿತಮತಿರಶೇಷಾಸ್ತತ್ರ ವಿದ್ಯಾಧರೇಂದ್ರಃ ॥ ೨೮೦

281. ಆಮೇಲೆ ಕನಕಪುರಿಯಲ್ಲಿ ಸಮೃದ್ಧವಾದ ತನ್ನ ರಾಜ್ಯವನ್ನೂ ಅವನಿಗೆ ಕೊಟ್ಟು ತನ್ನ ಸಮಸ್ತ ವಿದ್ಯೆಗಳನ್ನೂ ನೀಡಿದನು. ಅಲ್ಲದೆ ಶಕ್ತಿದೇವನಿಗೆ ವಿದ್ಯಾಧರರಿಗೆ ಉಚಿತವಾಗಿದ್ದ ಶಕ್ತಿವೇಗ ಎಂಬ ತನ್ನ ಹೆಸರನ್ನೂ ಇತ್ತು ಅವನನ್ನು ಕೃತಾರ್ಥನನ್ನಾಗಿ ಮಾಡಿದನು.

282. "ಬೇರೆ ಯಾವನೂ ನಿನ್ನನ್ನು ಗೆಲ್ಲಲಾರನು. ಅತಿಪ್ರಭಾವಶಾಲಿಯಾದ ವತ್ಸೇಶ್ವರನಿಂದ ಚಕ್ರವರ್ತಿಯು ಉದ್ಭವಿಸುವನು. ನರವಾಹನದತ್ತನೆಂಬ ಹೆಸರಿನ ಅವನು ನಿಮಗೆಲ್ಲ ಪ್ರಭುವಾಗುವನು. ಅವನಿಗೆ ನೀನು ನಮಸ್ಕಾರವನ್ನು ಮಾಡಬೇಕು"

283. ಎಂದು ಹೇಳಿ ಮಹಾಪ್ರಭಾವಶಾಲಿಯಾಗಿದ್ದ ಶಶಿಖಂಡನೆಂಬ ಹೆಸರಿನ ಆ ವಿದ್ಯಾಧರರಾಜನು ಅಳಿಯನಾಗಿದ್ದ ಶಕ್ತಿದೇವನನ್ನು ಸತ್ಕರಿಸಿ ತನ್ನ ರಾಜಧಾನಿಗೆ ಪ್ರಿಯತಮೆಯರೊಡನೆ ಕಳುಹಿಸಿಕೊಟ್ಟನು.

284. ಆಮೇಲೆ ಶಕ್ತಿವೇಗನು ರಾಜನಾಗಿ ತನ್ನ ಪತ್ನಿಯರೊಡನೆ ಹೋಗಿ ವಿದ್ಯಾಧರರ ಲೋಕದ ಮಂಗಳಮಾಲೆಯಂತಿದ್ದ ಆ ಕನಕಪುರಿಯನ್ನು ಪ್ರವೇಶಿಸಿದನು.

---

ತದನು ಕನಕಪುರ್ಯಾಮೃದ್ಧಮಸ್ಯಾಂ ಸ್ವರಾಜ್ಯಂ
ಸಪದಿ ಸ ವಿತತಾರ ಸ್ವಾಶ್ಚ ವಿದ್ಯಾಃ ಸಮಸ್ತಾಃ ।
ಅಪಿ ಚ ಕೃತಿನಮೇನಂ ಶಕ್ತಿವೇಗಂ ಸ್ವನಾಮ್ನಾ
ವ್ಯಧಿತ ಸಮುಚಿತೇನ ಸ್ವೇಷು ವಿದ್ಯಾಧರೇಷು ॥ ೨೮೧

ಅನ್ಯೋ ನ ಜೇಷ್ಯತಿ ಭವಂತಮತಿಪ್ರಭಾವಾದ್
ವತ್ಸೇಶ್ವರಾತ್ ಪುನರುದೇಷ್ಯತಿ ಚಕ್ರವರ್ತೀ ।
ಯುಷ್ಮಾಸು ಯೋಽತ್ರ ನರವಾಹನದತ್ತನಾಮಾ
ಭಾವೀ ವಿಭುಃ ಸ ತವ ತಸ್ಯ ನತಿಂ ವಿದಧ್ಯಾಃ ॥ ೨೮೨

ಇತ್ಯುಕ್ತವಾಂಶ್ಚ ವಿಸಸರ್ಜ ಮಹಾಪ್ರಭಾವೋ
ವಿದ್ಯಾಧರಾಧಿಪತಿರಾತ್ಮತಪೋವನಾತ್ತಮ್ ।
ಸತ್ಕೃತ್ಯ ಸ ಪ್ರಿಯತಮಂ ನಿಜರಾಜಧಾನೀಂ
ಜಾಮಾತರಂ ಸ ಶಶಿಖಂಡಪದಾಭಿಧಾನಃ ॥ ೨೮೩

ಅಥ ಸೋಽಪಿ ಶಕ್ತಿವೇಗೋ ರಾಜಾ ಭೂತ್ವಾ ವಿವೇಶ ಕನಕಪುರೀಮ್ ।
ಸ್ವವಧೂಭಿಃ ಸಹ ಗತ್ವಾ ವಿದ್ಯಾಧರಲೋಕವೈಜಯಂತೀಂ ತಾಮ್ ॥
೨೮೪

285. ಕನಕಪುರಿಯಲ್ಲಿ ಬಂಗಾರದ ರಚನೆಗಳಿಂದ ಹೊಳೆಯುತ್ತಿದ್ದ ಮನೆಗಳಿದ್ದವು. ಸುಂದರವಾದ ಉದ್ಯಾನಗಳಲ್ಲಿ ರತ್ನದ ಮೆಟ್ಟಿಲುಗಳಿದ್ದ ಬಾವಿಗಳಿದ್ದವು. ಏನೋ ಬಹಳ ಎತ್ತರವಾಗಿದುದ್ದರಿಂದ ವೇಗವಾಗಿ ಬೀಳುತ್ತಿದ್ದ ಸೂರ್ಯನ ಕಿರಣಗಳು ಹೋಗುವಾಗ ಒಟ್ಟಾಗಿ ಉಂಡೆಯಾಗಿ ಬೀಳುತ್ತಿದ್ದವು. ಅಂತಹ ಕನಕಪುರಿಯಲ್ಲಿ ತನ್ನ ನಾಲ್ವರು ಸುಂದರಿಯರಾದ ಪ್ರೇಯಸಿಯರೊಡನೆ ಶಕ್ತಿವೇಗನು ಅತ್ಯಂತ ಸುಖದಿಂದ ವಾಸಿಸಿದನು.

286. ಮಾತಿನಲ್ಲಿ ಚತುರನಾಗಿದ್ದ ಶಕ್ತಿವೇಗನು ವಿಚಿತ್ರವಾಗಿದ್ದ ತನ್ನ ಕಥೆಯನ್ನೇ ಪುನಃ ಹೇಳಿ ವತ್ಸೇಶ್ವರನಿಗೆ ಮತ್ತಿಂತೆಂದನು.

287. "ಚಂದ್ರನ ವಂಶಕ್ಕೆ ಭೂಷಣನಾಗಿರುವ ವತ್ಸರಾಜನೆ, ನಮ್ಮ ಭವಿಷ್ಯದ ಹೊಸ ಚಕ್ರವರ್ತಿಯು ನಿಮ್ಮ ಮಗನಾಗಿ ಹುಟ್ಟಿದ್ದಾನೆ. ಅವನ ಪಾದಯುಗ್ಮದ ದರ್ಶನದಲ್ಲಿ ಅಭಿಲಾಷೆಯನ್ನು ಹೊಂದಿ ಬಂದಿರುವ ನಾನು ಶಕ್ತಿವೇಗನೆಂಬವನು.

288. ಶಿವನ ಅನುಗ್ರಹದಿಂದ, ಮನುಷ್ಯನಾಗಿದ್ದ ನನಗೂ ವಿದ್ಯಾಧರರ ದೊರೆತನವು ದೊರಕಿತು. ರಾಜನೆ, ಈಗ ನನ್ನ ಲೋಕಕ್ಕೆ ನಾನು ಹೋಗುತ್ತಿದ್ದೇನೆ. ನಮ್ಮ ಪ್ರಭುವನ್ನು ನೋಡಿದೆನು. ನಿಮಗೆ ಶಾಶ್ವತ ಮಂಗಳವು ಉಂಟಾಗಲಿ.'

---

ತಸ್ಯಾಂ ತಿಷ್ಠನ್ ಕನಕರಚನಾವಿಸ್ಫುರನ್ಮಂದಿರಾಯಾಮ್
    ಅತ್ಯೌನ್ನತ್ಯಾದಿವ ಪಟುಪತತ್ ಪಿಂಡಿತಾರ್ಕಪ್ರಭಾಯಾಮ್ ।
ವಾಮಾಕ್ಷೀಭಿಶ್ಚತಸೃಭಿರಸೌ ರತ್ನಸೋಪಾನವಾಪೀ—
    ಹೃದ್ಯೋದ್ಯಾನೇಷ್ವಲಭತತರಾಂ ನಿರ್ವೃತಿಂ ಪ್ರೇಯಸೀಭಿಃ ॥ ೨೮೫
ಇತಿ ಕಥಯಿತ್ವಾ ಚರಿತಂ ನಿಜಮೇವ ವಿಚಿತ್ರಮೇಷ ತತ್ಕಾಲಮ್ ।
ನಿಜಗಾದ ಶಕ್ತಿವೇಗೋ ವಾಗ್ಮೀ ವತ್ಸೇಶ್ವರಂ ಭೂಯಃ ॥ ೨೮೬
ತಂ ಮಾಂ ಶಶಾಂಕಕುಲಭೂಷಣ ಶಕ್ತಿವೇಗಂ
    ಜಾನೀಹ್ಯುಪಾಗತಮಿಮಂ ಖಲು ವತ್ಸರಾಜ ।
ಉತ್ಪನ್ನಭಾವಿನಿಜನೂತನಚಕ್ರವರ್ತಿ—
    ಯುಷ್ಮತ್ಸುತಾಂಘ್ರಿಯುಗದರ್ಶನಸಾಭಿಲಾಷಮ್ ॥ ೨೮೭
ಇತ್ಥಂ ಮಯೇಹ ಮನುಜೇನ ಸತಾಪಿ ಲಬ್ಧಾ
    ವಿದ್ಯಾಧರಾಧಿಪತಿತಾ ಪುರಜಿತ್ಪ್ರಸಾದಾತ್ ।
ಗಚ್ಛಾಮಿ ಚಾಹಮಧುನಾ ನೃಪತೇ ಸ್ವಧಾಮ
    ದೃಷ್ಟಃ ಪ್ರಭುರ್ಭವತು ಭದ್ರಮಭಂಗುರಂ ವಃ ॥ ೨೮೮

289. ಇಷ್ಟನ್ನು ಹೇಳಿ ಅಂಜಲಿಬದ್ಧನಾಗಿ ನಮಸ್ಕರಿಸಿ ವತ್ಸರಾಜನ ಅಪ್ಪಣೆಯನ್ನು ಪಡೆದು ಆ ಶಕ್ತಿವೇಗನು ಬೆಳದಿಂಗಳಿನಲ್ಲಿ ತತ್‌ಕ್ಷಣವೇ ಬಾನಿಗೆ ಹಾರಿದನು. ಇಬ್ಬರು ರಾಣಿಯರೊಡನೆ ಮತ್ತು ಗಂಡು ಮಗುವಿನೊಡನೆ ಇದ್ದ ವತ್ಸರಾಜನು ಮಂತ್ರಿಗಳ ಜೊತೆಯಲ್ಲಿ ಆನಂದಮಯವಾಗಿದ್ದ ಅನಿರ್ವಚನೀಯ ಸ್ಥಿತಿಯನ್ನು ಆಗ ಹೊಂದಿದನು.

ಮಹಾಕವಿಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಚತುರ್ದಾರಿಕಾಲಂಬಕದಲ್ಲಿ

ಮೂರನೆಯ ತರಂಗ ಮುಗಿಯಿತು.

ಐದನೆಯದಾದ ಚತುರ್ದಾರಿಕಾಲಂಬಕವು

ಸಮಾಪ್ತ

---

ಇತ್ಯುಕ್ತ್ವಾ ರಚಿತಾಂಜಲೌ ಚ ವದತಿ ಪ್ರಾಪ್ತಾಭ್ಯನುಜ್ಞೇ ತತ–
ಸ್ತಸ್ಮಿನ್ನುತ್ಪತಿತೇ ಮೃಗಾಂಕಮಹಸಿ ದ್ಯಾಂ ಶಕ್ತಿವೇಗೇ ಕ್ಷಣಾತ್ ।
ದೇವೀಭ್ಯಾಂ ಸಹಿತಃ ಸಬಾಲತನಯೋ ವತ್ಸೇಶ್ವರೋ ಮಂತ್ರಿಭಿಃ
ಸಾಕಂ ಕಾಮಪಿ ತತ್ರ ಸಂಮದಮಯೀಂ ಭೇಜೇ ತದಾನೀಂ ದಶಾಮ್ ॥
೨೮೯

ಇತಿ ಮಹಾಕವಿಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಚತುರ್ದಾರಿಕಾಲಂಬಕೇ ತೃತೀಯಸ್ತರಂಗ :

ಸಮಾಪ್ತೋಯಂ ಚತುರ್ದಾರಿಕಾಲಂಬಕಃ ಪಂಚಮಃ

❖ ❖ ❖